# ‘ಪ್ರಾಚೀನ ಕರ್ನಾಟಕದಲ್ಲಿ ಧರ್ಮ ಸಂಘರ್ಷ ಮತ್ತು ಸಮನ್ವಯ’

(ಶಾಸನ ಮತ್ತು ಸಾಹಿತ್ಯ ಅನುಲಕ್ಷಿಸಿ)

(ಪಿಎಚ್.ಡಿ ಪದವಿಗಾಗಿ ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ರಾಮಕೃಷ್ಣ ಜಿ**

ಮಾರ್ಗದರ್ಶಕರು

**ಪ್ರೊ. ಶಿವಗಂಗಾ ರುಮ್ಮಾ**

ನಿರ್ದೇಶಕರು

ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ




CENTRAL UNIVERSITY OF KARNATAKA

ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ

ಮಾನವಿಕ ಮತ್ತು ಭಾಷಾ ನಿಕಾಯ

ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ

ಕಲಬುರಗಿ ೫೮೫೩೬೭

೨೦೧೯

# ಪ್ರಮಾಣ ಪತ್ರ

**‘ಪ್ರಾಚೀನ ಕರ್ನಾಟಕದಲ್ಲಿ ಧರ್ಮ ಸಂಘರ್ಷ ಮತ್ತು ಸಮನ್ವಯ’** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನಾನು **ಪ್ರೊ ಶಿವಗಂಗಾ ರುಮ್ಮಾ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯದ ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಹಿಂದೆ ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಹಾಗೂ ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಆಂಶಿಕವಾಗಿ ಈ ಮೊದಲು ಎಲ್ಲಿಯೂ ಪ್ರಕಟಮಾಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ರಾಮಕೃಷ್ಣ ಜಿ**
ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ,
ಕಲಬುರಗಿ–೫೮೫೩೬೭

ಸ್ಥಳ: ಕಲಬುರಗಿ

ದಿನಾಂಕ:

# ದೃಢೀಕರಣ ಪತ್ರ

**ಶ್ರೀ ರಾಮಕೃಷ್ಣ ಜಿ** ಇವರು **'ಪ್ರಾಚೀನ ಕರ್ನಾಟಕದಲ್ಲಿ ಧರ್ಮ ಸಂಘರ್ಷ ಮತ್ತು ಸಮನ್ವಯ'** ಎಂಬ ವಿಷಯದ ಮೇಲೆ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯದ **ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ** ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗೆ ಸಲ್ಲಿಸಿರುವುದಿಲ್ಲ ಹಾಗೂ ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ಪ್ರೋ. ಶಿವಗಂಗಾ ರುಮ್ಮಾ**
ನಿರ್ದೇಶಕರು
ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ
ಕಲಬುರಗಿ–೫೮೫೩೬೭

ಸ್ಥಳ: ಕಲಬುರಗಿ

ದಿನಾಂಕ:

## ಕೃತಜ್ಞತೆಗಳು

ಮಾರ್ಗದರ್ಶಕರಾದ ಪ್ರೊ. ಶಿವಗಂಗಾ ರುಮ್ಮಾ ಮೇಡಮ್

ಗುರುಗಳಾದ ಡಾ. ಟಿ ಡಿ. ರಾಜಣ್ಣ ಸಾರ್, ಪ್ರೊ. ವಿಕ್ರಮ ವಿಸಾಜಿ ಸಾರ್, ಡಾ. ಸೋಮಶೇಖರ ಅಪ್ಪಗೆರೆ ಸಾರ್,

ಡಾ. ಬಸವರಾಜ ಕೊಡಗುಂಟಿ ಸಾರ್, ಡಾ ವಿಜಯಕುಮಾರ ವಿಶ್ವಮಾನವ ಸಾರ್

ಹಾಗೂ ನನ್ನ ಆತ್ಮೀಯ ಪುಸ್ತಕಾಲಯ...

## **ವಿಶೇಷ ಕೃತಜ್ಞತೆಗಳು**

ಪ್ರೊ. ಭ. ಮಲ್ಲಿಕಾರ್ಜುನ ಸಾರ್

.........ಹಾಗೂ ಎಲ್ಲರಿಗೂ ಎಲ್ಲವಕ್ಕೂ...

## ಪರಿವಿಡಿ

**ಧರ್ಮ** ï ಧರ್ಮವೆಂಬುದು ಭಾವನಾತ್ಮಕ ಅನುಭವ. ಇದರ ಅರ್ಥ ಹೀಗೆಯೆ ಎಂದು ಹೇಳುವುದು ಕಷ್ಟ. ಅರ್ಥ ಹುಡುಕುವುದು ಅಸಾಧ್ಯವಾದರೂ ಕಷ್ಟವೇನೂ ಅಲ್ಲ. ಪ್ರದೇಶದಿಂದ ಪ್ರದೇಶಕ್ಕೆ, ಕಾಲದಿಂದ ಕಾಲಕ್ಕೆ ಧರ್ಮದ ಅರ್ಥವು ಬದಲಾವಣೆ ಹೊಂದುತ್ತದೆ. ಧರ್ಮ ಎನ್ನುವುದು 'ಧೃ' ಎನ್ನುವ ಧಾತುವಿನಿಂದ ಬಂದಿದೆ. ಇದರ ಅರ್ಥ ಧಾರಣೆ ಮಾಡುವುದು ಎಂದು.ಯಾವುದು ಸಮಾಜಕ್ಕೆ ಧಾರಣ ಸಾಮರ್ಥ್ಯವನ್ನು ನೀಡುವುದೋ ಅದು ಧರ್ಮ(ಧಾರಣಾದ್ದರ್ಯ ಇತ್ಯಹು). ಮಾನವ ತನ್ನ ಬದುಕಿನಲ್ಲಿ ವಿಧಿಸಿಕೊಂಡ ಚೌಕಟ್ಟೇ ಮುಂದೆ ಧರ್ಮವಾಗಿ ಬದಲಾಯಿತು. ಧರ್ಮದ ರೂಪ, ಆಚರಣೆಗಳು ವಿಭಿನ್ನವಾದರೂ ಇಡೀ ಪ್ರಪಂಚದಲ್ಲಿರುವ ಧರ್ಮಗಳ ಉದ್ದೇಶ ಮತ್ತು ಸಾರ ಒಂದೇ.

ಋಗ್ವೇದದಲ್ಲಿ ಧರ್ಮ ಪದವು 80 ಸಲ ಬಳಕೆಯಾಗಿದ್ದು, 'ಪಾಲನೆ' ಎನ್ನುವ ಅರ್ಥದಲ್ಲೇ ಬಳಕೆಯಾಗಿದೆ[1]. ಇದಲ್ಲದೆ ವೇದಗಳ ಕಾಲದಲ್ಲಿ 'ಋತ', ಉಪನಿಷತ್ತುಗಳ ಕಾಲದಲ್ಲಿ 'ಅನ್ನ', ಅದರ ನಂತರದಲ್ಲಿ ಈ ಧರ್ಮ ಪದವು ಪ್ರಾಮುಖ್ಯತೆಯನ್ನು ಪಡೆದವು[2]. ಇನ್ನುಳಿದಂತೆ ಧರ್ಮ ಎನ್ನುವುದಕ್ಕೆ ಒಂದೊಂದು ಧರ್ಮವೂ, ಧರ್ಮದವರು ತಮಗನುಸಾರ ಅರ್ಥವನ್ನು ಕಂಡುಕೊಂಡಿದ್ದಾರೆ.ಕೆಲವೊಮ್ಮೆ ಈ ಧರ್ಮ ಪದವು 'ಕರ್ತವ್ಯ' 'ಸ್ವಭಾವ' 'ಗುಣ' ಮುಂತಾದ ಅರ್ಥಗಳಲ್ಲಿಯೂ ಬಳಕೆಯಾಗುವುದುಂಟು.

**"ಕಸವರಮೆಂಬುದು ನೆರೆ ಸೈ**

**ರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ**

**ಕಸವೇಂ ಕಸವರವೇನು**

**ಬ್ಬಸಮಂಬಸವುಲ್ಲದಿರ್ದು"[3]**

ಕವಿರಾಜಮಾರ್ಗದ ಈ ಪದ್ಯ ಓದಿದಾಗಲೆಲ್ಲಾ ಹೊಸ ಅರ್ಥವನ್ನೂ, ಅನುಮಾನಗಳನ್ನು ನನ್ನಲ್ಲಿ ಹುಟ್ಟುಹಾಕುತ್ತಿತ್ತು. 8ನೇ ಶತಮಾನದ ಈ ರಚನೆ ಆಗಿನ ಕಾಲದ ಧಾರ್ಮಿಕ ಪರಿಸ್ಥಿತಿಯನ್ನು ಸೂಚಿಸುತ್ತದೆ. ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷವು ಮೊದಲಿನಿಂದ ಇತ್ತಾದರೂ, ಕಾವು ಪಡೆದುಕೊಂಡದ್ದು ಈ ಕಾಲಘಟ್ಟದಲ್ಲಿ ಎನ್ನಬಹುದು. "ನೀನಾರನ್ನೂ ಕೊಲ್ಲಕೂಡದು"[4] ಎಂದು ಹೇಳುವ ಜಿನಮತವೂ ಕೂಡ ತನ್ನ ಉನ್ನತಿಯ ಕಾಲದಲ್ಲಿ ಇತರ ಮತಗಳ ಮೇಲೆ ದಾಳಿ ಮಾಡುತ್ತದೆ. ಇದು ಮಾತ್ರವೇ ಅಲ್ಲ ಎಂತಂತಹುದೋ ಉನ್ನತ ವಿಚಾರಗಳನ್ನು

ಒಳಗೊಂಡ, ಬಹುತೇಕ ಎಲ್ಲಾ ಧರ್ಮಗಳು ಇದರಲ್ಲಿ ಪಾಲ್ಗೊಂಡಿವೆ. ನಮ್ಮ ನಾಡು ಸರ್ವಧರ್ಮಗಳ ಸಮಾನತೆಯದು ಎಂದೇ ನಾವಿಲ್ಲಿಯವರೆಗೂ ಓದಿಕೊಂಡು ಬಂದದ್ದು. ಈಗೇನೂ ಅದು ಸುಳ್ಳಲ್ಲ. ಆದರೆ ಈ ಸಮಾನತೆಯ ಮಧ್ಯದಲ್ಲೂ ಸಂಘರ್ಷಗಳಿವೆ ಎಂಬುದೇ ನನ್ನಲ್ಲಿ ಕೂತೂಹಲವನ್ನು ಹುಟ್ಟುಹಾಕಿರುವುದು. ನಿಜಕ್ಕೂ ಧರ್ಮವೆಂದರೇನು? ಸಮಾಜಕ್ಕೆ ಇದರ ಅವಶ್ಯಕತೆಯೇನು? ಎಂಬುದನ್ನು ತಿಳಿಯಲು ಮತ್ತು ಈ ಅಧ್ಯಯನ ಮುಗಿಯುವುದರೊಳಗೆ 'ಧರ್ಮ' ಎನ್ನುವುದನ್ನು ನಾನು ಅರ್ಥ ಮಾಡಿಕೊಂಡರೆ ಸಾಕು, ಈ ಅಧ್ಯಯನವು ಸಫಲವಾದಂತೆಯೆ.

ನನ್ನ ಅಧ್ಯಯನದಲ್ಲಿ ಧರ್ಮ ಸಂಘರ್ಷ ಮತ್ತು ಸಮನ್ವಯ ಎರಡರ ಕುರಿತು ವ್ಯಾಪ್ತಿಯನ್ನು ಇಟ್ಟುಕೊಂಡಿರುವೆನಾದರೂ ಸಂಘರ್ಷವನ್ನು ಕುರಿತಂತೆಯೇ ಹೆಚ್ಚಿನ ವ್ಯಾಪ್ತಿಯನ್ನು ಮೀಸಲಿರಿಸಿದ್ದೇನೆ. ಸಂಘರ್ಷದ ಪ್ರಕಾರಗಳನ್ನು ಅರಿತಾಗಲೇ ಸಮನ್ವಯದ ಹಾದಿಗಳನ್ನು ಕಂಡುಕೊಳ್ಳುವುದು ಸರಳವಾಗುವುದು ಎಂಬುದು ಇದರ ಹಿಂದಿರುವ ಕಾರಣಗಳಲ್ಲಿ ಪ್ರಮುಖವಾದದು. ಈ ಧರ್ಮಸಂಘರ್ಷವು ಇದುವರೆವಿಗೂ ಲೆಕ್ಕವಿಲ್ಲದಷ್ಟು ಜೀವಹಾನಿಯನ್ನೂ ಜೀವನ ಹಾನಿಯನ್ನೂ ಮಾಡಿದೆ. ಈ ಸಂಘರ್ಷಕ್ಕೆ ಕಾರಣಗಳೇನು ಎನ್ನುವುದೇ ನನಗೆ ಕುತೂಹಲಕರ ಅಂಶ. ಬಹುತೇಕ ಸಂಘರ್ಷಗಳಲ್ಲಿ ಸಾಮಾನ್ಯರನ್ನು ಇದಕ್ಕೆ ಪ್ರಚೋದಿಸಲಾಗಿದೆಯೇ ಹೊರತು ಸಾಮಾನ್ಯರಿಂದ ಪ್ರಚೋದನೆಗೊಂಡಿರುವುದು ಕಡಿಮೆಯೇ ಎನ್ನಬಹುದು. ಇದುವರೆಗಿನ ನಮ್ಮ ಇತಿಹಾಸದಲ್ಲಿ ನಡೆದಿರಬಹುದಾದ ಅತಿದೊಡ್ಡ ಧಾರ್ಮಿಕ ಸಂಘರ್ಷವೊಂದನ್ನು ದಾಖಲೆಯಾಗಿ ನೀಡುವ ಮೂಲಕ, ಸಂಘರ್ಷಕ್ಕೆ ಕಾರಣಗಳೇನು, ಯಾರು ಯಾರು ಕಾರಣ, ಹೇಗೆ ಆ ಯುದ್ಧಗಳು ನಡೆದವು, ಅದರಿಂದ ಆದ ಪರಿಣಾಮಗಳೇನು ಎನ್ನುವಂತಹ ಇತ್ಯಾದಿ ಇತ್ಯಾದಿ ಅಂಶಗಳನ್ನು ಈಗಿಲ್ಲಿ ಹೇಳುತ್ತೇನೆ. ಈ ಮೂಲಕ ನಾವು ಸಂಘರ್ಷದ ಸಮಗ್ರ ಸ್ವರೂಪವನ್ನು ಅರಿಯಲು ಸಹಾಯಕವಾಗುತ್ತದೆ.

ಈ ಘಟನೆ ನಡೆದದ್ದು ಮಧ್ಯಕಾಲೀನ ಇತಿಹಾಸದ ಆರಂಭದ ಕಾಲಘಟ್ಟ. ಇದುವರೆಗಿನ ಧರ್ಮ ಸಂಬಂಧಿತ ಜಗಳಗಳಲ್ಲಿ ಇದು ದೊಡ್ಡದು. ಮತ್ತು ಅಧಿಕೃತವಾಗಿ ಇದು ಧರ್ಮಯುದ್ಧ. ಇದರ ಕಾಲ 11ನೇ ಶತಮಾನದಿಂದ 14ನೇ ಶತಮಾನ. ಈ ಮುಂದಿನ ವಿವರಣೆಗಳೆಲ್ಲವೂ ವಿಲ್ ಡ್ಯೂರಾಂಟ್‌ರ 'ನಾಗರೀಕತೆಯ ಕತೆ ; ಧರ್ಮಶ್ರದ್ಧೆಯ ಯುಗ 4' ಎಂಬ ಕೃತಿಯಿಂದ ಒದಗಿಸಿಕೊಳ್ಳಲಾಗಿದೆ. ಈ ಧಾರ್ಮಿಕ ಯುದ್ಧಗಳನ್ನು 'ಕ್ರೂಸೇಡ್ಸ್' ಎಂದು ಕರೆಯಲಾಗುತ್ತದೆ. ಇವುಗಳ ಕೇಂದ್ರಸ್ಥಾನ 'ಜೆರುಸಲೇಮ್'. ಕ್ರೈಸ್ತರ ಪವಿತ್ರ ಸ್ಥಳವಾದ ಇದನ್ನು ತುರ್ಕರು ವಶಮಾಡಿಕೊಳ್ಳುವುದೇ ಇದರ ಆರಂಭಕ್ಕೆ ಕಾರಣ. ಹಾಗೆ ವಶಮಾಡಿಕೊಂಡ ತುರ್ಕರು ಅಲ್ಲಿ ಬರುವ ಕ್ರೈಸ್ತ ಯಾತ್ರಾರ್ಥಿಗಳ ಮೇಲೆ ನಡೆಸಿದ ದಬ್ಬಾಳಿಕೆಗಳು ಈ ಯುದ್ಧಗಳಿಗೆ ತತ್‌ಕ್ಷಣದ ಕಾರಣ. ತುರ್ಕರ ವಿರುದ್ಧ ಕ್ರೈಸ್ತರನ್ನು ಒಟ್ಟುಗೂಡಿಸಿದವನು ಪೋಪ್ ಅರ್ಬನ್. ಈತನು 'ಅಷ್ಟೊಂದು ಧೀರ್ಘಕಾಲದ ಸಾಹಸದ ಬಗ್ಗೆ

ಇವನು ಹೆಚ್ಚು ತಿಳುವಳಿಕೆಯುಳ್ಳವನಾಗಿದ್ದ. ಒಂದು ವೇಳೆ ಈ ಯುದ್ಧದ ಸೋಲು ಕ್ರೈಸ್ತ ಧರ್ಮ ಹಾಗೂ ಚರ್ಚಿನ ಮೇಲೆ ತೀವ್ರ ಹಾನಿ ಮಾಡುವುದೆಂದು ಅವನು ಮನಗಂಡಿದ್ದ. ಇದರ ಜೊತೆ ರೋಮ್‌ನಗರದ ರಾಜಧಾನಿತ್ವದಲ್ಲಿ ಸಶಕ್ತ ಕ್ರೈಸ್ತಸಾಮ್ರಾಜ್ಯವೊಂದನ್ನು ಕಟ್ಟುವ ಕನಸುಳ್ಳವನಾಗಿದ್ದ'. ಧರ್ಮಯುದ್ಧಕ್ಕೆ ಸಿದ್ಧವಾದವರ ಮುಂದೆ ಅವನು ಮಾಡಿದ ಭಾಷಣದ ಕೆಲಭಾಗ ಹೀಗಿದೆ "ಜೆರುಸಲೇಂನ ವ್ಯಾಪ್ತಿಯಿಂದ ಹಾಗೂ ಕಾನ್‌ಸ್ಟಾಂಟಿನೋಪಲ್‌ನಿಂದ ಗಂಬೀರವಾದ ಮತ್ತು ಅತ್ಯಂತ ದುಃಖಕರವಾದ ವರದಿಯು ಹರಡಿದೆ. ಅದರ ಪ್ರಕಾರ, ದೇವರಿಂದ ಸಂಪೂರ್ಣವಾಗಿ ಬೇರ್ಪಟ್ಟಿರುವ ಶಾಪಗ್ರಸ್ಥ ಜನಾಂಗವೊಂದು ಕ್ರೈಸ್ತರ ಈ ನಾಡನ್ನು ಹಿಂಸಾತ್ಮಕವಾಗಿ ಆಕ್ರಮಿಸಿಕೊಂಡಿದೆ. ಲೂಟಿ, ಕೊಳ್ಳೆ, ಬೆಂಕಿಗಳಿಂದ ಆ ನಾಡನ್ನು ನಿರ್ಜನವನ್ನಾಗಿ ಮಾಡಿದೆ. ಬಂಧಿಗಳಾದ ಒಂದುಭಾಗ ಜನರನ್ನು ಅವರು ತಮ್ಮ ನಾಡಿಗೆ ಕರೆದುಕೊಂಡು ಹೋಗಿದ್ದು, ಅವರನ್ನು ಕ್ರೂರವಾಗಿ ಹಿಂಸಿಸಿ ಹತ್ಯೆ ಮಾಡಿದ್ದಾರೆ. ದೈವಪೀಠಗಳನ್ನು ಅಪವಿತ್ರಗೊಳಿಸಿ ವಿನಾಶಗೊಳಿಸಿದ್ದಾರೆ" ಎಂದು ಮುಂತಾಗಿ ಅವನು ನೆರೆದಿದ್ದವರನ್ನು ಪ್ರಚೋದಿಸುತ್ತಾನೆ. ಇಷ್ಟೇ ಅಲ್ಲದೆ ಅವರಿಗೆ ಇನ್ನೂ ಮುಂತಾದ ಹಲವು ಆಮಿಷಗಳನ್ನೂ ಸಹ ಒಡ್ಡುತ್ತಾನೆ.

ನಾಲ್ಕು ಶತಮಾನಗಳ ಅವಧಿಯಲ್ಲಿ ಪ್ರಮುಖವಾಗಿ ನಾಲ್ಕು ಧರ್ಮಯುದ್ಧಗಳು ನಡೆದವು. ಅವುಗಳು–

1. ಮೊದಲ ಯುದ್ಧ 1095–99
2. ಎರಡನೆಯ ಯುದ್ಧ 1146–48
3. ಮೂರನೆಯದು 1189–92
4. ನಾಲ್ಕನೆಯದು 1202–04

ಇವಷ್ಟೇ ಅಲ್ಲದೇ ಇದೇ ಪ್ರಚೋದನೆಯಿಂದ ಇನ್ನೂ ಹಲವು ಯುದ್ಧಗಳು ನಡೆದಿದ್ದು ಅವುಗಳನ್ನೂ ಸಹ ಧರ್ಮಯುದ್ಧಗಳು ಎಂದು ಕರೆಯಲಾಗುತ್ತದೆ. ಮೊದಲ ಯುದ್ಧದಲ್ಲಿ ಕ್ರೈಸ್ತರು ಮುನ್ನಡೆ ಗಳಿಸಿದರು. ಅವರು ಜೆರುಸಲೇಮ್ ಅನ್ನು ವಶಪಡಿಸಿಕೊಂಡಾಗ ಅಲ್ಲಿ ನಡೆದ ಕೆಲವು ಪರಿಣಾಮಗಳು ಇಂತಿವೆ.

"ಅನೇಕ ಸಂಖ್ಯೆಯಲ್ಲಿ ಸಾರೆಸನ್ ಜನರ ತಲೆಯನ್ನು ತೆಗೆಯಲಾಯಿತು. ಇತರರನ್ನು ಗೋಪುರದಿಂದ ಧುಮಿಕಿಸಲಾಯಿತು. ಇನ್ನೂ ಕೆಲವರನ್ನು ಹಲವು ದಿನ ಹಿಂಸಿಸಿ ಬೆಂಕಿಯಲ್ಲಿ ಸುಡಲಾಯಿತು. ಬೀದಿ ಬೀದಿಗಳಲ್ಲಿಯೂ ತಲೆಗಳ, ಕೈಗಳ, ಕಾಲುಗಳ ರಾಶಿಯು ತುಂಬಿತು. ಮಹಿಳೆಯರನ್ನು ತಿವಿದು ಸಾಯಿಸಲಾಯಿತು. ಹಸುಗಳನ್ನು ತಾಯಿಯರ ಎದೆಯಿಂದ ಸೆಳೆದು ಗೋಡೆಗಳಿಗೆ ಅಪ್ಪಳಿಸಲಾಯಿತು. ನಗರದಲ್ಲಿ ಉಳಿದಿದ್ದ ಸುಮಾರು 70,000 ಮುಸಲ್ಮಾನರನ್ನು

ಕಗ್ಗೊಲೆ ಮಾಡಲಾಯಿತು. ಯಹೂದಿಗಳನ್ನು ಅವರ ಪ್ರಾರ್ಥನಾ ಮಂದಿರಗಳಿಗೆ ದಬ್ಬಿ ಜೀವಂತವಾಗಿ ಸುಡಲಾಯಿತು..." ಹೀಗೆ ಅಲ್ಲಿ ಯುದ್ಧ ನಂತರ ಸೋತವರನ್ನು ನಡೆಸಿಕೊಳ್ಳಲಾಯಿತು.

ಕೊನೆಗೆ ಎಲ್ಲಾ ಯುದ್ಧಗಳ ನಂತರ ಸುಮಾರು ಕ್ರಿಶ 1202 ರಿಂದ ಈ ಧರ್ಮಯುದ್ಧಗಳಲ್ಲಿ ಕುಸಿತ ಉಂಟಾಯಿತು. ಈ ಯುದ್ಧಗಳ ಪಲಿತಾಂಶವನ್ನು ಹೀಗೆ ಹಿಡಿದಿಡಬಹುದು.

"ಧರ್ಮಯುದ್ಧಗಳು ತಾವು ಪ್ರತಿಪಾದಿಸಿದ್ದ ಉದ್ದೇಶಗಳಿಂದ ವಿಫಲವಾಗಿದ್ದವು. ಎರಡು ಶತಮಾನಗಳ ನಂತರ ಜೆರುಸಲೇಮ್ ಉಗ್ರರಾದ ಮಾಮ್‌ಲುಕ್ಸರ ಅಧೀನದಲ್ಲಿತ್ತು. ಅಲ್ಲಿಗೆ ಕ್ರೈಸ್ತ ಯಾತ್ರಿಕರ ಸಂಖ್ಯೆ ಕಡಿಮೆಯಾಯಿತು. ಅವರು ಮೊದಲಿಗಿಂತಲೂ ಹೆಚ್ಚು ಭಯದಲ್ಲಿದ್ದರು. ಧಾರ್ಮಿಕ ವಿಭಿನ್ನತೆಯ ಬಗೆಗೆ ಒಮ್ಮೆ ಸಹಿಷ್ಣುತೆಯಿಂದಿದ್ದ ಮುಸಲ್ಮಾನ ಬಲಿಷ್ಠ ದೇಶಗಳು, ಆಕ್ರಮಣದಿಂದಾಗಿ ಅಸಹಿಷ್ಣುಗಳಾಗಿದ್ದವು. ನಾಜೂಕು, ಸೂಕ್ಷ್ಮತೆ, ಸೌಕರ್ಯ, ಸುಖಸಾಧನಗಳು, ಶಿಕ್ಷಣ ಹಾಗು ಯುದ್ಧ ಇವುಗಳಲ್ಲಿ ಮುಸಲ್ಮಾನ ನಾಗರೀಕತೆಯು ತಾನು ಕ್ರೈಸ್ತ ನಾಗರೀಕತೆಗಿಂತಲೂ ಉತ್ತಮ ಮತ್ತು ಶ್ರೇಷ್ಠವೆಂದು ತನ್ನನ್ನು ಸಾಬೀತುಪಡಿಸಿಕೊಂಡಿತು. ಸಮಾನ ಉದ್ದೇಶದಿಂದ ಯುರೋಪದಲ್ಲಿ ಶಾಂತಿ ಸಾಧಿಸುವ ಪೋಪರ ಪ್ರಯತ್ನವು, ಧರ್ಮಯುದ್ಧಗಳಿಂದಾಗಿ ಮತ್ತು ರಾಷ್ಟ್ರೀಯವಾದೀ ದೇಶೀಯವಾದೀ ಚಿಂತನೆಗಳಿಂದ ಚೂರು ಚೂರಾಗಿತ್ತು"... ಇಷ್ಟು ಆ ಯುದ್ಧಗಳ ಫಲಿತಾಂಶಗಳ ಸಾರ.

ಈ ಯುದ್ಧಗಳಲ್ಲಿ ಇಡೀ ಯುರೋಪ ಖಂಡ ಮತ್ತು ಅರೇಬಿಯಾಗಳು ಮಾತ್ರವಲ್ಲದೇ ಆಫ್ರಿಕಾದ ಮತ್ತು ಏಷಿಯಾದ ಕೆಲ ಭಾಗಗಳೂ ಸಹ ಪಾಲ್ಗೊಂಡಿದ್ದವು. ಎರಡು ಮಹಾನ್ ಧರ್ಮಗಳಾದ ಇಸ್ಲಾಂ ಮತ್ತು ಕ್ರೈಸ್ತ ಹೀಗೆ ತಮ್ಮ ತಮ್ಮಲ್ಲೇ ಅತಿ ಧೀರ್ಘಕಾಲೀನ ಯುದ್ಧಗಳನ್ನು ಮಾಡಿದವು. ಈ ಯುದ್ಧಗಳು ಅಲ್ಲಿಗೇ ಕೊನೆಗೊಳ್ಳಲಿಲ್ಲ. ಆ ನಂತರವೂ ಅವು ಮುಂದುವರೆದವು. ಮತ್ತು ಬೇರೊಂದು ರೂಪದಲ್ಲಿ ಈಗಲೂ ಸಹ ಮುಂದುವರೆದಿವೆ.

ಜೀವನಾಶ, ದೇವಾಲಯ ನಾಶ, ಆಸ್ತಿನಾಶ, ಮತಾಂತರ ಇವೇ ಮುಂತಾದ ಪ್ರಮುಖ ವಿಷಯಗಳನ್ನಿಟ್ಟುಕೊಂಡು ನನ್ನ ಅಧ್ಯಯನವು ಸಾಗುತ್ತದೆ.ಧರ್ಮ ಸಂಘರ್ಷವೆಂದರೆ ಇಷ್ಟೇ ಅಲ್ಲ, ಇದನ್ನೂ ಮೀರಿದ, ಇದಕ್ಕೂ ಮೀರಿ ಪ್ರಭಾವಿಸಿದ ಅನೇಕ ಸೂಕ್ಷ್ಮಸಂಗತಿಗಳೂ ಇವೆ. ಅವೆಲ್ಲವನ್ನೂ ನನ್ನ ಮಿತಿಗನುಸಾರ ಇಲ್ಲಿ ದಾಖಲಿಸಿದ್ದೇನೆ. ದಾಖಲೆಗೆ ಸಿಗುವಂತಹ ಘಟನೆಗಳೇ ನೂರಾರಿವೆ, ಸಿಗಲಾರದವು ಇವುಗಳಿಗಿಂತ ಹೆಚ್ಚಾಗಿಯೆ ಇರಬಹುದು, ಇರುತ್ತವೆ, ಇರಲೇಬೇಕು

ನಮ್ಮ ಪ್ರಾಚೀನ ಸಾಹಿತ್ಯವು ದರ್ಮವನ್ನು ಬಿಟ್ಟು ಇದ್ದದ್ದು ಕಡಿಮೆ. ಅಂದಿನ ಕವಿಗಳೆಲ್ಲರೂ ತಮ್ಮ ತಮ್ಮ ಧರ್ಮದ ಪ್ರಭಾವಕ್ಕೆ ಒಳಗಾಗಿರುವುದನ್ನು ಅವರ ಕಾವ್ಯಗಳಲ್ಲೆ ನಾವು ಕಾಣುತ್ತೇವೆ. ತಮ್ಮ ಮತ ಪ್ರಚಾರ ವಿಮಾಡುವಲ್ಲಿ ಇವರು ಯಶಸ್ವಿಯಾದರೂ ,ಮತಗಳ ಮದ್ಯೆ ಬಿರುಕು ಮೂಡಲೂ ಸಹ ಅಲ್ಪ ಪ್ರಮಾಣದಲ್ಲಿ ಕಾರಣರಾದರು. ಇದಕ್ಕೆ ಧಾರ್ಮಿಕ ನಾಯಕರುಗಳು ಸಹ ಕೈಜೋಡಿಸಿರುವುದನ್ನು ನಾವು ನೋಡುತ್ತೇವೆ.3

ಪ್ರಾಚೀನ ಕರ್ನಾಟಕದಲ್ಲಿ ಕೇವಲ ಧರ್ಮಸಂಘರ್ಷವೇ ಇತ್ತು ಎಂದು ಬಿಂಬಿಸುವುದು ಈ ಅಧ್ಯಯನದ ಉದ್ದೇಶವಲ್ಲ. ಧರ್ಮಸಮನ್ವಯದ ಪ್ರಸಂಗಗಳೂ ಅನೇಕ ಬರುತ್ತವೆ. ಅವನ್ನೂ ಪ್ರಸಂಗಾನುಸಾರ ಬಳಸಲಾಗುವುದು.ಸಮನ್ವಯವು ಮತ್ತು ಸಂಘರ್ಷವು ಆಯಾ ಕಾಲ ಘಟ್ಟದಲ್ಲಿ ಬೇರೆ ಬೇರೆ ಸ್ವರೂಪದವು ಆಗಿರಬಹುದು. "ಬಹುಧರ್ಮದೇನು ನಿವಹಕ್ಕಾಡುಂಬೊಲ"[5]ಎನ್ನುವ ಮಾತೊಂದು ಶಾಸನಗಳಲ್ಲಿ ಬರುತ್ತದೆ. ಹೀಗೆ ಬಹುಧರ್ಮಗಳು ಇದ್ದುದರಿಂದಲೇ ಸಂಘರ್ಷಗಳು, ಸಮನ್ವಯಗಳು ನಡೆದಿರುತ್ತವೆ. ಈ ಸಂಘರ್ಷವು ನಮ್ಮ ನಾಡಿನಲ್ಲಿ ಮಾತ್ರ ಇರುವಂತದಲ್ಲ. "ನೀನು ನನ್ನಮುಂದೆ ಇತರ ದೇವರುಗಳನ್ನು ಹೊಂದಿರಕೂಡದು"[6] ಎಂದು ದೇವರು ಮೋಸೆಸನಿಗೆ ಹೇಳುವಲ್ಲಿ , ಈ ಸಂಘರ್ಷದ ಸ್ವರೂಪವನ್ನು ಮಧ್ಯಪ್ರಾಚ್ಯದಲ್ಲಿಯೂ ನೋಡಬಹುದು.

ಇನ್ನು ಇದರ ವ್ಯಾಪ್ತಿಯನ್ನು ಕ್ರಿಶ 7ನೇ ಶತಮಾನದ ಕಾಲದಿಂದಲೂ ಹಿಡಿದು , ಸುಮಾರು 16 ನೆಯ ಶತಮಾನದವರೆಗೆ ಎಂದು ಇಟ್ಟುಕೊಳ್ಳಲಾಗಿದೆ. ಸಾಧ್ಯವಾದಷ್ಟು ಕ್ರಿಸ್ತಪೂರ್ವವನ್ನು ಆವರಿಸಲಾಗುವುದು. ಇನ್ನುಳಿದಂತೆ ಕ್ರಿ.ಪೂ 3ನೇ ಶತಮಾನದಿಂದ ಶಾಸನಗಳೂ , ಕ್ರಿ.ಶ 7–8 ನೇ ಶತಮಾನದಿಂದ ಸಾಹಿತ್ಯ ಕೃತಿಗಳು ಲಭ್ಯವಿವೆ. ವಿಜಯನಗರವೆಂಬ ಕರ್ನಾಟಕ ಸಾಮ್ರಾಜ್ಯವು ಕೊನೆಯಾಗುವವರೆಗೂ ಅಧ್ಯಯನಕ್ಕೆ ದಾಖಲೆಗಳನ್ನು ಬಳಸಿಕೊಳ್ಳಲಾಗಿದೆ.

ಈ ಅಧ್ಯಯನಕ್ಕೆ ಶಾಸನ ಮತ್ತು ಹಳಗನ್ನಡ ಕೃತಿಗಳೆರಡನ್ನೂ ಆಕರಗಳನ್ನಾಗಿ ಬಳಸಲಾಗಿದೆ.ಶಾಸನಗಳು ವಾಸ್ತವಕ್ಕೆ ಹತ್ತಿರದವುಗಳಾದ್ದರಿಂದ ಅವುಗಳನ್ನು ಸ್ವಲ್ಪ ವಿಶೇಷವಾಗಿ ಪರಿಗಣಿಸಲಾಗುವುದು.ಆಗಿನ ಸಾಹಿತ್ಯ ಕೃತಿಗಳು 'ಧರ್ಮಾವೃತ'ಗಳಾದ್ದರಿಂದ ಅವುಗಳ ಮೇಲೆಯೇ ನಿಲ್ಲುವುದು ಸ್ವಲ್ಪಕಷ್ಟ.ಆದರೂ ಆ ಕಾಲದ ಧಾರ್ಮಿಕ ಪರಿಸ್ಥಿತಿಯನ್ನು ಪೂರ್ತಿಯಾಗಿ ಅರ್ಥ

ಮಾಡಿಕೊಳ್ಳಬೇಕೆಂದರೆ ಸಾಹಿತ್ಯದ ನೆರವಿಲ್ಲದೆ ಅದು ಆಗದು. ಈ ಕಾರಣ ಶಾಸನ ಮತ್ತು ಸಾಹಿತ್ಯ ಇವೆರಡರ ಅಧ್ಯಯನ ಅತ್ಯಗತ್ಯ.

ಇಂದು ಧರ್ಮವೆಂಬುದು ವೈಚಾರಿಕತೆಯ ಪ್ರಶ್ನೆಗಳಿಗೆ ಬಹಳವಾಗಿಯೆ ಸಿಲುಕಿದೆ.ಎಲ್ಲಾವಕ್ಕೂ ಅದು ಸಮಾಧಾನ ಹೇಳಬೇಕಿದೆ.ಈ ಧರ್ಮ ಕುರಿತಂತೆ ಹಲವು ಸಂಘರ್ಷಗಳು ನನ್ನೊಳಗೆ ನಡೆಯುತ್ತಿವೆ. ಅವುಗಳಿಗೂ ಒಂದು ಅಲ್ಪವಿರಾಮ ಹಾಕಬೇಕಿದೆ.

ಪ್ರಾದೇಶಿಕ ವ್ಯಾಪ್ತಿ ಕರ್ನಾಟಕ ಎಂಬುದು ಆಯಾಕಾಲಕ್ಕೆ ಅನ್ವಯಿಸುವಂತದ್ದು .ಅಂದರೆ ಕನ್ನಡ ಮಾತನಾಡುವಂತದ್ದೋ, ಕರ್ನಾಟಕದ ಅರಸರು ಆಳುವಂತದ್ದೋ, ಇಲ್ಲವೇ ಯಾವುದಾದರೂ ರೀತಿಯಲ್ಲಿ ಕರ್ನಾಟಕ ಎಂದು ಕರೆಸಿಕೊಂಡಿದ್ದನ್ನು ಇಲ್ಲಿ ವ್ಯಾಪ್ತಿಯಲ್ಲಿ ಇಟ್ಟುಕೊಳ್ಳಲಾಗಿದೆ.

ಕರ್ನಾಟಕದ ಅತ್ಯಂತ ಪ್ರಾಚೀನಧರ್ಮ ನಾಗಪೂಜೆ[4]. ಕರ್ನಾಟಕದಲ್ಲಿ ಶೈವವೂ ಸಹ ಪ್ರಾಚೀನ ಆಗುವ ಸಾದ್ಯತೆ ಇದೆ. ಕಾರಣ ಹರಪ್ಪ ಸಂಸ್ಕೃತಿಯ ಜನರು ದ್ರಾವಿಡರೆಂಬುದು ಒಂದು ತಿಳುವಳಿಕೆ. ಹಾಗೆಯೆ ಕರ್ನಾಟರು ದ್ರಾವಿಡರೆ ಆಗುವುದರಿಂದ ಶೈವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಇದರ ನಂತರದಲ್ಲಿ ಬರುವಂತದು ಜೈನ. ಇತಿಹಾಸದ ಪ್ರಕಾರ ಕ್ರಿ.ಪೂ 3ನೇ ಶತಮಾನದಲ್ಲಿ ಭದ್ರಬಾಹು ಮುನಿಗಳೊಂದಿಗೆ  ಇದು ನಮ್ಮಲ್ಲಿ ಆಗಮಿಸಿತು[5]. ಇದಕ್ಕೂ ಹಿಂದೆಯೆ ಜೈನವು ಇಲ್ಲಿ ಇದ್ದಿರಬೇಕು.ಇಲ್ಲವಾದರೆ ಸ್ವಾಗತದ ನಂಬಿಕೆಯಿಲ್ಲದೆ ಮುನಿಗಳು ಇಲ್ಲಿಗೆ ಬರುವುದು ಅಷ್ಟೊಂದು ಸುಲಭ ಸಾದ್ಯವಿರಲಿಲ್ಲ. ಇಲ್ಲಿ ಗಮನಿಸಬಹುದಾದ ಮತ್ತೊಂದು ವಿಷಯವೆಂದರೆ ಜೈನರು ಗಣನೀಯವಾಗಿ ಇದ್ದದ್ದು, ಇರುವುದು ಕರ್ನಾಟಕದಲ್ಲೇ. "ದಕ್ಷಿಣ ಭಾರತದ ಜೈನರ ಇತಿಹಾಸವೆಂದರೆ ಅದು ಕರ್ನಾಟಕದ ಜೈನ ಇತಿಹಾಸವೇ ಆಗಿದೆ"[6] ಎಂಬ ಮಾತು ಇದಕ್ಕೆ ಪುಷ್ಟಿಯನ್ನು ಒದಗಿಸುತ್ತದೆ.

ನಂತರ ಅಶೋಕನ ಕಾಲದಲ್ಲಿ ಕರ್ನಾಟಕಕ್ಕೆ ಬುದ್ದಧರ್ಮ ಆಗಮಿಸಿರುವ ಸಾದ್ಯತೆಯಿದೆ.ಕರ್ನಾಟಕದಲ್ಲಿ ಸಿಕ್ಕಿರುವ ಅಶೋಕನ ಶಾಸನಗಳು ಇದನ್ನು ಹೇಳುತ್ತವೆ. ಆದರೂ ಅವು ಮೌರ್ಯ ಸಾಮ್ರಜ್ಯದ ಗಡಿಯಾಗಿರುವ ಕಾರಣ ಇರಬಹುದಾದ ಸಾಧ್ಯತೆಯಿದೆ ಎಂಬುವ ಅನುಮಾನವನ್ನು ಚಿದಾನಂದಮೂರ್ತಿಗಳು ವ್ಯಕ್ತಪಡಿಸಿದ್ದಾರೆ[7].ಇಲ್ಲಿಂದ ಶುರುವಾದ ಈ ಧರ್ಮವು ಸುಮಾರು 15–16 ನೇ ಶತಮಾನದವರೆಗೆ ಕರ್ನಾಟಕದಲ್ಲಿ ಇದ್ದುದರ ಬಗ್ಗೆ ದಾಖಲೆಗಳು ಸಿಗುತ್ತವೆ.

ನಂತರದಲ್ಲಿ ಕ್ರಿ.ಶ8ನೇ ಶತಮಾನದಲ್ಲಿ ವೈಷ್ಣವ(ವೈದಿಕ) ಧರ್ಮವು ಕರ್ನಾಟಕದಲ್ಲಿ ವೇಗವಾಗಿ ಹರಡಲು ತೊಡಗಿತು[8] . ಇದಕ್ಕೆ ನೆರೆಯ ತಮಿಳುನಾಡಿನಲ್ಲಿದ್ದ ಆಳ್ವಾರರ ಪ್ರಭಾವವು ಅನುಕೂಲವಾಗಿ ಕಾಣಿಸಿರಬೇಕು.ಇದಕ್ಕೂ ಮುಂಚೆಯೆ ಇದು ಕರ್ನಾಟಕದಲ್ಲಿ ಇತ್ತು.ಕನ್ನಡದ ಮೊದಲ ಶಾಸನವಾದ ಹಲ್ಮಿಡಿಯು ಆರಂಭವಾಗುವುದು ವಿಷ್ಣುವಿನ ಸ್ತುತಿಯಿಂದಲೇ ಎಂಬುದು ಇಲ್ಲಿ ನೆನಪಿಡಬೇಕಾದ ಅಂಶ.

ಪಾಶುಪತವು ಬಹಳ ಹಿಂದಿನಿಂದಲೂ ಕರ್ನಾಟಕದಲ್ಲಿ ಇತ್ತಾದರೂ , ಜನಪ್ರಿಯತೆಯನ್ನು ಪಡೆದದ್ದು 10ನೇ ಶತಮಾನದಲ್ಲಿ[9] . ಇದೇ ಸಮಯದಲ್ಲಿಯೇ ಕ್ರೈಸ್ತರು ಕರ್ನಾಟಕ ಮತ್ತು ತಮಿಳುನಾಡಿನ ಗಡಿಯಲ್ಲಿ ಪ್ರವೇಶಿಸಿದ್ದು. 10ನೇ ಶತಮಾನದ ಕೇರಳದ ಅಯ್ಯಡಿನ್ ದೊರೆಯು ಕ್ರೈಸ್ತ ಯಾತ್ರಿಯೊಬ್ಬನಿಗೆ 'ಇಗರ್ಜಿ' ನಿರ್ಮಿಸಲು ದತ್ತಿ ನೀಡಿದುದಾಗಿ ಶಾಸನಗಳು ಹೇಳುತ್ತವೆ[10] .ರಾಷ್ಟ್ರಕೂಟರ ಕಾಲದಲ್ಲಿ ಇಸ್ಲಾಂ ಧರ್ಮವು ಕರ್ನಾಟಕವನ್ನು ಪ್ರವೇಶಿಸಿರುವ ಸಾಧ್ಯತೆಯಿದೆಯಾದರೂ ಅಧಿಕೃತ ದಾಖಲೆಗಳು ಸಿಗುವುದು ಕ್ರಿ.ಶ 14 ನೇ ಶತಮಾನದಿಂದ[11].

ಇನ್ನು ಇದರ ಸ್ವರೂಪದ ಬಗ್ಗೆ ನೋಡೋಣ. ಈ ಅದ್ಯಯನದಲ್ಲಿ ಪ್ರಮುಖವಾಗಿ ಅಧ್ಯಾಯಗಳನ್ನು ಮತಾಂತರ, ದೇವಾಲಯ ಸಂಘರ್ಷ, ಧಾರ್ಮಿಕ ವಾದ ವಿವಾದಗಳು, ಮಹಿಳೆ ಮತ್ತು ಧರ್ಮ ಎಂದು ಪ್ರತ್ಯೇಕವಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ಮೂಲಕ ಒಂದೊಂದು ಅಧ್ಯಾಯದಲ್ಲಿ ಒಂದೊಂದು ವಿಷಯವನ್ನು ಕುರಿತಂತೆ ದಾಖಲೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ವಿಧಾನದ ಬಗ್ಗೆ ಹೇಳುವುದಾದರೆ, ಅತ್ಯಂತ ಸರಳ ವಿಧಾನ ಅನುಸರಿಸಲಾಗಿದೆ. ಅಂದರೆ ಯಾವುದೇ ತಾತ್ವಿಕತೆಯನ್ನು ಮುಂದು ಮಾಡಿಕೊಳ್ಳದೆ, ಮೊದಲು ದಾಖಲೆಗಳನ್ನು ಸಂಗ್ರಹ ಮಾಡುವ ಕೆಲಸ ಮಾಡಲಾಗಿದೆ. ನಂತರ ಸಿಕ್ಕಿರುವ ದಾಖಲೆಗಳನ್ನು ವಿಷಯಾಧಾರಿತವಾಗಿ ಜೋಡಿಸಿ ಅವುಗಳ ಮೇಲೆ ಸಿದ್ಧಾಂತ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

1. ಪೃಥ್ವಿಯೊಳಗಡಗಿದ ಗತವು, ಮನು ವಿ ದೇವದೇವನ್
2. ಪೃಥ್ವಿಯೊಳಗಡಗಿದ ಗತವು, ಮನು ವಿ ದೇವದೇವನ್
3. ಕವಿರಾಜಮಾರ್ಗ
4. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ತಿಪ್ಪೇರುದ್ರ ಸ್ವಾಮಿ, ಪು 193
5. ಕರ್ನಾಟಕದ ಸಾಂಸ್ಕೃತಿಕ ಪರಂಪರೆ – ಬಿ ಎಂ ಚಂದ್ರಶೇಖರಯ್ಯ
6. ಕರ್ನಾಟಕದ ಸಾಂಸ್ಕೃತಿಕ ಪರಂಪರೆ – ಬಿ ಎಂ ಚಂದ್ರಶೇಖರಯ್ಯ
7. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ – ಚಿದಾನಂದಮೂರ್ತಿ
8. ಕರ್ನಾಟಕದ ಸಾಂಸ್ಕೃತಿಕ ಪರಂಪರೆ – ಬಿ ಎಂ ಚಂದ್ರಶೇಖರಯ್ಯ
9. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ – ಚಿದಾನಂದಮೂರ್ತಿ
10. ಪೃಥ್ವಿಯೊಳಗಡಗಿದ ಗತವು, ಮನು ವಿ ದೇವದೇವನ್
11. ಕರ್ನಾಟಕದ ಸಾಂಸ್ಕೃತಿಕ ಪರಂಪರೆ – ಬಿ ಎಂ ಚಂದ್ರಶೇಖರಯ್ಯ

ಇದುವರೆಗೂ ಪ್ರಾಚೀನ ಕಾಲದ ಧರ್ಮಗಳ ಕುರಿತಂತೆ ಹಲವಾರು ಲೇಖನಗಳು, ಪ್ರಬಂಧಗಳು ರಚಿತವಾಗಿವೆ. ಅವುಗಳಲ್ಲಿ ಪ್ರಮುಖವಾಗಿ ಎರಡು ಕೃತಿಗಳನ್ನು ನಾನಿಲ್ಲಿ ಉಲ್ಲೇಖಿಸಲೇಬೇಕು. ಮೊದಲನೆಯದು **"ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಧಾರ್ಮಿಕ ಸಂಘರ್ಷ".** ಕ್ರಿ ಶ 10 ನೇ ಶತಮಾನದಿಂದ ಹಿಡಿದು 14ನೇ ಶತಮಾನದವರೆಗೆ ಇದರಲ್ಲಿ ಅಧ್ಯಯನ ಮಾಡಲಾಗಿದೆ. ಇದು ಹಂಪಿ ಕನ್ನಡ ವಿ.ವಿಯಲ್ಲಿ ಮಂಡಿತವಾಗಿರುವ ಸಂಶೋಧನಾ ಪ್ರಬಂಧವಾಗಿದ್ದು ನಾನು ವಿಷಯವನ್ನು ಆಯ್ಕೆ ಮಾಡಿಕೊಂಡ ತರುವಾಯು ಸಿಕ್ಕಿದ್ದು. ಈ ಕಾರಣ ಇದಕ್ಕಿಂತ ಭಿನ್ನವಾಗಿ ವ್ಯಾಪ್ತಿಯನ್ನೂ ಸ್ವರೂಪವನ್ನೂ ನಾನು ಬದಲಿಸಿಕೊಳ್ಳಬೇಕಾಯಿತು. ಇದರಲ್ಲಿ ಪ್ರಮುಖವಾಗಿ ಸಂಘರ್ಷವನ್ನು ಮಾತ್ರವೇ ನೋಡಲಾಗಿದ್ದು, ಅದೂ ಸಹ ಶಾಸನಗಳನ್ನು ಇಟ್ಟುಕೊಂಡು. ನನ್ನ ಅಧ್ಯಯನದಲ್ಲಿ ಧರ್ಮ ಸಾಮರಸ್ಯವನ್ನೂ ಹೇಳಿದ್ದು, ಸಾಹಿತ್ಯ ಕೃತಿಗಳನ್ನೂ ಸಹ ಪರಿಕರಗಳನ್ನಾಗಿ ತೆಗೆದುಕೊಳ್ಳಲಾಗಿದೆ. ಮತ್ತು ಈ ಅಧ್ಯಯನಕ್ಕಿಂತ ಭಿನ್ನವಾದ ಸ್ವರೂಪವನ್ನು ಹಾಕಿಕೊಳ್ಳಲಾಗಿದೆ.

ಇನ್ನೊಂದು ಪಂಡಿತ ರಾಠೋಡ್ ಅವರ "ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ". ಇದು ಮೊದಲಿನದಕ್ಕಿಂತ ವ್ಯಾಪ್ತಿಯಲ್ಲಿ ವಿಶಾಲವಾಗಿಯೂ, ವಿಷಯ ಸಂಗ್ರಹಣೆಯಲ್ಲಿ ವಿಸ್ತಾರವಾಗಿಯೂ ಇದೆ. ಇದು ನನ್ನ ಸಂಶೋಧನಾ ಬರವಣಿಗೆ ಕೊನೆಯ ಹಂತದಲ್ಲಿದ್ದಾಗ ಪ್ರಕಟವಾದ ಕೃತಿ. ಇದು ಸಂಶೋಧನಾ ಕೃತಿಯಾದರೂ ಸಂಶೋಧನಾ ಪ್ರಂಬಂಧವಲ್ಲ. ಇದರಲ್ಲಿ ತುಂಬಾ ವಿವರವಾದ ಮಾಹಿತಿಗಳಿದ್ದು, ದತ್ತಾಂಶ ಸಂಗ್ರಹಣೆಯನ್ನೂ ಸಹ ವಿಸ್ತಾರವಾಗಿ ಮಾಡಲಾಗಿದೆ. ಇದು ಮುಂದಿನವರಿಗೆ ಅಧ್ಯಯನ ಯೋಗ್ಯವಾಗಿದ್ದು, ಕರ್ನಾಟಕದ ಧಾರ್ಮಿಕ ಪರಿಸರವನ್ನು ಅರಿಯಲು ಮಹತ್ವದ ಕೃತಿಯಾಗಿ ಇದೂ ಸಹ ಸೇರುತ್ತದೆ.

ನಂತರದಲ್ಲಿ ಚಿದಾನಂದ ಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕೃತಿಯನ್ನು ನೋಡಬಹುದು. ಇದು ಕನ್ನಡ ಸಂಶೋಧನಾ ವಲಯದಲ್ಲಿ ಒಂದು ಮೈಲುಗಲ್ಲಿನ ಅಧ್ಯಯನ ಎನ್ನಬಹುದು. ಅದರಲ್ಲೂ ಪ್ರಮುಖವಾಗಿ ಶಾಸನಗಳ ಕ್ಷೇತ್ರದಲ್ಲಿ. ಇದರಲ್ಲಿ ಕರ್ನಾಟಕದ ಪ್ರಮುಖ ಧರ್ಮಗಳಾದ ಜೈನ, ಬೌದ್ದ, ಶೈವ, ವೈಷ್ಣವ ಧರ್ಮಗಳ ಕುರಿತು ವಿಸ್ತಾರವಾದ ಮಾಹಿತಿಯನ್ನು ನೀಡಲಾಗಿದೆ. ಕ್ರಿಶ 450 ರಿಂ 1150 ರವರೆಗೆ ಇದರ ಅಧ್ಯಯನದ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಈ ಕೃತಿಯ ಪ್ರಮುಖ ಉದ್ದೇಶವೆಂದರೆ "ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಆನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಜೀವನ ಸಮಸ್ಯೆಗಳು, ಅದರ ಜೇವನ ಮೌಲ್ಯಗಳು ... ಇತ್ಯಾದಿಗಳ ವಿವರಣೆಯೆ ಆ ದೇಸದ ಇತಿಹಾಸ" ಎಂದು ಕೃತಿಯೇ ಹೇಳಿಕೊಳ್ಳುತ್ತದೆ. ಈ ನೆಲೆಗಟ್ಟಿನ ಮೇಲೆಯೆ ಇಲ್ಲಿಯ ಅಧ್ಯಯನವನ್ನು ಮಾಡಲಾಗಿದೆ.

ಇದರಲ್ಲಿ ಮೂರು ಅಧ್ಯಾಗಳನ್ನು ಪ್ರಮುಖವಾಗಿ ಗಮನಿಸಬೇಕಿದೆ. ಅವುಗಳೆಂದರೆ

1. ಜೈನ– ಬೌದ್ದ– ಶೈವ– ವೈಷ್ಣವ ಧರ್ಮಗಳ ಕುರಿತು ಪರಿಚಯ. ಕರ್ನಾಟಕದಲ್ಲಿ ಈ ಧರ್ಮಗಳ ಆರಂಭ, ವಿಕಾಸ ಮತ್ತು ಪರಿಣಾಮಗಳ ಕುರಿತು ಇಲ್ಲಿ ಚರ್ಚೆ ಮಾಡಲಾಗಿದೆ.

2. ದೇವಾಸ್ಥಾನ ï ಒಂದು ಸಾಮಾಜಿಕ ಸಂಸ್ಥೆ– ಈ ಅಧ್ಯಾಯದಲ್ಲಿ ದೇವಾಲಯ ನಿರ್ಮಾಣದ ಕಾರಣಗಳು, ಮಹತ್ವ, ಸ್ವರೂಪ ಮುಂತಾದವುಗಳ ಕುರಿತು ಶಾಸನೋಕ್ತ ದಾಖಲೆಗಳನ್ನು ನೀಡಲಾಗಿದೆ.

3. ಸಾಮಾಜಿಕ ವ್ಯವಸ್ಥೆ ï ಇದರಲ್ಲಿ ಸ್ತ್ರೀಯರ ಸ್ಥಾನಮಾನಗಳು, ವಿವಾಹ ರೂಪಗಳು, ಜಾತಿಗಳ ಕುರಿತು ಮಾಹಿತಿಯನ್ನು ನೀಡಲಾಗಿದೆ.

ನಂತರದಲ್ಲಿ ಗಮನಿಸಬಹುದಾದ ಮತ್ತೊಂದು ಸಂಶೋಧನಾ ಕೃತಿಯೆಂದರೆ ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಇದನ್ನು ಬರೆದವರು ಎಚ್. ತಿಪ್ಪೇರುದ್ರಸ್ವಾಮಿ. ಭಾರತೀಯ ಸಂಸ್ಕೃತಿಯ ಮತ್ತು ನಾಗರೀಕತೆಯ ಮೂಲಗಳ ಶೋಧದೊಂದಿಗೆ ಇವರು ತಮ್ಮ ಅಧ್ಯಯನವನ್ನು ಶುರುಮಾಡಿದ್ದಾರೆ. ಹರಪ್ಪ ನಾಗರೀಕತೆ, ವೇದಗಳ ಕಾಲ, ಉಪನಿಷತ್ತುಗಳ ವೈಚಾರಿಕತೆ ಇವುಗಳನ್ನು ಚರ್ಚಿಸಿ ಆ ನಂತರ ಇವರು ಕರ್ನಾಟಕದ ವಿಷಯಕ್ಕೆ ಬರುತ್ತಾರೆ. ಇಲ್ಲಿ ಕರ್ನಾಟಕದ ಪ್ರಾಚೀನತೆಯನ್ನು, ಕರ್ನಾಟಕವನ್ನು ಆಳಿದ ರಾಜವಂಶಗಳ ವಿವರಗಳನ್ನು ನೀಡಿದ್ದಾರೆ. ಆ ನಂತರದಲ್ಲಿ ಇಲ್ಲಿಯ ಧಾರ್ಮಿಕ ಜೀವನ, ಸಾಮಾಜಿಕ ಜೀವನ, ದರ್ಮ ಸಮನ್ವಯದಂತಹ ವಿಚಾರಗಳ ಜೊತೆಗೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಬಿಂಬಿತವಾದ ಇಲ್ಲಿಯ ಸಂಸ್ಕೃತಿ ಮತ್ತು ಜನಪದರ ಧಾರ್ಮಿಕತೆ ಮುಂತಾದ ಅಂಶಗಳನ್ನು ಇಲ್ಲಿ ದಾಖಲಿಸಿದ್ದಾರೆ.

ಗಮನಿಸಬಹುದಾದ ಮತ್ತೊಂದು ಕೃತಿಯೆಂದರೆ 'ಮಧ್ಯಕಾಲೀನ ಕರ್ನಾಟಕ'. ಇದರಲ್ಲಿ ಜಿ.ಎಸ್. ದೀಕ್ಷಿತ್ ಅವರ ಆಯ್ದ ಬರಹಗಳನ್ನು ಸಂಕಲನ ಮಾಡಲಾಗಿದೆ. ಇದರ ಸಂಪಾದಕರು ಶ್ರೀನಿವಾಸ ಹಾವನೂರು ಅವರು. ಇದರಲ್ಲಿ ಪ್ರಮುಖವಾಗಿ ಕಲಚುರಿಗಳ ಚರಿತ್ರೆ, ಕಲ್ಯಾಣ ಕ್ರಾಂತಿ, ವಿಜಯನಗರ ಸಾಮ್ರಾಜ್ಯ ಮತ್ತು ಅದರ ಸಾಮಾಜಿಕತೆ ಮತ್ತು ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ ಇತ್ಯಾದಿ ವಿಷಯಗಳ ಕುರಿತು ಚರ್ಚೆ ಮಾಡಲಾಗಿದೆ.

ಇತರ ಅಧ್ಯಯನಗಳು:–

ಈ ಕೆಳಗಿನ ಗ್ರಂಥಗಳಲ್ಲಿ ಅಲ್ಲಲ್ಲಿ ಧರ್ಮ ಸಂಘರ್ಷವನ್ನು – ಸಮನ್ವಯವನ್ನು ಕಾಣುತ್ತೇವೆ.

ಜೈನ ಪರಂಪರೆ :ಮಹಿಳೆ – ಅಂಜನಪ್ಪ ಡಿ ಕೆ ï ಇದರಲ್ಲಿ ಜೈನ ಧರ್ಮದ ವಿಕಾಸ ಮತ್ತು ತಾತ್ವಿಕತೆಯನ್ನು ಹೇಳಲಾಗಿದೆ. ಜೊತೆಗೆ ಅದು ಮಹಿಳೆಯರನ್ನು ಯಾವ ರೀತಿಯಾಗಿ ಕಂಡಿತು ಎಂಬುದು ಹೇಳಲಾಗಿದೆ. ಮೊದಲು ಜೈನವು ಮಹಿಳೆಯರನ್ನು ದೂರವೇ ಇಟ್ಟಿತ್ತು. ಮೋಕ್ಷ ಹೊಂದಲು ಆ ಮಹಿಳೆಯು ಪುರುಷ ಪುನರ್ಜನ್ಮವನ್ನು ಪಡೆಯಬೇಕು ಎಂಬ ನಿಲುವಿನದಾಗಿತ್ತು. ಆದರೆ ಯಾಪನೀಯ ಸಂಘ ಎಂಬ ಜೈನರ ಪರಂಪರೆಯು ಸ್ತ್ರೀಯರಿಗೆ ಈ ಜನ್ಮದಲ್ಲಿಯೇ ಮೋಕ್ಷ ಸಾಧ್ಯವೆಂದು ಸಾರಿತು. ಮಹಿಳೆಯರ ಕುರಿತ ಅಧ್ಯಯನಗಳಲ್ಲಿ ಇದು ಪ್ರಮುಖವಾದುದು.

ಶೈವ ಪರಂಪರೆ : – ದೇಸಾಯಿ ಸುಶೀಲಾ ಶಂಕರಗೌಡ– ಈ ಕೃತಿಯು ಶೈವದ ಇತಿಹಾಸವನ್ನು ಹೇಳುತ್ತದೆ. ಅದರ ಉಗಮ, ಅದರ ಕವಲುಗಳು, ಅದರ ತಾತ್ವಿಕತೆ ಮುಂತಾದುವು ಈ ಕೃತಿಯ ವ್ಯಾಪ್ತಿಯಾಗಿವೆ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಧರ್ಮ & ಕಾವ್ಯಧರ್ಮ – ಎಂ ಉಷಾ – ಪಂಪನು ತನ್ನ ಎರಡು ಕೃತಿಗಳಲ್ಲಿ ಒಂದನ್ನು ಲೌಕಿಕಕ್ಕೆ ಮತ್ತೊಂದನ್ನು ಅಲೌಕಿಕಕ್ಕೆ ಎಂದು ವಿಭಾಗ ಮಾಡಿರುವುದು ನಮಗೆಲ್ಲ ಗೊತ್ತೇ ಇದೆ. ಆತನ ಹಿನ್ನೆಲೆಯು ಇದೇ ಧರ್ಮ ಮತ್ತು ಕಾವ್ಯಧರ್ಮದ ಉದ್ದೇಶಗಳನ್ನೊಳಗೊಂಡಿತ್ತು. ಹಾಗೆ ಈ ಕೃತಿಯಲ್ಲಿ ಅದೇ ಹಿನ್ನೆಲೆಯಲ್ಲಿ ಪ್ರಾಚೀನ ಕನ್ನಡ ಕಾವ್ಯಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಿದೆ.

ಕನ್ನಡ ಜೈನ ಪರಂಪರೆ – ಸಮಗ್ರ ಅಧ್ಯಯನ – ಎಚ್ ಶಿವಾನಂದï ಇದೂ ಸಹ ಜೈನರ ಬಗ್ಗೆ ಕುರಿತ ಕೃತಿಯಾಗಿದೆ. ಪ್ರಮುಖವಾಗಿ ಕನ್ನಡ ಜೈನ ಸಾಹಿತ್ಯವನ್ನು ಇಟ್ಟುಕೊಂಡು ಇಲ್ಲಿಯ ಅಧ್ಯಯನವನ್ನು ಮಾಡಲಾಗಿದೆ.

ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ – ತಾಳ್ತಜೆ ವಸಂತಕುಮಾರ– ಇದು ಬೌದ್ಧ ಧರ್ಮದ ಕುರಿತಾದ ಕೃತಿ. ಇದರಲ್ಲಿ ಕರ್ನಾಟಕದಲ್ಲಿ ಬೌದ್ಧರ ಆರಂಭ, ಪ್ರಗತಿ, ಪರಿಣಾಮ, ಅವನತಿ ಇವೆ ಮುಂತಾದ ವಿಷಯಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ದಾಖಲೆಗಳಲ್ಲಿ ಉಳಿದು ಬಂದಿರುವ ಅವರ ಕುರಿತ ವಿಚಾರಗಳನ್ನು ಸಂಗ್ರಹಿಸಿ ಒಂದು ಇತಿಹಾಸವನ್ನು ಕಟ್ಟಿಕೊಡಲಾಗಿದೆ.

ಇವುಗಳಷ್ಟೇ ಅಲ್ಲದೇ ಧರ್ಮದ ಕುರಿತಂತೆ ಇನ್ನೂ ಅನೇಕ ಅಧ್ಯಯನಗಳು ಆಗಿರುವುದನ್ನು ನಾವು ಗಮನಿಸಬಹುದು. ಅವುಗಳೆಲ್ಲವನ್ನೂ ಕಲೆ ಹಾಕುತ್ತಾ ಹೋದರೆ ಅದೇ ಒಂದು ದೊಡ್ಡ

ಅಧ್ಯಾಯವಾಗುವುದರಲ್ಲಿ ಸಂಶಯವಿಲ್ಲ. ಅದಕ್ಕಾಗಿ ಅಂತಹ ಅಧ್ಯಯನಗಳ ಕೆಲವು ಹೆಸರುಗಳನ್ನಷ್ಟೇ ಹೀಗೆ ನೋಡಬಹುದು.

ತುಳುನಾಡಿನ ಜೈನಧರ್ಮ – ಎಸ್ ಡಿ ಸೆಟ್ಟಿ

ಮಹಾರಾಷ್ಟ್ರದಲ್ಲಿ ವೀರಶೈವಧರ್ಮ ;ಒಂದು ಅಧ್ಯಯನ – ಗುರುಸಿದ್ದಯ್ಯ

ಕರ್ನಾಟಕದ ಸಾಂಸ್ಕೃತಿಕ ಸಂಘರ್ಷ ; ಒಂದು ಅಧ್ಯಯನ – ಬಿ ಎಸ್ ಗೀತಾ

... ಮುಂತಾದುವು.

**ಅ. ಕ್ರಿ ಪೂ 6ನೇ ಶತಮಾನದವರೆಗೆ**

**ಆ. ಕ್ರಿ ಪೂ 6ರಿಂದ ಕ್ರಿ ಶಕದವರೆಗೆ**

**ಇ. ಕ್ರಿಶ 1ರಿಂದ 5ನೇ ಶತಮಾನದವರೆಗೆ**

**ಈ. ಕ್ರಿಶ 6ರಿಂದ 10ನೇ ಶತಮಾನದವರೆಗೆ**

**ಉ. ಕ್ರಿಶ 10ನೇ ಶತಮಾನದವರೆಗೆ**

**ಅ. ಕ್ರಿಪೂ 6ನೇ ಶತಮಾನದವರೆಗೆ**

ಅಶೋಕನ ಒಂದು ಶಾಸನ ಹೀಗಿದೆ "ದೇವಾನಂಪಿಯ ಅಶೋಕನಾದ ನಾನು, ಕಳೆದ ಎರಡೂವರೆ ವರ್ಷಗಳಿಂದ ನಮ್ರ ಶಿಷ್ಯನಾಗಿದ್ದೆ.ಅದಕ್ಕಿಂತಲೂ ಹೆಚ್ಚಾಗಿ ನಾನು ಸಂಘವನ್ನು ಸೇರಿದೆ. ಹಾಗು ಅದನ್ನು ಉತ್ಸುಕತೆಯಿಂದ ಸೇರಿದೆ. ಮೊದಲು ಕಲವೇ ಮಂದಿ ಜಂಬೂದ್ವೀಪದಲ್ಲಿ ದೇವರನ್ನು ಸಮೀಪಿಸಿದ್ದರು. ದರ್ಮವನ್ನು ಆಚರಿಸುವುದರ ಮೂಲಕ , ಸಾಮಾನ್ಯ ಮನುಷ್ಯನು ಕೂಡ ದೇವರನ್ನು ಸಮೀಪಿಸುವುದರ ಮೂಲಕ , ಇದನ್ನು ಸುಳ್ಳಾಗಿಸಿದ್ದಾನೆ. ಈಗ ಯಾರೂ ಸಹ ದೇವರನ್ನು ಸಮೀಪಿಸಲು ಯೋಚಿಸಬೇಕಿಲ್ಲ. ದೊಡ್ಡವರಿಗೆ ಮಾತ್ರ ದೇವರು ಎಂಬುದನ್ನು ಸುಳ್ಳಾಗಿಸಿದ್ದಾರೆ. ಚಿಕ್ಕವರು ಮತ್ತು ದೊಡ್ಡವರು ಧರ್ಮವನ್ನು ಆಚರಿಸುವುದರ ಮೂಲಕ ಮೋಕ್ಷವನ್ನು ಸಾಧಿಸಬಹುದಾಗಿದೆ.[1]

ಇದು ಅಶೋಕನ ಧರ್ಮಶಾಸನವೊಂದರ ಸಾರ.ಭಾರತದಲ್ಲಿ ಮೊದಲು ದೊರಕುವ ಲಿಖಿತ ದಾಖಲೆಗಳಿವು.ಇವನ್ನು ಧರ್ಮಶಾಸನಗಳು ಎಂದು ಕರೆಯುತ್ತಾರೆ.ಅಂದರೆ ಭಾರತದ ಮೊದಲ ಶಾಸನಗಳು ಧರ್ಮಕ್ಕೆ ಸಂಬಂಧಿಸಿದವು ಎಂದಾಯಿತು.ಸಾಮಾನ್ಯ ಅರಸನಾದ ಅಶೋಕನು ಸಾಮ್ರಾಟ್ ಎಂದು ಕರೆಸಿಕೊಳ್ಳುವುದು ಧಾರ್ಮಿಕಪ್ರವೃತ್ತಿಯಿಂದಲೇ.ಇದು ಪ್ರಾಚೀನ ಭಾರತದಲ್ಲಿ ಧರ್ಮದ ಮಹತ್ವವನ್ನು ಹೇಳುವ ಒಂದು ಉದಾಹರಣೆಯಷ್ಟೇ. ಬರೀ ಭಾರತ ಮಾತ್ರವಲ್ಲ ಇಡೀ ಜಗತ್ತು ಧರ್ಮದ ಸನ್ನಿಯೊಂದಿಗೆ ತುಂಬಿಹೋಗಿತ್ತು:ಹೋಗಿದೆ.

**ಧರ್ಮದ ಮೂಲ –**

ಕಾರ್ಲ್‌ಮಾರ್ಕ್ಸ್‌ನ ಒಂದು ಹೇಳಿಕೆಯಿದೆ 'ಧರ್ಮ ಅಫೀಮು' ಎಂದು. ಒಬ್ಬ ಮನುಷ್ಯನ ಪ್ರಜ್ಞಾವಸ್ಥೆಗೆ , ಸುತ್ತಮುತ್ತಲ ಪರಿಸರದಲ್ಲಿ ಸಹಜವಾಗಿ ಇದರ ಅರ್ಥ ಕಾಣಬಹುದು. ಮತ್ತು ಅಷ್ಟಲ್ಲದೆ ಅವನು ಮುಂದುವರೆದು ಹೇಳುತ್ತಾನೆ. "ಧರ್ಮವೆಂಬುದು ಹೃದಯಹೀನ ಜಗತ್ತಿನ ಹೃದಯ" ಎಂದವನು ಕರೆಯುತ್ತಾನೆ. ಧರ್ಮವೆಂಬುದು ಇಲ್ಲದವರ ಪಾಲಿಗೆ ಒಂದು ಆಶಾಕಿರಣ. ಅದು ಶೋಷಿತರಿಂದ ಅವರಿಗೆ ಏನೂ ನೀಡದಿದ್ದರೂ ಸಹ, ಅವರಿಗೊಂದು ನೆಮ್ಮದಿ ನೀಡುತ್ತದೆ. ಎಲ್ಲರೂ ಕೈಬಿಟ್ಟಾಗ ದೇವರಿದ್ದಾನೆ ಎನ್ನುವ ನಂಬಿಕೆ ಅವರ ಜೀವನಕ್ಕೊಂದು ಆಶಾಕಿರಣದಂತೆ. ಆಳುವ ವರ್ಗದವರ ಉದ್ದೇಶಿತ ವ್ಯಾಪ್ತಿಗಳಲ್ಲಿ ಇದೂ ಸಹ ಒಂದು. ಈ ಮಟ್ಟಿಗೆ ನಮ್ಮ ಒಳಹೊಕ್ಕಿರುವ ಧರ್ಮದ ಮೂಲ ಎಲ್ಲಿರಬಹುದು?ಮತ್ತು ಯಾವಾಗಿರಬಹುದು? ಬಹುಶಃ ಈ ಎರಡೂ ಪ್ರಶ್ನೆಗಳಿಗೆ ಉತ್ತರ ಕಷ್ಟ , ಸಿಕ್ಕರೂ ಅಸ್ಪಷ್ಟ.

ಧರ್ಮದ ಮೊದಲ ಹೆಜ್ಜೆ ಪ್ರಕೃತಿಪೂಜೆ.ಇದರಲ್ಲಿ ಪ್ರಕೃತಿ ಮೇಲಿನ ಭಯ ಮತ್ತು ಪ್ರಕೃತಿಗೆ ಕೃತಜ್ಞತೆ ಎರಡೂ ಸೇರಿವೆ. ಆದಿಕಾಲದ ಮಾನವನು ಗುಡುಗು ಸಿಡಿಲುಗಳಂತವುಗಳಿಗೆ ಮೊದಲಿನ ಭಯ ಪಟ್ಟಿರಬೇಕು.ನಂತರದಲ್ಲಿ ಭೂಕಂಪ, ಕಾಳ್ಗಿಚ್ಚು. ಇನ್ನೂ ನಂತರದಲ್ಲಿ ಮರಣಕ್ಕೆ , ಅದರಲ್ಲೂ ಅಸ್ವಾಭಾವಿಕ ಮರಣಕ್ಕೆ. ಇಂದಿನ ಆಧುನಿಕ ಮಾನವನೂ ಸಹ ಭಯವನ್ನು ಮೊದಲ ಸ್ಥಾನದಲ್ಲಿಟ್ಟೇ ದೇವರನ್ನು ಪೂಜಿಸುವುದನ್ನು ನಾವು ಕಾಣಬಹುದು.ನಾಗರಿಕತೆ ಬೆಳೆಯುತ್ತಾ ಬಂದಂತೆ ಭಯದ ಜೊತೆಯಲ್ಲಿ ಕೃತಜ್ಞತೆಯು ಸೇರಿರಬೇಕು.ನಾಗರಿಕತೆ ಎಂಬುದರ ಅರ್ಥವು ಇಂತವುಗಳಿಂದಲೇ ಕೂಡಿಕೊಂಡಿದೆ.ಪ್ರಪಂಚದ ಪ್ರಾಚೀನ ನಾಗರೀಕತೆಗಳನ್ನಾಗಿ ಹರಪ್ಪ–ಮೆಹಂಜೋದಾರೋ, ಬ್ಯಾಬಿಲೋನಿಯಾ, ಈಜಿಪ್ಟ್ ಮತ್ತುಮೆಸೊಪೊಟೋಮಿಯಾಗಳನ್ನು ಗುರುತಿಸಲಾಗುವುದು.ಈ ಕಾಲಘಟ್ಟದಲ್ಲಿ ಧರ್ಮ ಎನ್ನುವುದರ ಸ್ಪಷ್ಟ ಕಲ್ಪನೆಗಳು ಸಿಗುವುದಿಲ್ಲವಾದರೂ, ದೇವ ದೇವತೆಗಳಂತೂ ಅಸಂಖ್ಯಾತವಾಗಿ ಸಿಗುತ್ತಾರೆ.ಕ್ರಿ ಪೂ 9ನೇ ಶತಮಾನದ ಪೂರ್ವಕ್ಕೆ ಒಂದು ಅಂದಾಜಿನ ಗಣತಿಯ ಪ್ರಕಾರ ಸುಮಾರು 65,000 ದೇವತೆಗಳು ಇದ್ದುದಾಗಿ ತಿಳಿದುಬರುತ್ತದೆ[2].ಈ ಸಂಖ್ಯೆಯು ಆ ಕಾಲದ ಧರ್ಮಕ್ಕೆ ಸಂಬಂಧಪಡದೆ, ಸಂಸ್ಕೃತಿಗೆ ಹತ್ತಿರವಾದುದೆಂದು ತಿಳಿಯಬೇಕು.ಇಲ್ಲಿ ಸಂಸ್ಕೃತಿ ಮತ್ತು ಧರ್ಮಗಳೆರಡನ್ನು ಬೇರೆಬೇರೆಯಾಗಿ ನೋಡಬೇಕಾಗುತ್ತದೆ.ಒಂದು ನಾಗರೀಕತೆಯ ಸಂಸ್ಕೃತಿ ಅದೇ ಇದ್ದು ಧರ್ಮಗಳು ಬದಲಾಗುತ್ತಾ ಸಾಗಬಹುದು.ಇಲ್ಲವೇ ಧರ್ಮಗಳು ಅವೇ ಇದ್ದು ಸಂಸ್ಕೃತಿಯು ಬದಲಾಗುತ್ತಾ ಸಾಗಬಹುದು.

ತುಂಬಾ ಪ್ರಾಚೀನ ಕಾಲದಲ್ಲಿ ಏಕದೇವತಾ ಅಸ್ತಿತ್ವ ಇದ್ದಿರಬಹುದು.ಅದನ್ನು ಗುರುತಿಸುವುದು ಕಷ್ಟ.ಆ ನಂತರದಲ್ಲಿ ಬಹುದೇವತಾ ಸರಣಿಯು ಮುಂದುವರೆದು ಬಂದಿತು. ಹುಟ್ಟಿಗೊಂದು ದೇವರು,

ಸಾವಿಗೊಂದು ದೇವರು, ಮಳೆಗೊಂದು ಬೆಂಕಿಗೊಂದು. ಹೀಗೆ ದೇವತೆಗಳನ್ನು ಕಾಣಬಹುದು.ಈ ಬಹುದೇವತಾ ಕಲ್ಪನೆಯು ಪ್ರಕೃತಿಯಿಂದಲೇ ಬಂದಿರುವುದು ಸಾಧ್ಯ.ಈಗಲೂ ಹಲವು ಬುಡಕಟ್ಟುಗಳಲ್ಲಿ ಕಾಣುವಂತೆ, ಪ್ರತಿಯೊಂದು ತನ್ನ ದೇವರನ್ನಾಗಿ–ಲಾಂಛನವನ್ನಾಗಿ–ಕುರುಹನ್ನಾಗಿ ಒಂದು ಮರವನ್ನೋ, ಪ್ರಾಣಿಯನ್ನೋ, ಪಕ್ಷಿಯನ್ನೋ ಉಳಿಸಿಕೊಂಡು ಬಂದಿರುವುದು ಇದೆ.ಕೇವಲ ಬುಡಕಟ್ಟುಗಳಂತವು ಮಾತ್ರವೇ ಅಲ್ಲದೇ ವ್ಯವಸ್ಥಿತವಾಗಿ ಧರ್ಮವೆಂದು ಕರೆಯಲ್ಪಡುವ ಜೈನಧರ್ಮವೂ ಕೂಡ ತನ್ನ ಒಬ್ಬೊಬ್ಬರು ತೀರ್ಥಂಕರರಿಗೂ ಕೂಡ ಒಂದೊಂದು ವೃಕ್ಷವನ್ನು ಆರೋಪಿಸುಯತ್ತದೆ.ಇಷ್ಟೊಂದು ದೇವರುಗಳು ಯಾಕೆ ಮತ್ತು ಹೇಗೆ ಹುಟ್ಟಿಕೊಂಡರು ಎಂದು ಆಲೋಚಿಸಿದಾಗ ಹಲವು ಉತ್ತರಗಳು ನಮ್ಮ ಕಣ್ಣ ಮುಂದೆ ಬರುವುದು ಸಾಧ್ಯ.ಈ ಮುಂಚೆಯೆ ಹೇಳಿದಂತೆ ಭಯ ಮತ್ತು ಕೃತಜ್ಞತೆಗಳೇ ಪ್ರಮುಖ ಮಾನದಂಡ.ಒಂದೊಂದು ರೋಗಕ್ಕೂ ಒಂದೊಂದು ದೇವತೆಯಿರುವುದನ್ನು ನಾವೀಗಲೂ ಕಾಣಬಹುದು.ಪ್ರಾಚೀನ ಮನುಷ್ಯ ತನಗೆ ರೋಗ ಬರುವುದಕ್ಕೆ ಯಾವುದೋ ದೇವತೆ ಕಾರಣವೆಂದು ನಂಬಿದ.ಆ ಶಕ್ತಿಗಳನ್ನು ತೃಪ್ತಿ ಪಡಿಸಲು ಬಲಿಗಳು ಯಜ್ಞಗಳು ಮುಂತಾದುವನ್ನು ಆರಂಭಿಸಿದ.ಆ ಬಲಿಗಳಿಗೆ, ಆ ಯಜ್ಞಗಳಿಗೆ 99 ಬಾರಿ ವ್ಯರ್ಥ ತೃಪ್ತ ಮಾಡಿದರೂ ನೂರನೇ ಬಾರಿ ಆ ಖಾಯಿಲೆಯು ಕಾಕತಾಳಿಯವೋ ಮತ್ತೊಂದೋ ಎನ್ನುವಂತೆ ವಾಸಿಯಾದಾಗ ಆ ವಾಸಿಯಾಗುವಿಕೆಯು ಮತ್ತೂ ನೂರಾರು ಬಲಿಗಳಿಗೆ ಯಜ್ಞಗಳಿಗೆ ಸ್ಫೂರ್ತಿ ನೀಡಿದಂತೆ.ನಮಗೆ ಮಳೆ ಬರಲಿ, ಬೆಳೆ ಬರಲಿ ಎಂದು ಬೇಡುತ್ತಿದ್ದುದು ಈ ಹಿನ್ನೆಲೆಯಲ್ಲಿಯೇ.ಈ ಎಲ್ಲವೂ ಆಗ ಸಾಮೂಹಿಕ ರೂಪದಲ್ಲಿತ್ತು.

ಆಗಿನ ಕಾಲದಲ್ಲಿ ರಾಜನಿಗೂ ಪುರೋಹಿತನಿಗೂ ಅಷ್ಟೇನೂ ವ್ಯತ್ಯಾಸವಿರಲಿಲ್ಲ. ಹರಪ್ಪ ಯುಗದಲ್ಲಿ ಕಾಣಬರುವ ಮನುಷ್ಯ ಆಕೃತಿಯೊಂದನ್ನು 'ರಾಜ ಪುರೋಹಿತ' ಅಂತಲೇ ಗುರುತಿಸಲಾಗುತ್ತದೆ.ಕೆಲವೊಮ್ಮೆ ಇವರು ಸರಳವಾಗಿರುತ್ತಿದ್ದರು.ಕೆಲವೊಮ್ಮೆ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದರು.ಆಗಿನ ಕಾಲದಲ್ಲಿ ಜಗತ್ತನ್ನು ಪುರೋಹಿತರು ಹುಟ್ಟಿಸಿದ ನಂಬಿಕೆಗಳು ಆಳುತ್ತಿದ್ದವು. ಅವುಗಳೇ ಆಚರಣೆ ರೂಪದಲ್ಲಿದ್ದ ಧರ್ಮಗಳಾಗಿದ್ದವು.ನಂತರದಲ್ಲಿ ಧರ್ಮವು ಸಾಂಸ್ಥಿಕ ರೂಪ ತಳೆದಾಗ ಸಾರ್ವತ್ರಿಕವಾಗಿಯಂತೂ ಇರಲಿಲ್ಲ. ಈಗಲೂ ಸಹ ಧರ್ಮವಿಲ್ಲದ ಸಮಾಜಗಳನ್ನು ಅಲ್ಲಲ್ಲಿ ಕಾಣಬಹುದು. ಬ್ರಿಟೀಷರು ಭಾರತವನ್ನು ಹೊಕ್ಕಾಗ ಅಂತಹ ಧರ್ಮವಿಲ್ಲದವರ ಗುಂಪುಗಳೇ ಇಲ್ಲಿ ಹೆಚ್ಚಾಗಿ ಇದ್ದುದು.ಧರ್ಮದಲ್ಲಿ ಆಚರಣೆಯಲ್ಲಿರುವುದಕ್ಕಿಂತ ಆರೋಪಿಸಿಕೊಂಡವರ ಸಂಖ್ಯೆ ಈಗಲೂ ಸಹ ದೊಡ್ಡದಿದೆ.ದೊಡ್ಡ ದೊಡ್ಡ ಧರ್ಮಗಳೆಲ್ಲವೂ ಹೀಗೆ ಆವರಿಸಿಕೊಳ್ಳುವ ಮೂಲಕವೇ ಬೆಳೆದದ್ದು.ಇಂದಿಗೂ ಸಹ ಅನೇಕ ಕೋಟಿಗಳಲ್ಲಿ ಧರ್ಮ ಇಲ್ಲದವರು ಮತ್ತು ಧರ್ಮ ಒಲ್ಲದವರು ಇದ್ದಾರೆ. ಅವರ ಧರ್ಮವೆಂದರೆ ಆಚರಣೆಗಳು ಮಾತ್ರ.

**ಆ) ಕ್ರಿ ಪೂ 6ನೇ ಶತಮಾನದವರೆಗೆ**

ಸಾಮಾನ್ಯವಾಗಿ ಇತಿಹಾಸವನ್ನು ಮೂರು ವಿಭಾಗಗಳಾಗಿ ವಿಂಗಡಿಸಲಾಗುತ್ತದೆ.

1. ಇತಿಹಾಸ ಪೂರ್ವ ಕಾಲ
2. ಇತಿಹಾಸ ಪರ ಕಾಲ
3. ಇತಿಹಾಸ ಕಾಲ

ಶಿಲಾಯುಗವನ್ನು ಇತಿಹಾಸ ಪೂರ್ವಕಾಲ ಎಂದು ಗುರುತಿಸುತ್ತಾರೆ. ಇದು ಧರ್ಮಪೂರ್ವ ಕಾಲವೂ ಸಹ.ಅಂದರೆ ಧರ್ಮ ಎಂಬುದು ಇಲ್ಲದ್ದು ಎಂದು ಅರ್ಥ.ಈ ಕಾಲದಲ್ಲಿ ಮಾನವನ ಮುಖ್ಯ ವೃತ್ತಿ ಎಂದರೆ ಬೇಟೆ ಮತ್ತು ಕಾಡಿನಲ್ಲಿ ಆಹಾರ ಸಂಗ್ರಹಣೆ.ಅಲೆಮಾರಿಗಳಾಗಿದ್ದ ಇವರು ಹೆಚ್ಚು ಕಡಿಮೆ ಪ್ರಾಣಿಗಳಮತೆಯೆ ಜೀವನ ನಡೆಸುತ್ತಿದ್ದರು.ನವ ಶಿಲಾಯುಗಕ್ಕೆ ಕಾಲಿಡುವ ಹೊತ್ತಿಗೆ ಮಾನವನು ಕೃಷಿ, ಪಶು ಸಂಗೋಪನೆ ಮುಂತಾದುವನ್ನು ಹೊಂದತೊಡಗಿದ.ಪುರಾತನ ಶಿಲಾಯುಗದ ಮಾನವನಿಗೆ ಮಾನವನಿಗೆ 'ಸತ್ತ ನಂತರದ ಜೀವಿತ'ದ ಕಲ್ಪನೆಯಿತ್ತು.ಈಜಿಪ್ಟ್‌ನ ಮಮ್ಮಿಗಳನ್ನು ಈ ಹಿನ್ನೆಲೆಯಲ್ಲಿ ನೋಡಬಹುದು.ಆದರೆ ಇದು ಪೂರ್ಣವಾಗಿ ಆತ್ಮದ ಕಲ್ಪನೆಯಲ್ಲ. ಕೆಲವು ಧಾರ್ಮಿಕ ನಂಬಿಕೆಗಳಾದರೂ ಆಗ ಶುರುವಾಗಿವೆ. ಮೌಸ್ಟೇರಿನ್ ಮತ್ತು ನೀಂಡರ್‌ತಾಲ್ ಯುಗದ ಗುಹೆಗಳಲ್ಲಿ–ಗೋರಿಗಳಲ್ಲಿ ಹೊಂದಿಸಿಟ್ಟ ಕರಡಿಯ ಮೂಳೆಗಳು ಪತ್ತೆಯಾಗಿವೆ. ಇವು 'ಕರಡಿ ಕುಲಾಚಾರ' ಪದ್ದತಿಯನ್ನು ಸೂಚಿಸುತ್ತಿರಬಹುದು ಎಂಬ ಅಭಿಮತವಿದೆ[3].

ಶಿಲಾಯುಗದ ಕೊನೆಯ ಘಟ್ಟಕ್ಕಾಗಲೇ 'ಕುಲ ಲಾಂಛನ' ಪದ್ದತಿಯು ಇನ್ನೂ ಸ್ಪಷ್ಟವಾಗಿ ಬೆಳೆದಿತ್ತು. ಇದಕ್ಕೆ ಸಂಬಂಧಿಸಿದ ಚಿತ್ರಗಳನ್ನು ಆ ಕಾಲದ ಗುಹೆಯ ಗೋಡೆಗಳಲ್ಲಿ ಕಾಣಬಹುದು.ಇವುಗಳು ಪ್ರಕೃತಿಗೆ ಪಳಗಿದ ಮನುಷ್ಯನ ವಿಧಿ ಆಚರಣೆಗಳೇ ಇರಬೇಕು. ಈ ಯುಗದ ಕೊನೆಯ ಹಂತಕ್ಕಾಗಲೇ ಶವಸಂಸ್ಕಾರ ಪದ್ದತಿಯು ಒಂದು ನಿರ್ದಿಷ್ಟ ಸ್ವರೂಪ ಪಡೆದಿತ್ತು. ಈ ಯುಗದಲ್ಲಾದ ಒಂದು ಪ್ರಮುಖ ಕ್ರಾಂತಿಯೆಂದರೆ ಮನುಷ್ಯನು ಆಹಾರ ಸಂಗ್ರಹಣೆಯನ್ನು ತೊರೆದು ಆಹಾರ ಉತ್ಪಾದನೆಯನ್ನು ಅಳವಡಿಸಿಕೊಂಡಿದ್ದು. ಪ್ರಕೃತಿಗೆ ಅಧೀನವಾಗಿ ಬದುಕುತ್ತಿದ್ದವನು ಈಗ ಸ್ವಲ್ಪ ಸ್ವಲ್ಪವಾಗಿಯೇ ಅದನ್ನು ಅರಿತುಕೊಂಡು ನಿಯಂತ್ರಿಸಲು ಶುರುಮಾಡಿದ. ಈ ಕಾಲವನ್ನು ವರ್ಗ ವಿಂಗಡಣೆ ಕಾಲ ಎಂದೂ ಸಹ ಕರೆಯುವರು[4]. ಈಗ ಈಗ ಉತ್ಪಾದಕರು ಮತ್ತು ಉತ್ಪಾದಕ ಸಂಘಟನಕಾರರು ಎಂದು ವರ್ಗೀಕರಣವಾಯಿತು.

ಇದರ ನಂತರದ ಯುಗ ಲೋಹಯುಗ. ಈ ಯುಗದ ಮುಖ್ಯ ಲಕ್ಷಣಗಳೆಂದರೆ ತಾಂತ್ರಿಕತೆ ಮತ್ತು ಮಾತೃಪೂಜೆ[5]. ಈ ತಂತ್ರಗಾರಿಕೆಯೆಂದರೆ ಬಹುಪಾಲು ಅನುಕರಣೆಯೆ ಆಗಿದೆ.ಅದು ಪ್ರಕೃತಿಯನ್ನು ನಿಯಂತ್ರಿಸುವ ಭ್ರಮೆ. ತಮಗೆ ಅವಶ್ಯಕವಾದುದನ್ನು ಕಲ್ಪಿಸಿಕೊಂಡು , ಅದನ್ನು ಅಣುಕು ಮಾಡುವಿಕೆ. ಆರಂಭ ಕಾಲದ ತಾಂತ್ರಿಕತೆಗೆ ಒಂದು ಉದಾಹರಣೆಯೆಂದರೆ ಮಾವೋರಿಗಳ ನೃತ್ಯ[6]. ಬಿರುಗಾಳಿಯಿಂದ ಆಲೂಗಡ್ಡೆಯ ಎಳೆಯ ಸಸಿಗಳನ್ನು ಕಾಪಾಡಲು ಈ ಮಾವೋರಿಗಳು ಅದು ಮೊಳಕೆಯೊಡೆಯುವ ಮತ್ತು ಇತ್ಯಾದಿ ಕ್ರಿಯೆಗಳನ್ನು ನೃತ್ಯದಲ್ಲಿ ಅಭಿನಯಿಸುತ್ತಾರೆ. ಈ ಮೂಲಕ ಅದನ್ನು ರಕ್ಷಿಸಿಕೊಳ್ಳಬಹುದೆಂಬ ನಂಬಿಕೆ ಅವರದು.

ಆದರೆ ಈ ರೀತಿಯ ತಂತ್ರಗಾರಿಕೆ, ಪ್ರಾಣಿಲಾಂಛನ ಎಲ್ಲಾ ಪಂಗಡಗಳಲ್ಲೂ ಕಂಡು ಬರುತ್ತಿತ್ತು ಎನ್ನಲಾಗದು. ಆಫ್ರಿಕಾದ ಪಿಗ್ಮಿ ಬುಡಕಟ್ಟನ್ನು ಗಮನಿಸುವುದಾದರೆ ಅವರು ಯಾವುದೇ ರೀತಿಯ ಪೂಜಾ ಪದ್ದತಿಗಳನ್ನು ಹೊಂದಿರಲಿಲ್ಲ. ಅವರಿಗೆ ಕುಲ ಲಾಂಛನ ಇರಲಿಲ್ಲ ಮತ್ತು ಶವಗಳ ಸಮಾಧಿಗಳಿಗೆ ಯಾವುದೇ ಸಂಸ್ಕಾರ ನಡೆಸುತ್ತಿರಲಿಲ್ಲ[7]. ಆದರೆ ಇಂತಹ ಕೆಲವನ್ನು ಹೊರತುಪಡಿಸಿದರೆ ಈ ಧಾರ್ಮಿಕಪೂರ್ವ ಆಚರಣೆಗಳು ಸಾರ್ವತ್ರಿಕ. ಆ ಕಾಲದ ಎಲ್ಲಾ ಪಂಗಡಗಳಲ್ಲಿಯೂ ಸಾಮಾನ್ಯವಾಗಿ ಗುರುತಿಸಬಹುದಾದ ಎರಡು ಮುಖ್ಯ ಕ್ರಿಯೆಗಳೆಂದರೆ ಸಸ್ಯ ಪ್ರಾಣಿಗಳ ಪೂಜೆ ಮತ್ತು ಲೈಂಗಿಕತೆಯ ಆರಾಧನೆ. ಬಹುತೇಕ ಪ್ರಾಣಿಗಳಲ್ಲಿಯೂ ಸಸ್ಯಗಳಲ್ಲಿಯೂ ಯಾವುದಾದರೂ ಒಂದು ದೇವರು ಇದ್ದೇ ಇರುತ್ತಿತ್ತು. ಯಾವು ಯಾವುದೋ ದೇಹಕ್ಕೆ ಯಾವುದೋ ತಲೆ ಮತ್ಯಾವುದರದೋ ಕೈ ಕಾಲು. ಹೀಗೆ ಸಾಗುತ್ತಿತ್ತು ಆ ಮಾನವನ ದೇವತಾ ಕಲ್ಪನೆ. ಲೈಂಗಿಕತೆಯ ಬಗ್ಗೆ ಹೇಳುವುದಾದರೆ ಅದು ಸೃಷ್ಠಿಯಷ್ಟೇ ಮನುಷ್ಯನ ಮೇಲೆ ಪ್ರಭಾವ ಬೀರಿದೆ. ಪ್ರಮುಖವಾದುದು ಭೂಮಿ ಮತ್ತು ಹೆಣ್ಣು. ಬಹುಶಃ ಇದು ಮಾನವನು ಪ್ರಕೃತಿಯನ್ನು ಹತ್ತಿರದಿಂದ ನೋಡಿದ್ದರ ಫಲವಿರಬೇಕು. ನಮ್ಮಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವ ಲಿಂಗೋಪಾಸನೆ ಇದಕ್ಕೊಂದು ಉತ್ತಮ ಉದಾಹರಣೆ.

ಆಗ ಧರ್ಮವೆಂದರೆ ಆಚರಣೆಗಳ ಕಟ್ಟು ಅಷ್ಟೇ. ಈಗಿನಷ್ಟು ವಯಕ್ತಿಕ ಆಗಿರಲಿಲ್ಲ. ಅಲ್ಲಿಯ ನಿಯಮಗಳೆಂದರೆ ಸಮೂಹ ಆಚರಣೆಗಳ ಪರಿಣಾಮ. ಬಹುಶಃ ಹರಪ್ಪಾದ ಉನ್ನತ ಪರಿಜ್ಞಾನದವರೆಗೆ ಈ ಸಮೂಹ ಪ್ರಜ್ಞೆ ಉಳಿದುಕೊಂಡು ಬಂದಿರುವ ಸಾಧ್ಯತೆಯಿದೆ. ಒಂದು ಗುಂಪು ಮತ್ತೊಂದು ಗುಂಪಿನ ಆಡಳಿತಕ್ಕೆ ಒಳಪಟ್ಟಾಗ ಇಡಿಯಾಗಿ ಆ ಸಮೂಹವೇ ಆಳುತ್ತಿದ್ದವರ ಆಚರಣೆಗಳಿಗೆ ತನ್ನನ್ನು ಒಗ್ಗಿಸಿಕೊಳ್ಳುತ್ತಿತ್ತು. ಹಲವು ಪರಿ ಆ ಆಚರಣೆಗಳು ಅವರಿಗೆ ಪರಕೀಯವೂ ಸಹ ಆಗಿರಲಿಲ್ಲ. ಇಂತಹ ಆಚರಣೆಗಳು ನಾಗರೀಕತೆಯನ್ನು ಹೊದ್ದು ಸಾಗಿದಂತೆಲ್ಲಾ ಧರ್ಮವು ಮೂರ್ತವಾಗತೊಡಗಿತು.

ಆಗಿನ ಕಾಲದ ರಾಜ ಪುರೋಹಿತ ಮತ್ತು ದೇವಾಸ್ಥಾನದ ಬಗೆಗೆ ಹೇಳುವುದು ಅವಶ್ಯಕ.ರಾಜನಿಗೂ ಪುರೋಹಿತನಿಗೂ ಅಷ್ಟೇನೂ ವ್ಯತ್ಯಾಸವಿದ್ದಿಲ್ಲವೆಂದು ಈ ಹಿಂದೆಯೆ ಹೇಳಲಾಗಿದೆ. ಯಾವಾಗ ಧಾರ್ಮಿಕ ಕ್ರಿಯೆಗಳು ಹೆಚ್ಚು ಸಂಕೀರ್ಣವಾಗುತ್ತಾ ನಡೆದವೋ ಅಗ ಅದನ್ನು ನಿರ್ವಹಿಸಲು ವರ್ಗವೊಂದರ ಹುಟ್ಟು ಅವಶ್ಯಕವಾಯಿತು. ಪುರೋಹಿತ ವರ್ಗದ ಉಗಮದ ಹಿನ್ನಲೆ ಈ ರೀತಿಯದು.ಪ್ರಸಿದ್ದ ಹೇಳಿಕೆಯೊಂದರಂತೆ "ಪುರೋಹಿತ ಧರ್ಮವನ್ನು ಸೃಷ್ಟಿಸಲಿಲ್ಲ; ಆತ ಅದನ್ನು ಬಳಸಿಕೊಂಡ ಮಾತ್ರ"[8]. ಈ ಅರ್ಚಕ ವರ್ಗದ ಆಯುಧವೆಂದರೆ ಮನುಷ್ಯನಲ್ಲಿದ್ದ ಭಯ. ಮನುಷ್ಯನಿಗೆ ದೇವರು ಜೀವನದ ಮೇಲಿನ ಆಸೆ ಮತ್ತು ಅದರ ಅಭದ್ರತೆಯಲ್ಲಿನ ಭಯದಲ್ಲಿ ಆಶಾಪೂರ್ವಕವಾಗಿ ಕಾಣಿಸಿದ್ದಾನೆ. ಇದಕ್ಕೆ ಪೂರಕವಾಗಿ ಹುಟ್ಟಿದ ಪುರೋಹಿತನು ಮಾನವನ ನಂಬಿಕೆಗಳನ್ನು ಬಲವಾಗಿಯೇ ಹಿಡಿದ.ಅಂದಿನಿಂದ ಇಂದಿನವರೆಗೂ ಸಹ ಈ ಪುರೋಹಿತ ವರ್ಗ ಪ್ರಭುತ್ವಕ್ಕೆ ಸರಿಸಾಟಿಯಾಗಿ ನಿಂತು ಬಂದಿದೆ.ಪ್ರಭು ಮತ್ತು ಪುರೋಹಿತ ಈ ಇಬ್ಬರೂ ಧರ್ಮ ಮತ್ತು ದೇವಾಲಯವನ್ನು ಉಪಯೋಗಿಸಿಕೊಂಡರು. ಆಗ ದೇವಾಸ್ಥಾನಗಳಲ್ಲಿ ಸಲ್ಲಿಸಬೇಕಾದ ಕಾಣಿಕೆಗಳ ಪಟ್ಟಿಯನ್ನೇ ಹಾಕಲಾಗುತ್ತಿತ್ತಂತೆ[9]. ಅದರಲ್ಲಿ ಆಹಾರ, ಹೆಂಗಸು ಮತ್ತು ಸಂಪತ್ತು ಮುಖ್ಯವಾಗಿ ಇರುತ್ತಿದ್ದವಂತೆ !!

**ಕ್ರಿ.ಪೂ 6ನೇ ಶತಮಾನ**

ಕ್ರಿಪೂ 6ನೇ ಶತಮಾನ ಎಂಬುದು ಬರಿ ಭಾರತಕ್ಕೆ ಮಾತ್ರವಲ್ಲದೆ ಇಡಿ ಜಗತ್ತಿಗೆ ಒಂದು ಪ್ರಮುಖವಾದ ಘಟ್ಟ. ಅದರ ಆಸುಪಾಸಿನ ಸಮಯದಲ್ಲಿ ಬಹುತೇಕ ವಿಶ್ವದೆಲ್ಲೆಡೆ ವೈಚಾರಿಕ ಕ್ರಾಂತಿಯಾಯಿತು.ಈ ಶತಮಾನವೆಂದರೆ ಒಂದು ಸಂಕ್ರಮಣ ಕಾಲ. ಅಲ್ಲಿ ಎಲ್ಲಾ ತರಹದವರೂ ಇದ್ದರು.ಏಕತತ್ವವಾದಿಗಳು, ಬಹುತತ್ವವಾದಿಗಳು, ವಿಷಯಲಂಪಟರು, ಭೌತವಾದಿಗಳು, ಭಾವನಾವಾದಿಗಳು, ಆಸ್ತಿಕರು, ನಾಸ್ತಿಕರು, ಹೀಗೆ ಎಲ್ಲರೂ. ಈ ವೈವಿದ್ಯತೆ ಎಲ್ಲಾ ಕಾಲದಲ್ಲಿಯೂ ಇರುತ್ತದಾದರೂ ಆಗ ಇವೆಲ್ಲವುಗಳ ಸಂಘರ್ಷ ಏರಿನದಾಗಿತ್ತು.

ಈ ಕಾಲದ ಕುರಿತು ಹೇಳುವ ಮುನ್ನ 'ಕಬ್ಬಿಣ'ದ ಬಗ್ಗೆ ತಿಳಿಯುವುದು ಅವಶ್ಯಕ. ಕಬ್ಬಿಣದ ಉಪಯೋಗ ತಿಳಿದದ್ದು ಮಾನವ ಇತಿಹಾಸದ ಮೈಲುಗಲ್ಲು. ಕಬ್ಬಿಣಯುಗ ತಾಮ್ರಯುಗಕ್ಕಿಂತ ಮಹತ್ವವಾದುದು. ಮನುಷ್ಯ ಶಿಲೆಯಿಂದ ತಾಮ್ರಕ್ಕೆ ಬದಲಾದದ್ದು ಅವನ ಬೌದ್ಧಿಕವಿಚಾರದ ಮಟ್ಟಿಗೂ ಅನುಕೂಲ. ವರ್ಗ ಸಂಸ್ಕೃತಿ ಹುಟ್ಟಿಗೆ ಇದೂ ಒಂದು ಕಾರಣ. ಭಾರತದ ವಿಚಾರದಲ್ಲಿ ಕ್ರಿಪೂ

1000ದಲ್ಲಿ ಮೊದಲಬಾರಿ ಕರ್ನಾಟಕದಲ್ಲಿಯೇ ಕಬ್ಬಿಣ ಬಳಕೆ ಆರಂಭವಾಗಿರುವುದು ತಿಳಿದುಬರುತ್ತದೆ[10]. ಅಂದರೆ ಗಂಗಾ ತೀರಕ್ಕಿಂತಲೂ ಮೊದಲು. ಗಂಗಾ ತೀರದಲ್ಲಿ ಕ್ರಿಪೂ 8–7ನೇ ಶತಮಾನದಲ್ಲಿ ದಾಖಲೆಗಳು ಸಿಗುತ್ತವೆ. ಕಬ್ಬಿಣದಿಂದ ಕೃಷಿಯಲ್ಲಾದ ಬದಲಾವಣೆಗಳೇ ನಾಗಾರೀಕತೆಯ ನಾಗಾಲೋಟಕ್ಕೆ ಕಾರಣ. ಕೃಷಿಯ ಬಗ್ಗೆ ಹೇಳುವಾಗ ಮಹಿಳೆಯರ ಬಗ್ಗೆಯೂ ಹೇಳುವುದು ಅವಶ್ಯಕ. ಕೃಷಿಯು ಮಹಿಳೆಯ ಆವಿಷ್ಕಾರ; ಆಹಾರ ಸಂಗ್ರಹಣೆ ಮಹಿಳೆಯರ ಕೆಲಸವಾಗಿತ್ತಾದ್ದರಿಂದ ಕೃಷಿ ಬಹುಮಟ್ಟಿಗೆ ಮಹಿಳೆಯರ ಆವಿಷ್ಕಾರ[11]ವೇ ಎಂಬುದನ್ನು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ. ಬಹುಶ ಮಾತೃಪ್ರಧಾನ ಕುಟುಂಬವು ಇದರೊಂದಿಗೆ ತಳಕು ಹಾಕಿಕೊಳ್ಳುತ್ತದೆ. ಈ ಮೂಲಕ ನಾಗರೀಕತೆ ನಿರ್ಮಾಣದಲ್ಲಿಯೂ ಮಹಿಳೆಯರ ಪಾತ್ರ ದೊಡ್ಡದು. ಸಿಂಧೂ ನಾಗರೀಕತೆಯು ಈಜಿಪ್ಟ್, ಮೆಸೊಪೊಟೋಮಿಯ ನಾಗರೀಕತೆಗಳಿಗಿಂತ ಹಲವು ವಿಷಯಗಳಲ್ಲಿ ಉತ್ತಮವಾಗಿತ್ತು ಮತ್ತು ಈ ನಾಗರೀಕತೆಯನ್ನು ಕಟ್ಟುವಲ್ಲಿ ಮಹಿಳೆಯರ ಪಾತ್ರ ಅಧಿಕವಾಗಿತ್ತು ಎಂದು ದೇವಿಪ್ರಸಾದರು ಹೇಳುವುದನ್ನು ನಾವಿಲ್ಲಿ ಗಮನಿಸಬಹುದು[12]. ಈ ನಾಗರೀಕತೆಯು ಭೂ ಕೇಂದ್ರಿತ ಕೃಷಿ ವ್ಯವಸ್ಥೆಯಾದ್ದರಿಂದ, ಕೃಷಿಯು ಮಹಿಳೆಯರ ಪಾಲಿನದೇ ಆಗಿದ್ದರಿಂದ ಈ ಮೇಲಿನ ನಿಲುವು ಸಹಜ. ಬಹುಶ 'ಶಾಕ್ತ' ಪರಂಪರೆಯು ಆ ಕಾಲದಲ್ಲಿ ಬಹುವಾಗಿಯೇ ಪ್ರಚಲಿತದಲ್ಲಿ ಇರಬೇಕು. ಚಂದಾ ಎನ್ನುವವರು ಹೇಳುವ ಪ್ರಕಾರ "ಆದ್ಯ ಶಕ್ತಿಯಾಗಿ ದೇವಿಯನ್ನು ಶಾಕ್ತರು ಪರಿಕಲ್ಪಿಸಿಕೊಳ್ಳುವುದು ಮತ್ತು ಇಡೀ ವಿಶ್ವದ ತಾಯಿಯಾದ ಜಗದಂಬೆಯ ಪರಿಕಲ್ಪನೆ ಎರಡೂ ಮಾತೃಪ್ರಾಧ್ಯಾನ್ಯವನ್ನು ಮಾನ್ಯ ಮಾಡುತ್ತಿದ್ದ ಸಮಾಜದಲ್ಲಿ ಅವಿರ್ಭವಿಸಿದವು"[13].

ನಾಗರೀಕತೆಯ ಉಗಮದಲ್ಲಿ ಒಂದು ದೇಶದ ಪರಿಸರ ಅತಿಮುಖ್ಯವಾದ ಪಾತ್ರವನ್ನು ವಹಿಸುತ್ತದೆ. "ಉತ್ತರಕ್ಕೆ ಹಿಮಾಲಯ, ಪೂರ್ವಕ್ಕೆ ಟೆನ್ನರಿಸಮ್ ಇಂದ, ಬರ್ಮಾ ಅಸ್ಸಾಮ್‌ನಿಂದ ಪಶ್ಚಿಮದಲ್ಲಿ ಹಿಂದುಕುಶ್ ಪರ್ವತ ಮತ್ತು ಸುತ್ತಲೂ ಸಮುದ್ರದಿಂದ ಭಾರತವು ತನ್ನಷ್ಟಕ್ಕೆ ತಾನೇ ಒಂದು ಚಿಕ್ಕ ಜಗತ್ತಾಗಿತ್ತು" ಎಂದು ಅಂಬೇಡ್ಕರ್ ಹೇಳುತ್ತಾರೆ[14]. ಜೊತೆಗೆ ಪ್ರಾಕೃತಿಕವಾಗಿ ಕೆಲವೇ ಕೆಲವು ಆರ್ಥಿಕ ಸ್ವಾವಲಂಬಿ ದೇಶಗಳಲ್ಲಿ ಭಾರತವೂ ಒಂದಾಗಿತ್ತು ಎಂದೂ ಸಹ ಅವರು ಹೇಳುತ್ತಾರೆ. ಈ ಬೌತಿಕ ಪರಿಸರವೇ ಅಂದಿನ ಸಮಾಜವನ್ನು ಬಹುವಾಗಿ ಪ್ರಭಾವಿಸಿದ್ದು.

ಆ ಕಾಲದಲ್ಲಿ ಕೇವಲ ಗಂಗಾ ಬಯಲೊಂದರಲ್ಲಿ ಮಾತ್ರವೇ ಸುಮಾರು 62 ಹೊಸ ಮತಧರ್ಮಗಳು ತಲೆಯೆತ್ತಿದುದಾಗಿ ಆರ್ಯಸ್ ಶರ್ಮಾರವರು ಹೇಳುತ್ತಾರೆ[15]. ಇದರಲ್ಲಿ ಬಹುಪಾಲು ಸ್ಥಳೀಯ ಆಚರಣೆಗಳ ಹಿನ್ನೆಲೆಯಲ್ಲಿ ಹುಟ್ಟಿದವುಗಳು. ಬೌದ್ಧ ಮತ್ತು ಜೈನ ಅದರಲ್ಲಿ ಪ್ರಮುಖವು. ಈ ಎರಡು ಧರ್ಮಗಳು ಬ್ರಾಹ್ಮಣ ಹಾಗು ಬ್ರಾಹ್ಮಣಧರ್ಮದ ವಿರುದ್ದದ ಬಂಡಾಯಗಳಾಗಿದ್ದರೂ ಸಹ

ಈ ಧರ್ಮಗಳ ಮೊದಲ ಹಿಂಬಾಲಕರುಗಳಲ್ಲಿ ಅನೇಕರು ಬ್ರಾಹ್ಮಣರೇಆಗಿದ್ದರು[16]. ಆ ಉಳಿದಂತೆ ಎಲ್ಲಾ ಧರ್ಮಗಳು ಸಮಕಾಲೀನ ಸ್ಪಂದನೆಯಾಗಿದ್ದವು. ಅದಕ್ಕೆ ಕಾರಣವಾದ ಸಾಮಾಜಿಕ ಪರಿಸ್ಥಿತಿಯನ್ನು ಹೀಗೆ ನೋಡಬಹುದು.

ಅದು ವರ್ಣಗಳ ಯುಗ. ಸದ್ಯ ಭಾವಿಸಿರುವ ಹರಪ್ಪ ಯುಗದ ಸಮ ಸಮಾಜ ಇಲ್ಲಿ ಇರಲಿಲ್ಲ. ಮಾತೃ ಪ್ರಧಾನ ವ್ಯವಸ್ಥೆಯು ಕುಂಠಿತವಾಗಿತ್ತು. ಮಹಿಳೆಯರು ಕೆಳ ಸ್ಥಿತಿಗೆ ಇಳಿಯಲ್ಪಟ್ಟಿದ್ದರು. ಮಹಿಳೆಯರನ್ನೂ ಶೂದ್ರರನ್ನೂ ವೇದಗಳ ಅಧ್ಯಯನದಿಂದ ದೂರವಿಡಲಾಗಿತ್ತು. ಕೃಷಿಗೆ ಅವಶ್ಯವಾದ ಪಶುಗಳನ್ನು ಯಾಗಬಲಿಯಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕೊಲ್ಲಲಾಗುತ್ತಿತ್ತು. ಯಜ್ಞಗಳ ಮೂಲಕವೇ ಜೀವ ತಲುಪುವ ಘಟ್ಟಗಳನ್ನು ನಿಶ್ಚಯಿಸಲಾಗಿತ್ತು. ಪುರೋಹಿತರ ಬಹುದೊಡ್ಡ ಪಡೆಯೇ ಇಂತಹವುಗಳನ್ನು ತನ್ನ ವೃತ್ತಿಯನ್ನಾಗಿ ಮಾಡಿಕೊಂಡಿತ್ತು. ಇದು ಸುಲಿಗೆಯ ರೂಪವನ್ನು ಪಡೆದುಕೊಂಡಿತ್ತು.

ಉಪನಿಷತ್‌ಗಳ ಕಾಲವೂ ಇದರಂತೆಯೇ ಕೂಡಿತ್ತು. ಆಹಾರವನ್ನು ವ್ಯರ್ಥವಾಗಿ ಅಗ್ನಿಯಲ್ಲಿ ಹಾಕಲಾಗುತ್ತಿತ್ತು. ವರ್ಣಗಳ ವಿಭಜನಾ ಆಧಾರದ ಮೇಲೆ ತಪ್ಪುಗಳಿಗೆ ಶಿಕ್ಷೆಗಳು ನಿಶ್ಚಯಿಸಲ್ಪಡುತ್ತಿದ್ದವು. ಬ್ರಾಹ್ಮಣ ಮತ್ತು ಕ್ಷತ್ರಿಯರಲ್ಲಿ ಹಿರಿತನಕ್ಕಾಗಿ ಸಮರವಿತ್ತು. ಇದೂ ಸಹ ಹೊಸ ಮತಗಳ ಕ್ರಾಂತಿಗೆ ಮುಖ್ಯ ಕಾರಣಗಳಲ್ಲಿ ಒಂದು. ಯಾವ ವೇದ ಪ್ರಾಮಣ್ಯವನ್ನು ಇಟ್ಟುಕೊಂಡು ಪುರೋಹಿತ ವರ್ಗವು ಹುಟ್ಟಿತೋ ಅದನ್ನು ಅಂತ್ಯ ಮಾಡಲು ಉಪನಿಷತ್ತಗಳ ಸಿದ್ದವಾದವು. ಆದರೆ ಮುಂದೆ ಈ ವೇದಾಂತ್ಯಗಳ ಉಪನಿಷತ್ತುಗಳನ್ನೇ ವೇದದ ಭಾಗವನ್ನಾಗಿ ಮಾಡಿದ್ದು ಇತಿಹಾಸದ ವ್ಯಂಗ. ಈ ವೇದಾಂತಗಳು ಪೂರ್ತಿಯಾಗಿ ಕ್ಷತ್ರಿಯರ ಸೃಷ್ಠಿಯೇ ಇರಬೇಕು. ಈ ಮುಂಚೆ ವೇದಗಳಾಗಲೀ, ಪುರೋಹಿತರಾಗಲೀ ಈ ಉಪನಿಷತ್ತುಗಳನ್ನು ತಿಳಿದಿರಲಿಲ್ಲವೆಂದು ಭಗವದ್ಗೀತೆಯು ಸ್ಪಷ್ಟವಾಗಿಯೇ ಹೇಳುತ್ತದೆ[17]. ಇಷ್ಟೇ ಅಲ್ಲದೆ ಬುದ್ದ ಮಹಾವೀರರೂ ಸಹ ಕ್ಷತ್ರಿಯರೇ  ಆಗಿದ್ದರು ಎಂಬುದು ಗಮನಿಸಬೇಕಾದ ಅಂಶ. ಈ ಕಾಲವನ್ನು ಸಂಶೋಧಕರು ಹೀಗೆ ಗುರುತಿಸುತ್ತಾರೆ “ಈ ಕಾಲದಲ್ಲಿ ಭಾರತೀಯ ಸಮಾಜದ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸ್ಥಿತಿಯು ಕ್ಷೀಣ ದೆಸೆಯಲ್ಲಿತ್ತು. ಯಜ್ಞ ಯಾಗಾದಿಗಳನ್ನು ಮಾಡುವುದೇ ಧರ್ಮವೆಂದು ಜನರ ಸಾಮಾನ್ಯ ನಂಬಿಕೆಯಾಗಿತ್ತು.ಧರ್ಮವು ಅನುಭೂತಿಯ ಅಂಶವೆಂಬುದನ್ನು ಜನರು ಮರೆತಿದ್ದರು. ಈ ಕಾಲದಲ್ಲಿ ಬಾಹ್ಯಾಚರಣೆಗಳಿಗೆ ಪ್ರಾಮುಖ್ಯತೆಯಿತ್ತು”.[18]

ಆರಂಭದಲ್ಲಿ ಮೂರನೆಯ ವರ್ಗವಾದ ವೈಶ್ಯರಿಗೂ ಉತ್ತಮ ಜಾಗವಿತ್ತು. ಕಾಲಕ್ರಮೇಣ ಅವರನ್ನು ಸಹ ಶೂದ್ರರ ಸ್ಥಾನಕ್ಕೆ ಇಳಿಸಲಾಯಿತು. ಸಹಜವಾಗಿಯೇ ಅದು ಅವರಲ್ಲಿ ಕೀಳರಿಮೆಯನ್ನು ಉಂಟುಮಾಡಿ, ಹೊಸ ವ್ಯವಸ್ಥೆಗೆ ಹಾತೊರುವಂತೆ ಮಾಡಿರಬೇಕು. ಇದಲ್ಲದೆ ಅಂದಿನ ಕಾಲದ

ಗಣಗಳ ನಡುವಿನ ಜಗಳದಿಂದ ಇವರ ವ್ಯಾಪರಕ್ಕೆ ವಿಶೇಷ ಅಡ್ಡಿಯಾಗಿರಬೇಕು. ಇದಕ್ಕೆ ಪೂರಕವಾಗಿಯೇ ಆಗ ಉದಯಿಸಿದ ಹಲವು ಧರ್ಮಗಳಲ್ಲಿ ಅಹಿಂಸೆಯೂ ಯುದ್ಧ ವಿರೋಧಿ ನಿಲುವೂ ಕಾಣಿಸಿಕೊಂಡಿದೆ.

ಈ ಯುಗವನ್ನು ನಾವು ಎರಡು ರೀತಿಯ ಮಾರ್ಗಗಳಿಂದ ಗುರುತಿಸಬಹುದು. ಒಂದು ಕರ್ಮಮಾರ್ಗ. ಇನ್ನೊಂದು ಜ್ಞಾನಮಾರ್ಗ. ಕರ್ಮಮಾರ್ಗಕ್ಕೆ ಉತ್ತಮ ಉದಾಹರಣೆ ಯಜ್ಞಗಳು. ಯಜ್ಞಬಲಿ ಮೂಲಕ ದೇವರನ್ನು ಆವಾಹಿಸಿಕೊಳ್ಳಬಹುದು ಎನ್ನುವ ನಂಬಿಕೆ. ಇದನ್ನು 'ಕರ್ಮ ಸಿದ್ಧಾಂತ'ದ ರೂಪದಲ್ಲೂ ನೋಡಬಹುದು. ಕರ್ಮಸಿದ್ಧಾಂತ ಎಂದರೆ ಮಾಡಿದುದನ್ನು ಅನುಭವಿಸುವುದು. ಈ ಜನ್ಮದಲ್ಲಿ ಮಾಡಿದ ಕರ್ಮಗಳಿಂದ ಮುಂದಿನ ಜನ್ಮದಲ್ಲಿ ಫಲಗಳು ಉಂಟಾಗುತ್ತವೆ ಎನ್ನುವ ನಂಬಿಕೆ. ಜಾತಿ ವ್ಯವಸ್ಥೆಯ ಬಿಗಿ ಬಂಧನಕ್ಕೆ ಇದೂ ಒಂದು ಕಾರಣ. ಇದು ಪ್ರಮುಖವಾಗಿ ಬಾಹ್ಯ ಆಚರಣೆಗಳನ್ನು ಹೇಳುವಂತದ್ದು. ಇದಕ್ಕೆ ವಿರುದ್ಧವೆಂಬಂತೆ ಇರುವುದು ಜ್ಞಾನಮಾರ್ಗ. ಇದು ಆತ್ಮವನ್ನು ಕುರಿತು ಪ್ರಸ್ತಾಪಿಸುತ್ತದೆ. ಇಲ್ಲಿ ಅಂತರಂಗದ ಜ್ಞಾನ ಮತ್ತು ಶುದ್ಧತೆಗೆ ಹೆಚ್ಚು ಒತ್ತು ಕೊಡಲಾಗುತ್ತದೆ. ಇದು ಉಪನಿಷತ್ತುಗಳ ಮಾರ್ಗ. ಉದ್ದಾಲಕ ಮತ್ತು ಶ್ವೇತಕೇತು ಘಟನೆಯ ಮೂಲಕ ಇದನ್ನು ಇನ್ನಷ್ಟು ಅರ್ಥ ಮಾಡಿಕೊಳ್ಳಬಹುದು[19].

ಶ್ವೇತಕೇತುವು ಹನ್ನೆರೆಡು ವರ್ಷದವನಿದ್ದಾಗಿನಿಂದ ಹಿಡಿದು ಇಪ್ಪತ್ತನಾಲ್ಕರವರೆಗೆ ವೇದಗಳನ್ನೆಲ್ಲಾ ಅಧ್ಯಯನ ಮಾಡಿ ಹಿಂದಿರುಗಿದನು. ಆಗ ತಂದೆಯಾದ ಉದ್ದಾಲಕನು ಅವನನ್ನು ಕೇಳುತ್ತಾನೆ 'ಶ್ವೇತಕೇತು ನೀನು ಗಂಭೀರ ಮನಸ್ಸುಳ್ಳವನೂ, ವೇದಜ್ಞಾನಾಭಿಮಾನಿಯೂ, ಆವಿನೀತ ಸ್ವಭಾವದವನೂ ಆಗಿರುವುದರಿಂದ ï ಯಾವುದರಿಂದ ಆಶ್ರುತವು ಶ್ರುತವಾಗುವುದೋ, ಅಮತವು ಮತವಾಗುವುದೋ, ಅವಿಜ್ಞಾನತವು ವಿಜ್ಞಾತವಾಗುವುದೋ– ಆ ಆದೇಶವನ್ನು ಕೇಳಿದೆಯಾ' ಎನ್ನುತ್ತಾನೆ. [19]

ಅದಕ್ಕೆ ಶ್ವೇತಕೇತುವು 'ಭಗವಂತನೇ ಆ ಆದೇಶವು ಯಾವುದು, ಪೂಜ್ಯರಾದ ಆಚಾರ್ಯಾರು ಇದನ್ನು ಖಂಡಿತವಾಗಿಯೂ ತಿಳಿದಿರಲಿಲ್ಲ. ತಿಳಿದಿದ್ದರೆ ಉಪದೇಶಿಸುತ್ತಿದ್ದರು. ನೀವೆ ಅದನ್ನು ನನಗೆ ಉಪದೇಶಿಸಬೇಕು'ಎನ್ನುತ್ತಾನೆ.

ಇಲ್ಲಿ ವೇದಜ್ಞಾನವು ಸಂಪೂರ್ಣವಲ್ಲ ಎಂಬುದನ್ನು ಸ್ಪಷ್ಟವಾಗಿಯೇ ಹೇಳಿದೆ. ವೇದ ಕಲಿಸಿದ ಆಚಾರ್ಯರಿಗೆ ಆ ಇನ್ನೊಂದು ದಿವ್ಯ ಜ್ಞಾನವು ತಿಳಿದಿರಲಿಲ್ಲವೆಂಬುದನ್ನೂ ಹೇಳಿದೆ. ಅದು ಪುರೋಹಿತರಿಗೆ ತಿಳಿದಿರದ ವಿಷಯ ಎಂದು ಒತ್ತಿ ಹೇಳಲಾಗಿದೆ. ಇದಲ್ಲದೆ ಭಗವದ್ಗೀತೆಯಲ್ಲಿ ಕೃಷ್ಣನು ಈ ಉಪನಿಷದ್ ಜ್ಞಾನವನ್ನು ಬಲ್ಲವರು ಯಾರ್‍ಯಾರು ಮತ್ತು ಅದರ ಪರಂಪರೆಯನ್ನೂ ಹೇಳುತ್ತಾನೆ[21].

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಅವನು ಹೇಳುವ ಪರಂಪರೆಯ ಪಟ್ಟಿಯಲ್ಲಿ ಕ್ಷತ್ರಿಯರು ಮಾತ್ರವೇ ಇರುವಂತದ್ದು. ಇದಕ್ಕೆ ಸಂವಾದಿಯಾಗಿ ಇನ್ನೊಂದು ಘಟನೆಯನ್ನು ಹೇಳಬಹುದು. ಒಮ್ಮೆ ನಾರದನು ಸನತ್ಕುಮಾರನ ಬಳಿ ತೆರಳಿ 'ನನಗೆ ಉಪದೇಶಿಸಬೇಕು' ಎಂದು ಕೇಳುತ್ತಾನೆ. ಅದಕ್ಕೆ ಸನತ್ಕುಮಾರನು 'ನೀನು ಇಲ್ಲಿಯವರೆಗೆ ಅರಿತುಕೊಂಡಿರುವುದನ್ನು ಹೇಳು' ಎನ್ನುತ್ತಾನೆ. ಆಗ ನಾರದನು ಹೇಳುತ್ತಾನೆ

"ಭಗವಂತನೇ ಋಗ್ವೇದವನ್ನು ಅರಿತಿರುತ್ತೇನೆ. ಯಜುರ್ವೇದ, ಸಾಮವೇದ, ನಾಲ್ಕನೆಯದಾದ ಅಥರ್ವವೇದ, ಐದನೆಯದಾದ ಇತಿಹಾಸ ಪುರಾಣಗಳು, ವೇದಗಳ ವೇದ, ಗಣಿತ, ...."ಹೀಗೆ ಎಲ್ಲಾವನ್ನೂ ಹೇಳಿ ಕೊನೆಗೆ "... ಭಗವಂತನೇ ನಾನು ಮಂತ್ರವನ್ನು ಮಾತ್ರ ಅರಿತಿರುತ್ತೇನೆ. ಆತ್ಮವನ್ನು ಅರಿತುಕೊಂಡಿಲ್ಲ" ಎನ್ನುತ್ತಾನೆ[21].

ಇಲ್ಲಿ 'ಮಂತ್ರ' ಎಂದರೆ ಕರ್ಮ, 'ಆತ್ಮ' ಎಂದರೆ ಜ್ಞಾನ. ಅಷ್ಟೆಲ್ಲಾ ವೇದಗಳೂ ವೆದಗಳ ಅಂಗಗಳನ್ನು ಅರಿತಿದ್ದಾಗಲೂ ಸಹ, ಸಾರ್ಥಕಕ್ಕೆ ಅವು ಪರಿಪೂರ್ಣವಲ್ಲ ಎಂಬ ವಾದವನ್ನು ಇಲ್ಲಿ ಮಾಡಲಾಗಿದೆ. ಬಹುಶಃ ಆತ್ಮವೊಂದನ್ನು ಬಿಟ್ಟು ಬುದ್ದ ಹೇಳಿದ್ದೆಲ್ಲವೂ ಉಪನಿಷದ್ ಆಗಿದೆ. ಎಷ್ಟಾದರೂ ಆತನು ಬಾಹ್ಯಾಚರಣೆಯ ವಿರೋಧಿಯೇ ತಾನೆ.

ಒಟ್ಟಾರೆ ಉಪನಿಷದ್ ಸಾರವನ್ನು ಈ ರೀತಿಯಾಗಿ ಹೇಳಬಹುದು. "ಉಪನಿಷತ್ತು ಮಾನವನ ಜೀವನವನ್ನು ನಿಕೃಷ್ಟವಾಗಿ ಭಾವಿಸುವುದಿಲ್ಲ. ಎಲ್ಲಿಯೂ ಅವನನ್ನು ದೂರುವುದಿಲ್ಲ. ಅದು ನಮ್ಮನ್ನು ಅಮೃತ ಪುತ್ರರು ಎಂದು ಕರೆಯುವುದು. ಮಾನವನನ್ನು ಪಾಪಿ ಎಂದು ಕರೆಯುವುದು ಈಶ್ವರ ನಿಂದೆ. ನಾವು ಬ್ರಹ್ಮನಿಂದ ಬಂದಿರುವವರು. ಅವನೆಡೆಗೆ ಹೊರಟಿರುವೆವು. ಸಧ್ಯಕ್ಕೆ ನಾವು ಇರುವುದು ಅವನಲ್ಲೆ. ಆದರೆ ತಾತ್ಕಾಲಿಕವಾಗಿ ನಾವು ಅವನನ್ನು ಮರೆತಿರುವೆವು. ನಮ್ಮ ನೈಜವಾದ ಸ್ಥಿತಿಯನ್ನು ನಾವು ನಮ್ಮ ಸಾಧನೆಯಿಂದ ಜ್ಞಾಪಿಸಿಕೊಳ್ಳಬೇಕಿದೆ. ನಾವುಗಳೆಲ್ಲಾ ಆಶಿಷ್ಠ, ಧೃಡಿಷ್ಠ, ಬಲಿಷ್ಠರಾಗಬೇಕೆಂದು ಉಪನಿಷತ್ತು ಹೇಳುತ್ತದೆ. ಅಂತೂ ಹೇಗೋ ಕಾಲಯಾಪನೆ ಮಾಡುವುದಲ್ಲ. ಧೀರರಾಗಿ ಬಾಳಬೇಕು. ಜೀವನವನ್ನು ಒಂದು ವರದಂತೆ ಸ್ವೀಕರಿಸಬೇಕು. ಬಾಳುವುದೊಂದು ಶಾಪವೆಂದು ಗೋಳಿಟ್ಟು ಒರಲುವ ಅಳುಮೋರೆಯ ಧರ್ಮವನ್ನು ಉಪನಿಷತ್ತು ಸಾರುವುದಿಲ್ಲ"[22].

**ಭೌತವಾದ–**

ಇದು ಭಾರತದ ಪ್ರಾಚೀನ ಪರಂಪರೆಗಳಲ್ಲಿ ಒಂದು. ಇದನ್ನು ಹರಪ್ಪ ಯುಗದವರೆವಿಗೂ ಸಂಶೋಧಕರು ಕೊಂಡೊಯ್ಯುತ್ತಾರೆ. ಜನಪ್ರಿಯತೆಯ ಮಟ್ಟದಲ್ಲಿ ಹಲವಾರು ಏಳುಬೀಳುಗಳನ್ನು ಕಂಡ ಇದು, ಕೇವಲ ಪ್ರತಿವಾದಿಗಳ ಗ್ರಂಥಗಳಲ್ಲಿ ಮಾತ್ರ ಉಳಿಯುವಂತಾಯಿತು. ಅದೂ ಅವರ ಸ್ವಮತ ಸಮರ್ಥನೆಯ ಸರಕಾಗಿ ಮಾತ್ರ. ಹಲವು ಕಾಲವಾದರೂ ಇದು ಪುರೋಹಿತಶಾಹಿ ವ್ಯವಸ್ಥೆಗೆ ಇದು ಪ್ರಬಲ ತಡೆಯಾಗಿರಬೇಕು. ತೀವ್ರ ಪ್ರತಿವಾದ ತೋರಿದ ಬೌದ್ದದಂತಹ ಧರ್ಮವು ಭಾರತದಲ್ಲಿ ಅವಸಾನವಾದಂತೆ ಇದೂ ಸಹ ಆಗಿರಬೇಕು. ಇದು ವೇದಗಳನ್ನು ಎಷ್ಟು ತೀವ್ರವಾಗಿ ವಿರೋಧಿಸಿತೆಂದರೆ " ವೇದಗಳನ್ನು ರಚಿಸಿದವರು ಮೂವರು ಮಾತ್ರ. ಭಂಡರು, ಧೂರ್ತರು, ನಿಶಾಚರರು" ಎಂದು ಇದು ಘೋಷಿಸಿತು. ಹೀಗೆ ನೇರಾನೇರಾ ಟೀಕಿಸಿದ ಮೇಲೆ ಇದು ವೇದವಾದಿಗಳ ಶತ್ರುವಾಗದೇ ಹೇಗೆ ಉಳಿದೀತು.

ಒಂದು ವೇಳೆ ಇತಿಹಾಸದುದ್ದಕ್ಕೂ ನಡೆದ ಈ ವೈಚಾರಿಕ ಸಂಘರ್ಷದಲ್ಲಿ ಈ ಬೌತವಾದಿಗಳೇನಾದರೂ ವಿಜಯಿಯಾಗಿದ್ದರೆ ನಮ್ಮ ಇಂದಿನ ಭಾರತವನ್ನು ಬೇರೆ ತೆರನಾಗಿ ಊಹಿಸಬಹುದಿತ್ತು. ತಾರ್ಕಿಕತೆಗೂ ಭಯಕ್ಕೂ ಇರುವ ವ್ಯತ್ಯಾಸ ಇಂತಹುದೇ. ತರ್ಕಗಳಲ್ಲಿ ಬೌತವಾದಿಯು ವಿಜಯಿಯಾದರೂ ಸಹ, ಭಾಗಶಃ ಜನಪ್ರಿಯವಾದರೂ ಸಹ, ಧೃಡವಾಗಿ ನಿಲ್ಲುವಲ್ಲಿ ಸೋಲಬೇಕಾಯಿತು. ಧರ್ಮ ಮತ್ತು ಪ್ರಭುತ್ವದ ಮೂಲಕ ಪುರೋಹಿತಶಾಹಿಯು ನೆರವೇರಿಸಿಕೊಂಡಿದನ್ನು ಇವರು ಸ್ಥಾಪಿಸಲಾರದೇ ಹೋದರು.

ಇದಕ್ಕೆ ಲೋಕಾಯಿತ ಎಂಬ ಹೆಸರಿನಿಂದಲೂ ಸಹ ಕರೆಯುತ್ತಾರೆ. ಜನರಲ್ಲಿ ಪ್ರಚಲಿತವಾದ್ದರಿಂದ ಅದು ಲೋಕಾಯತ (ಲೋಕೇಷು ಆಯಾತಃ) ಎಂಬ ಅರ್ಥ ವಿವರಣೆಯನ್ನು ಇದಕ್ಕೆ ಕೊಡಲಾಗುತ್ತದೆ[24]. ಸಾಂಖ್ಯ, ಭೌತ, ಚಾರ್ವಾಕ, ಬಾರ್ಹಸ್ಪತ್ಯ ಮುಂತಾದ ಈ ಎಲ್ಲವನ್ನೂ ಒಂದೇ ಎಂಬಂತೆ ಗುರುತಿಸಲಾಗುತ್ತದೆ. ಸರಳವಾಗಿ ಹೇಳಬೇಕೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕರಲ್ಲಿ ಅರ್ಥ ಮತ್ತು ಕಾಮವನ್ನು ಮಾನ್ಯ ಮಾಡುವುದೇ ಭೌತವಾದ. ಇನ್ನೂ ಸರಳವಾಗಿ ಹೇಳಬೇಕೆಂದರೆ 'ಇಂದ್ರಿಯ ಗ್ರಾಹ್ಯ'ವಾದುದನ್ನು ಮಾತ್ರವೇ ನಂಬುವಂತದ್ದು. ಈಗ ಇದನ್ನು 'ಸಾಲು ಮಾಡಿಯಾದರೂ ತುಪ್ಪ ತಿನ್ನು' ಎನ್ನುವಂತಹ ತೇಲು ಅರ್ಥದಲ್ಲಿ ಬಳಸುವುದೇ ಹೆಚ್ಚು. ಇದರ ಮೂಲದ ಬಗ್ಗೆ ಹಲವು ಅನುಮಾನಗಳಿವೆ. ಸಧ್ಯ ಒಪ್ಪಿಕೊಂಡಿರುವ ಚರಿತ್ರೆಯ ಪ್ರಕಾರ "ಸಾಂಖ್ಯವು ಮೂಲತಃ ನಾಸ್ತಿಕ. ಇದರ ಬೇರುಗಳು ವೇದಗಳಲ್ಲಿ ಇಲ್ಲ. ಅದಕ್ಕೂ ಮೂಲವಾದ ತಾಂತ್ರಿಕ ಪರಂಪರೆಯಲ್ಲಿವೆ"[25]. ನಂತರದ ಕಾಲಘಟ್ಟದಲ್ಲಿ ಇದನ್ನು ವೈದಿಕಕ್ಕೆ ಮಣಿಸುವ ಪ್ರಯತ್ನಗಳು ನಡೆದವು. ಅದರ ಜೊತೆಗೆ ಇದನ್ನು ನಾಶ ಮಾಡುವ ಪ್ರಯತ್ನವೂ ನಡೆಯಿತು. ಈ ಸಿದ್ಧಾಂತದ

ಮೂಲ ಸಾಂಖ್ಯವಾದವು ನಿರೀಶ್ವರ ಮತ್ತು ಪ್ರಕೃತಿವಾದದ್ದು. ಜೊತೆಗೆ ಅಬ್ರಾಹ್ಮಣರಿಂದ ಸೃಷ್ಠಿಯಾದದ್ದು.

**ಜೈನ ಧರ್ಮ–**

ಅವೈದಿಕ ಪರಂಪರೆಯಲ್ಲಿ ಹೆಸರಿಸಬಹುದಾದ ಪ್ರಮುಖ ಧರ್ಮಗಳೆಂದರೆ ಜೈನ ಮತ್ತು ಬೌದ್ದ. ಜೈನ ಧರ್ಮದ ಪ್ರಮುಖ ವ್ಯಕ್ತಿ ಮಹಾವೀರ. ಈತ ಬುದ್ದನ ಹಿರಿಯ ಸಮಕಾಲೀನ. ಆದರೆ ಈತನ ಕಾಲ ಕ್ರಿಪೂ ಆರಕ್ಕೂ ಸ್ವಲ್ಪ ಮುಂಚೆ. ಈ ಧರ್ಮ ಈತನಿಂದಲೇ ಸೃಷ್ಠಿಯಾದದ್ದಲ್ಲ. ಈತನಿಗಿಂತ ಮುಂಚೆಯೆ ಸುಮಾರು 23 ತೀರ್ಥಂಕರರು ಆಗಿ ಹೋಗಿದ್ದಾರೆ. ಹರಪ್ಪ ಮೆಹಂಜೋದಾರೋದಲ್ಲಿ ಸಿಕ್ಕಿರುವ ಅವಶೇಷಗಳು ಜೈನರವೇ ಎಂಬ ವಾದವಿದೆ[26]. ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳು ಆಗಬೇಕಿವೆ. ಆದರೂ ವೇದಗಳಿಗಿಂತಲೂ ಇದು ಪೂರ್ವದ್ದಾಗಿರಬಹುದಾದ ಸಾಧ್ಯತೆಯಿದೆ. ಋಗ್ವೇದದಲ್ಲಿ ಒಂದು ಮಂತ್ರ ಬರುತ್ತದೆ. "ಹೇ ದೇವಾ ನೀನು ಉಚ್ಚಕುಲದಲ್ಲಿ ಋಷಭದೇವನಿಗೆ ಸಮಾನರಾದ ಶ್ರೇಷ್ಠ ಆತ್ಮರು ಜನ್ಮವೆತ್ತುವಂತೆ ಮಾಡಲಾರೆಯಾ? ಆತನ ಅರ್ಹತ್ ಉಪಾದಿಯು ಧರ್ಮಸ್ಥಾಪನೆಯ ದ್ಯೋತಕವಾಗಿದೆ"[27]. ಜೈನರ ಧರ್ಮಸ್ಥಾಪಕನಾದ ಋಷಭನಾಥನೇ ಇಲ್ಲಿ ಹೇಳಿದಾತ. ಈತನನ್ನು ಆದಿನಾಥ ಎಂತಲೂ ಕರೆಯಲಾಗುತ್ತದೆ. ಕೇವಲ ವೇದಗಳಲ್ಲಿ ಮಾತ್ರವಲ್ಲ. ಪುರಾಣಗಳು, ಬೌದ್ದಧರ್ಮಗ್ರಂಥಗಳು, ಜೈನರವೇ ಕೃತಿಗಳು ಎಲ್ಲವೂ ಈ ಆದಿನಾಥನ ಪ್ರಾಚೀನತೆಯನ್ನು ಎತ್ತಿ ಹೇಳುತ್ತವೆ. ಒಂದು ವೇಳೆ ಈ 24 ತೀರ್ಥಂಕರರ ಬಗ್ಗೆ ಐತಿಹಾಸಿಕ ಸಾಕ್ಷಿಗಳು ಸಿಕ್ಕ ಪಕ್ಷದಲ್ಲಿ, ಧರ್ಮವನ್ನು ಕುರಿತಾದ ನಮ್ಮ ಕಾಲದ ತಿಳುವಳಿಕೆಯನ್ನು ಅತಿಶಯ ಹಿಂದಕ್ಕೆ ಒಯ್ಯಬೇಕಾಗುತ್ತದೆ. ಧರ್ಮದ ಇತಿಹಾಸವನ್ನು ಮತ್ತೊಮ್ಮೆ ಬರೆಯಬೇಕಾಗುತ್ತದೆ. ಮೂಲ ಜೈನವು ಬುಡಕಟ್ಟುಗಳ ರೂಪದಲ್ಲಿ ಇದ್ದಿರಬಹುದಾದ ಸಾಧ್ಯತೆಯಿದೆ. ಕಾರಣ ಬುಡಕಟ್ಟು ರೀತಿಯ ವೃಕ್ಷಪೂಜೆಯು ತೀರ್ಥಂಕರರ ಜೊತೆಯಲ್ಲಿ ಅಂಟಿಕೊಂಡು ಬಂದಿದೆ.

ಜೈನವೂ ಮೊದಲಿನಿಂದಲೂ ಅಹಿಂಸೆಯನ್ನು ಬೋದಿಸುತ್ತಾ ಬಂದಿದೆಯಾದರೂ, ಕ್ರಿಪೂ ಆರರಲ್ಲಿ ಅದು ಹಿಂದೆಂದಿಗಿಂತಲೂ ಹೆಚ್ಚು ಸಮಕಾಲೀನವಾಗಿ ಬಿಡುತ್ತದೆ. 'ಅಹಿಂಸೋ ಪರಮೋ ಧರ್ಮೋ' ಎಂದು ಘೋಷಿಸಿಕೊಂಡು ಬಿಡುತ್ತದೆ. ಕ್ಷತ್ರಿಯನೋರ್ವನಿಂದ ಇದು ದೊಡ್ಡಕೂಗು ಪಡೆಯಿತಾದರೂ ವೈಶ್ಯ(ವರ್ತಕ) ಸಮುದಾಯವು ಇದರ ದೊಡ್ಡ ಆಧಾರಸ್ಥಂಬ ಎನ್ನಬಹುದು. ಬೌದ್ದಧರ್ಮ ಬರುವ ಮುಂಚೆಯೆ ಇದು ಬಹುವಾಗಿ ವಿಕಾಸ ಹೊಂದಿತ್ತು. ಮಹಾವೀರನ ಕಾಲದಲ್ಲಿ ಶಿಖರವನ್ನು ಮುಟ್ಟಿತು. ಇದು ಪುರೋಹಿತಶಾಹಿಗೆ ಅತಿಹೆಚ್ಚು ಮುಖಾಮುಖಿಯಾದದ್ದು ಆಗಲೇ

ಇರಬೇಕು. ಮಾನವ ಸಮುದಾಯದ ಅಸಮಾನತೆಯನ್ನು ಒಪ್ಪದ ಇವರು ವೇದಪ್ರಾಮಾಣ್ಯವನ್ನು ನಿರಾಕರಿಸಿದರು. ಮತ್ತು ವೈದಿಕ ದೇವತೆಗಳನ್ನೂ ಸಹ ಸಾಧ್ಯವಾದಷ್ಟು ದೂರ ಇಟ್ಟರು.

ಇವರು ನಾಸ್ತಿಕರಾದರೂ ಸಹ ಕರ್ಮಸಿದ್ಧಾಂತವನ್ನು ಒಪ್ಪುತ್ತಾರೆ. ಪರಲೋಕದ ಅಸ್ತಿತ್ವವನ್ನು ಒಪ್ಪುತ್ತಾರೆ. ವ್ರತ ಪೂಜೆಗಳಿಂದ ದೇವತೆಗಳನ್ನು ಒಲಿಸಿಕೊಳ್ಳುವುದನ್ನು ಒಪ್ಪುತ್ತಾರೆ. ಆದರೆ ಇವರು ಮಾನವನಲ್ಲದ ದೇವರ ಪ್ರತ್ಯೇಕ ಅಸ್ತಿತ್ವವನ್ನು ಒಪ್ಪುವುದಿಲ್ಲ. ಇವರು ಸಾಧನೆಗಳಿಂದ ಸಾಧನೆಗೇರಿದ ಮನುಷ್ಯನನ್ನು ಮಾತ್ರವೇ ಅರ್ಹಂತ ಪದವಿಯಲ್ಲಿ ಕಾಣುತ್ತಾರೆ. ನಮ್ಮ ನಡುವೆಯೆ ಹುಟ್ಟಿದ ಮನುಷ್ಯರು ತಮ್ಮ ಉದಾತ್ತ ಜೀವನದಿಂದ ದೇವರ ಪಟ್ಟವನ್ನು ಕಟ್ಟಿಕೊಳ್ಳಬಹುದು. ಆದರೆ ಇತಿಹಾಸದ ಅನಿವಾರ್ಯತೆಯಲ್ಲಿ ವೈದಿಕವನ್ನು ಒಳಬಿಟ್ಟುಕೊಂಡ ಜೈನವು ತನ್ನತನ್ನವನ್ನು ಕಳೆದುಕೊಳ್ಳಬೇಕಾಯಿತು.

**ಬೌದ್ಧ ಧರ್ಮ–**

ಜಯದೇವ ಕವಿಯು ಹೀಗೆ ಹೇಳುತ್ತಾನೆ "ಬುದ್ಧ ಸ್ವರೂಪಿಯಾದ ಕೇಶವನು ಯಜ್ಞಗಳನ್ನು ನಿಂದಿಸುತ್ತಾನೆ. ಯಜ್ಞಗಳಲ್ಲಿ ನಡೆಯುವ ಪಶುಘಾತಗಳನ್ನು ನೋಡಿ ಅನುಕಂಪಿನಾದ ಬುದ್ಧನೇ ನೀನು ಪಶುಬಲಿಗೆ ಕಾರಣವಾದ ಯಜ್ಞಗಳನ್ನು ಖಂಡಿಸಿದ್ದೀಯೇ"[28]. ಇಲ್ಲಿ ಎರಡು ವಿಷಯಗಳ ರೂಪಕಗಳನ್ನು ಸಾಧಿಸಲಾಗಿದೆ. ಒಂದು ಬುದ್ಧನು ಯಜ್ಞಗಳನ್ನು ವಿರೋಧಿಸಿದ್ದು. ಈ ಮುಂಚೆಯೆ ಹೇಳಿದಂತೆ ಅಸಂಖ್ಯ ರೀತಿಯಲ್ಲಿ ಪಶುಗಳನ್ನು ಆಗ ಬಲಿಕೊಡಲಾಗುತ್ತಿತ್ತು. ಇದನ್ನು ಬುದ್ಧನು ವಿರೋಧಿಸಿ ಅಹಿಂಸೆಯನ್ನು ಸಾರಿದನು. ಇದನ್ನು ಹೇಳುವುದರ ಜೊತೆಗೆ ಕವಿಯು ಕವಿಯು ಇನ್ನೊಂದು ವಿಷಯವನ್ನು ಹೇಳುತ್ತಾನೆ. ಅದು ಬುದ್ಧನು ವಿಷ್ಣುವಿನ ಅವತಾರ ಎಂಬುದನ್ನು. ಒಂದು ಕಡೆ ಯಜ್ಞವಿರೋಧಿಯಾಗಿದ್ದ ಬುದ್ಧನು ಬ್ರಾಹಣರ ಅಂದರೆ ಪುರೋಹಿತರ ವಿರೋಧಿಯೂ ಆಗಿದ್ದ.ಆದರೆ ಕೃಷ್ಣನು ವೈದಿಕರ ಅವತಾರ ಪುರುಷ. ಆದರೂ ಇಬ್ಬರನ್ನೂ ಒಂದೇ ಅವತಾರ ಎಂದು ಕರೆಯುವುದು ಯಾಕೆ. ಇದು ಪರೋಹಿತಶಾಹಿಯ ಅವಕಾಶವಾದಿ ನಡೆಯಲ್ಲದೆ ಮತ್ತೇನೂ ಅಲ್ಲ. ಅಲ್ಲದೆ ಕವಿ ಇನ್ನೊಂದು ವಿಷಯವನ್ನು ಕುರಿತೂ ಸಹ ಹೇಳುತ್ತಿರಬಹುದು. ಅದೆಂದರೆ, ಭಾಗವತ ಪಂಥೀಯನಾದ, ಸ್ಥಳೀಯ ಜನಾಂಗವೊಂದರ ನಾಯಕನಾದ ಕೃಷ್ಣನೂ ಸಹ ಯಜ್ಞವಿರೋಧಿಯಗಿದ್ದ. ದನಕರುಗಳನ್ನೇ ನಂಬಿದ ಜನಾಂಗವೊಂದು ಅವುಗಳನ್ನೇ ಯಜ್ಞಕ್ಕೆ ಬಲಿಕೊಡಲು ಹೇಗೆ ಒಪ್ಪೀತು ಅಲ್ಲವೇ. ಈ ಹಿನ್ನೆಲೆಯಲ್ಲಿ ಬುದ್ಧ ಸ್ವರೂಪಿಯಾದ ಕೇಶವನು ಯಜ್ಞಗಳನ್ನು ನಿಂದಿಸುತ್ತಾನೆ ಎಂದು ಕವಿಯು ಸೂಚ್ಯವಾಗಿ ಹೇಳಿರಬಹುದು. ಧಾರ್ಮಿಕ ಇತಿಹಾಸದ ದುರಂತದಲ್ಲಿ ಈ ಇಬ್ಬರೂ ಶೋಷಿತ ವರ್ಗದವರಿಗೆ ಅವತಾರದ ಭಾಗವಾಗಿಬಿಟ್ಟರು.

ದೇವಿಪ್ರಸಾದ ಚಟ್ಟೋಪಾಧ್ಯಾಯರು ಆ ಕಾಲದ ಪ್ರಮುಖ ಮೂರು ಅಲೆಗಳನ್ನು ಕುರಿತು ಪ್ರಸ್ತಾಪಿಸುತ್ತಾರೆ(****). ಅವು ಉದ್ದಾಲಕ ಆರುಣಿ, ಯಾಜ್ಞವಲ್ಕ ಮತ್ತು ಶಾಕ್ಯಮುನಿ. ಉದ್ದಾಲಕ ಆರುಣಿಯು ವಸ್ತುನಿಷ್ಠವಾದಿ ಮತ್ತು ಪ್ರಕೃತಿವಾದಿ.ಯಾಜ್ಞವಲ್ಕ ಭಾವನಾವಾದಿ. ಮತ್ತು ಶಾಕ್ಯಮುನಿ ಇವೆರಡಕ್ಕೂ ಕೊಂಚ ಭಿನ್ನ. ಇವನು ಆಧ್ಯಾತ್ಮ ಮತ್ತು ತತ್ವಶಾಸ್ತ್ರದಿಂದ ಯಾವತ್ತೂ ದೂರವೇ ಉಳಿದ.ಅವನಿಗಿದ್ದ ಗುರಿ ಒಂದೇ, ಮನುಷ್ಯರನ್ನು ದುಃಖದಿಂದ ಪಾರು ಮಾಡುವುದು. ಬುದ್ದ ತನ್ನ ಹಿಂಬಾಲಕರಿಗೆ ಹೇಳುತ್ತಿದ್ದದಿಷ್ಟೇ " ಭಿಕ್ಕುಗಳೇ ನಾನು ಎರಡು ವಿಚಾರಗಳನ್ನು ಭೋಧಿಸುತ್ತೇನೆ. ನೋವು ಮತ್ತು ನೋವಿನ ಶಮನ"[29].

ಮುದುಕ, ರೋಗಿ, ಹೆಣವನ್ನು ನೋಡಿ ಬುದ್ದನ ಮನಸ್ಸು ಬದಲಾಯಿತು ಎನ್ನುವುದನ್ನು ನಾವೆಲ್ಲರೂ ಕತೆಯಾಗಿ ನೋಡಿದ್ದೇವೆ. ಅವನು ನೋಡಿದ್ದು ಸುಳ್ಳಲ್ಲ. ಆದರೆ ಅವನು ಅಷ್ಟನ್ನು ಮಾತ್ರವೇ ನೋಡಲಿಲ್ಲ. ಅವನು ಮನುಷ್ಯ ಅಜ್ಞಾನದಲ್ಲಿ ನರಳುವುದನ್ನು ನೋಡಿದ. ಅವನು ಮನುಷ್ಯ ದೇವರಿಗೆ ಮೊರೆಯಿಡುವುದನ್ನು ನೋಡಿದ. ವ್ಯರ್ಥವಾಗಿ ಕೊಲ್ಲುವುದನ್ನೂ ಹಿಂಸೆಯು ಗೆಲ್ಲುವುದನ್ನು ನೋಡಿದ. ಸುಳ್ಳನ್ನು, ಮೋಸವನ್ನು, ಜಗಳವನ್ನು ನೋಡಿದ. ಆದರೆ ತನ್ನ ಧೀರ್ಘ ಜೀವನದಲ್ಲಿ ಅವನು ದೇವರನ್ನೂ ಸ್ವರ್ಗವನ್ನೂ ಅತಿಮಾನುಷ ಶಕ್ತಿಯನ್ನೂ ಯಾವತ್ತೂ ನೋಡಲಿಲ್ಲ.

ಅವನ ಕಾಲದ ಸಂಹಿತೆಯ ಈ ಸಾಲುಗಳನ್ನು ನೋಡಿ "ಪುರುಷನಾದವನು ತಾಯಿಯಾದರೂ ಸೋದರಿಯಾದರೂ ಮಗಳಾದರೂ ಅವರೊಡನೆ ಏಕಾಂತವಾಗಿರಬಾರದು. ಇಂದ್ರಿಯಗಳು ಬಲವಾಗಿದ್ದು ವಿದ್ವಾಂಸನನ್ನೂ ಸೋಲಿಸಬಲ್ಲವು"[30]. ಆ ಕಾಲದ ನೈತಿಕ ಮಟ್ಟವನ್ನು ಈ ಮಟ್ಟಿಗೆ ಜಾಗೃತಗೊಳಿಸುವ ಅವಶ್ಯಕತೆ ಏನಿತ್ತು. ಆ ಕಾಲದಲ್ಲಿ ಬ್ರಾಹ್ಮಣೀಯ ಆಚರಣೆಗಳು ಸಮಾಜದಲ್ಲಿ ತೇಲಾಡುತ್ತಿದ್ದವು. ಬುದ್ದನು ಪುರೋಹಿತಶಾಹಿಯನ್ನು ವಿರೋಧಿಸುವ ಜೊತೆ ಜೊತೆಯಲ್ಲಿ ಮನುಷ್ಯನ ದುಃಖಗಳಿಗೆ ಪರಿಹಾರವನ್ನೂ ಹುಡುಕಬೇಕಿತ್ತು. ಪ್ರಮುಖವಾಗಿ ಸಮಾಜದ ನೈತಿಕ ಮಟ್ಟವನ್ನು ಸುಧಾರಿಸಬೇಕಿತ್ತು.

ಆದರೆ ಬುದ್ದನು ತನ್ನ ಸಮಕಾಲೀನರಂತೆ ಯಾವತ್ತೂ ವಿಶ್ವದ ಮೂಲವನ್ನು ಅರಿಯುವ ಗೋಜಿಗೆ ಹೋಗಲಿಲ್ಲ. ದೇವರನ್ನು ಹುಡುಕಲಿಲ್ಲ. ತಾನಿರುವ ಜಾಗ ಮತ್ತು ಕಾಲವಲ್ಲದೇ ಅವನಿಗೆ ಮತ್ತಾವುದು ಬೇಕಿರಲಿಲ್ಲ. ಅವನು ಹೇಳುತ್ತಾನೆ "ಇದೇ ವರ್ತಮಾನದ ಜೀವನದಲ್ಲಿ ಮಾನಸಿಕ ಅಮಲುಗಳನ್ನು ನಿವಾರಿಸಿಕೊಳ್ಳುವ ಹೊಸಸಿದ್ಧಾಂತ ನನ್ನದು. ಭವಿಷ್ಯದ ಜೀವನದಲ್ಲಿ ಮಾತ್ರವೇ ಅವನ್ನು ಕಿತ್ತೊಗೆಯಲು ಸಾಧನವೇನೆಂಬುದು ನನ್ನ ಉಪದೇಶವಲ್ಲ. ಈಗ, ಇಲ್ಲಿ ಮತ್ತು ಭವಿಷ್ಯದಲ್ಲಿ ಅದನ್ನು ಕಿತ್ತೊಗೆಯುವುದು ಹೇಗೆಂಬುದು ನನ್ನ ತತ್ವದ ಸಾರ"[31] ಎಂದು ಹೇಳಿದನು. ಹೀಗೆ ಅವನ ದೃಷ್ಠಿಯೆಲ್ಲವೂ ವರ್ತಮಾನದಲ್ಲಿ ನೆಲೆಗೊಂಡಿತ್ತು.

**ಯಹೂದಿ ಧರ್ಮ(ಹಿಬ್ರೂ)–**

ಇದರ ಇತಿಹಾಸವನ್ನು ಸುಮಾರು ಕ್ರಿಪೂ 2000ದ ವರೆಗೂ ಒಯ್ಯಲಾಗುತ್ತದೆ. ಈಗ ಜಗತ್ತಿನ ಅತಿ ದೊಡ್ಡ ಧರ್ಮಗಳಾದ ಇಸ್ಲಾಂ ಮತ್ತು ಕ್ರೈಸ್ತ ಗಳ ಮೂಲ ಬೇರುಗಳನ್ನು ಇದರಲ್ಲಿಯೇ ಹುಡುಕಲಾಗುತ್ತದೆ. ಈ ಧರ್ಮದ ಸ್ಥಪಕ ಅಬ್ರಹಾಂ. ಸರಿಸುಮಾರು ವೇದಗಳ ಕಾಲದಲ್ಲಿಯೇ ಈ ಹಿಬ್ರೂ ನಾಗರೀಕತೆಯೂ ಇತ್ತು. ಬೈಬಲ್ಲಿನ ಭಾಗವಾದ ಹಳೆಯ ಒಡಂಬಡಿಕೆಯು ಇವರದೇ ಆಗಿದೆ. ಇದನ್ನು ಒಬ್ಬರೇ ರಚಿಸಿದ್ದಲ್ಲ. ವೇದಗಳಂತೆ ಹಲವು ಜನ ಋಷಿಗಳು ಇದರಲ್ಲಿ ಪಾಲುದಾರರು.

ಮೊದಮೊದಲು ಯಹೂದಿಗಳು ಕಲ್ಲು, ಗಿಡಮರ, ಪ್ರಾಣಿಗಳು ಇಂತಹ ಮೊದಲಾದುವನ್ನು ಪೂಜಿಸುತ್ತಿದ್ದರು. ಅಬ್ರಹಾಮನ ಕಾಲದಲ್ಲಿ ಯೆಹೋವಾ ಎನ್ನುವವನು ಪರಮ ದೈವವಾಗಿದ್ದನು. ಇವರು ಮೂರ್ತಿ ಪೂಜೆಯನ್ನು ನಿರಾಕರಿಸುತ್ತಾರೆ. ಮೊದಲು ನಿಮ್ಮ ನೆರೆಹೊರೆಯವರನ್ನು ಪ್ರೀತಿಸಿ ಎಂದು ಸಾರಿದವರು ಇವರೇ. ತನ್ನ ಭೌದ್ಧಿಕ ಹಾಗು ದೈಹಿಕ ಇಂದ್ರಿಯಗಳನ್ನು ನಿಗ್ರಹಿಸಿ, ಕಾಮನೆಗಳನ್ನು ವಶದಲ್ಲಿ ಹಿಡಿದುಕೊಳ್ಳುವ ಮನುಷ್ಯನು ಪವಿತ್ರನಾದವನು ಎಂಬುದು ಇದರ ತಾತ್ವಿಕತೆ. ಆ ಋಷಿಗಳು ಹೇಳುತ್ತಾರೆ " ಯಾರು ಸಂತೃಪ್ತ ಮನಸ್ಸಿನವರಾಗಿ ಹರ್ಷದಿಂದ ದೇವರ ಆಜ್ಞೆಗನುಸಾರವಾಗಿ ಆಚರಿಸುತ್ತಾರೋ ಅವರಲ್ಲಿಯೇ ದೇವರ ಸಾನ್ನಿಧ್ಯವಿರುತ್ತದೆ"[32]. ಇಂದು ಜಗತ್ತಿನಲ್ಲಿ ಇವರು ತೀರ ಅಲ್ಪಸಂಖ್ಯಾತರಾಗಿ ಉಳಿದಿದ್ದಾರೆ. ಈಗಿನ ಇಸ್ರೇಲ್‌ನಲ್ಲಿಯೇ ಇವರು ಬಹುವಾಗಿ ನೆಲೆಗೊಂಡಿದ್ದಾರೆ. ಆಗಿನಿಂದಲೂ ಹಿಡಿದು ಈಗಲೂ ಸಹ ಇವರು ಧಾರ್ಮಿಕ ಯುದ್ಧಗಳಲ್ಲಿ ತೊಡಗಿಯೇ ಇದ್ದಾರೆ.

ಬೌದ್ದ ಧರ್ಮದ ಬಗ್ಗೆ ಹೇಳುತ್ತಾ ಸ್ವಾಮಿ ಧರ್ಮತೀರ್ಥರು ಯಹೂದಿಯರ ಕುರಿತಾಗಿಯೂ ಕೆಲವೊಂದು ಮಾತುಗಳನ್ನು ಹೇಳುತ್ತಾರೆ. ಅವುಗಳೆಂದರೆ "ಪ್ಯಾಲೇಸ್ತೇನಿನ ಯಹೂದಿಗಳು ಯೇಸುಕ್ರಿಸ್ತನಿಗೆ ಜನ್ಮವಿತ್ತರು. ಆದರೆ ಅವರೇ ಅವನನ್ನು ಶಿಲುಬೆಗೆ ಏರಿಸಿದರು. ಅವನ ಧರ್ಮವನ್ನು ತಿರಸ್ಕರಿಸಿದರು. ಅವರ ದೇಶ ಮುಸ್ಲಿಮರ ಹಸ್ತಾಂತರವಾಯಿತು. ಅಲ್ಲಿ ಬ್ರಿಟನ್ ಈಗ ಯಹೂದಿಗಳು ಹಾಗು ಮುಸ್ಲಿಮರ ನಡುವೆ ಸಮತೋಲನ ಸಾಧಿಸುತ್ತಿದೆ. ಯಹೂದಿಗಳು ಪ್ರಪಂಚದಲ್ಲಿ ರಾಜ್ಯರಹಿತ ಜನರಾದರು. ... ಹೀಗೆ ಬೌದ್ದ ಧರ್ಮದಂತೆ ಕ್ರೈಸ್ತ ಧರ್ಮವೂ ತಮ್ಮ ತಮ್ಮ ನಾಡಿನಿಂದಲೇ ತಿರಸ್ಕೃತವಾಗಿ ಎಲ್ಲೆಡೆ ಹರಡಿದವು. ಆದರೆ ಹಿಂದುಗಳು ಮತ್ತು ಯಹೂದಿಗಳು ಮಾನವ ಜನಾಂಗದ ತಬ್ಬಲಿಗಳಾಗಿದ್ದಾರೆ"[40]. ಕ್ರೈಸ್ತ ಧರ್ಮಕ್ಕೆ ಹಿನ್ನೆಲೆಯಾದ ಈ ಯಹೂದಿಯು ತನ್ನದೆಂಬ ಸ್ವಂತ ನೆಲವೆನ್ನುವುದು ಇಲ್ಲದೆ ಅನಾಥವಾಯಿತು. ಸಧ್ಯ 'ಇಸ್ರೇಲ್' ಎಂಬಲ್ಲಿ ಅಳಿದುಳಿದ ಯಹೂದಿಯರು ಒಂದಾಗಿ ತಮ್ಮದೇ ನಾಡನ್ನು ಸ್ಥಾಪಿಸಿಕೊಂಡಿದ್ದಾರೆ.

**ಜರತುಷ್ತ್ರ–**

ಈತ ಪ್ರವಾದಿ. ಈತನ ಧರ್ಮವನ್ನು ಈತನ ಹೆಸರಿನಿಂದಲೇ ಕರೆಯುತ್ತಾರೆ. ಇದಕ್ಕೆ 'ಪಾರಸಿ ಧರ್ಮ'ಎನ್ನುವ ಹೆಸರೂ ಇದೆ. ಈ ಪ್ರವಾದಿಯ ಜನನದ ಕತೆ ಹೀಗಿದೆ. ದೇವತೆಯು ಹಯೋಮ ಗಿಡವನ್ನು ಹೊಕ್ಕು, ನಂತರ ಕನ್ಯೆಯೋರ್ವಳ ಹೊಟ್ಟೆಯನ್ನು ಪ್ರವೇಶಿಸುತ್ತಾಳೆ. ಆಕೆಯನ್ನು ಪುರೋಹಿತನು ವಿವಾಹವಾಗಿ ಈತನು ಜನಿಸುತ್ತಾನೆ[33]. ಮಹಾತ್ಮರ ಹುಟ್ಟಿನ ಹಿಂದೆ ಪುರೋಹಿತರ ಪ್ರವೇಶ ಯಾವಾಗಲೂ ಇದ್ದದ್ದೆ. ಸದ್ಯ ಇದೊಂದು ಕತೆ ಅಷ್ಟೆ. ಈ ಪ್ರವಾದಿಯನ್ನು ಆರ್ಯ ಸಂತಾನಕ್ಕೆ ಹತ್ತಿರಿಸಲಾಗಿದೆ. ಹಾಗೆ ನೋಡಿದರೆ ಈ ಧರ್ಮದ ತತ್ವಗಳು ಅನೇಕವು ವೈದಿಕ ಧರ್ಮಕ್ಕೆ ಹೋಲಿಕೆಯಾಗುತ್ತವೆ.

ಇವರು ಅಗ್ನಿಯನ್ನು ಪೂಜಿಸುತ್ತಾರೆ. ಇವರಿಗೆ ಆಗ ಗುಡಿಗಳಾಗಲೀ ಪ್ರತಿಮೆಯಾಗಲೀ ಇರಲಿಲ್ಲ. ಯಜ್ಞಕುಂಡದಲ್ಲಿ ಬಲಿಯನ್ನು ಅರ್ಪಿಸುವುದರ ಮೂಲಕ ದೇವರನ್ನು ಪ್ರಾರ್ಥಿಸಲಾಗುತ್ತಿತ್ತು. ಇವರ ಧರ್ಮಗ್ರಂಥವನ್ನು 'ಅವಾಸ್ತಾ' ಕರೆಯಲಾಗುತ್ತದೆ. ಜರಾತುಷ್ತ್ರನ ಆಗಮನ ಪೂರ್ವದಲ್ಲಿ ಆ ಜನರು ನೂರಾರು ದೇವ ದೇವತೆಗಳನ್ನು ಪೂಜಿಸುತ್ತಿದ್ದರು. ಈತನು ಅವರನ್ನು 'ಅಹುರ್‌ಮುಜ್ದ' ಎಂಬ ಏಕದೇವತೆಗೆ ತಿರುಗಿಸಿದನು. ಈತನು ಮೂರು ಕರ್ತ್ಯವ್ಯಗಳನ್ನು ಬೋಧಿಸಿದನು. ಅವುಗಳೆಂದರೆ–

1. ಶತ್ರುವನ್ನು ಮಿತ್ರನನ್ನಾಗಿ ಮಾಡಿಕೊಳ್ಳಬೇಕು
2. ದುಷ್ಟನನ್ನು ಸದಾಚಾರಿಯಾಗಿ ಮಾಡಬೇಕು
3. ಅಶಿಕ್ಷಿತನನ್ನು ಶಿಕ್ಷಿತನನ್ನಾಗಿ ಮಾಡಬೇಕು

ಈ ಧರ್ಮವು ಜರಾತುಷ್ತ್ರನ ಸಮಯದಲ್ಲಿ ಆ ಪ್ರದೇಶದಲ್ಲಿ ತೀವ್ರವಾಗಿ ವ್ಯಾಪಿಸಿತು. ನಂತರದ ಕಾಲಘಟ್ಟದಲ್ಲಿ ಮಹಮ್ಮದಿಯರಿಂದ ನಡೆದ ದಾಳಿಯಲ್ಲಿ ಅವರೆಲ್ಲರೂ ಸಾಮೂಹಿಕವಾಗಿ ಇಸ್ಲಾಂ ಧರ್ಮಕ್ಕೆ ಸೇರಿಕೊಂಡರು.

**–ಕನ್‌ಫ್ಯೂಶಿಯಸ್– ಲಾವೋತ್ಸೆ**

ಚೀನಾದ ಎರಡು ಪ್ರಮುಖ ತತ್ವಗಳಿವು. ಕನ್‌ಫ್ಯೂಶಿಯಸ್‌ಗಿಂತ ಲಾವೊತ್ಸೆ ಹಿರಿಕ. ಸುಮಾರು ಕ್ರಿಪೂ 7–6ನೇ ಶತಮಾನದಲ್ಲಿ ಬದುಕಿದ್ದವನು. ಈತನದನ್ನು ತಾವೋ ಧರ್ಮ ಎಂತಲೂ ಕರೆಯುತ್ತಾರೆ. ಇದರ ಎರಡು ಮುಕ್ಯ ಅಂಶಗಳು ತಾವೋ ಮತ್ತು ತೇ. ತಾವೋ ಎಂದರೆ ಪ್ರಕೃತಿಯ

ಶಾಶ್ವತ ತತ್ವ ಮತ್ತು ಸೃಷ್ಟಿ ಸಂಕಲ್ಪದ ಮೂಲ ಪ್ರೇರಣೆ. ಲಾವೋತ್ಸೆಯು ಪ್ರಭುತ್ವದ ವಿರೋಧಿಯಾಗಿದ್ದನು. ಈತನಿಗೆ ಪ್ರಕೃತಿಯೇ ಮಾರ್ಗದರ್ಶನವಾಗಿತ್ತು. ಲಾವೋತ್ಸೆ ತನ್ನ ಮಾರ್ಗದ ಕುರಿತು ಹೀಗೆ ಹೇಳುತ್ತಾನೆ "ಟಾವೋದ ಅಸ್ತಿತ್ವವು ಅತ್ಯಂತ ನಿಗೂಢವಾಗಿದೆ. ಇದರ ಕೊನೆಯ ಸ್ವರೂಪವು ಗಂಭೀರ ಮೌನದ ಕತ್ತಲೆಯಲ್ಲಿದೆ. ಅಲ್ಲಿ ಏನನ್ನೂ ನೊಡಲು, ಕೇಳಲು ಸಾಧ್ಯವೇ ಇಲ್ಲ. ವ್ಯಕ್ತಿಯು ಗಂಭೀರ ಮೌನದ ಕತ್ತಲೆಯ ಸಾಮ್ರಾಜ್ಯವನ್ನು ಪ್ರವೇಶಿಸಿದನು"[35].

ಕನ್‌ಫ್ಯೂಶಿಯಸ್ ಚೀನಾದ ಅತ್ಯಂತ ಜನಪ್ರಿಯ ಮತ್ತು ಪ್ರಚಲಿತ ವ್ಯಕ್ತಿ. ಇದೊಂದು ಪಂತ. ಈತ ಅದರ ಸ್ಥಾಪಕನಲ್ಲ, ಪ್ರಸಾರಕ. ಸ್ಥಾಪಿಸಲು ಅಲ್ಲೇನೂ ಇಲ್ಲ. ಅವು ನೈತಿಕ ಸೂತ್ರಗಳು ಮಾತ್ರ. 'ತಾನು ಕೇವಲ ವಾಹಕನು, ನಿರ್ಮಾಪಕನಲ್ಲ'[36] ಎಂದು ಈತನೇ ಹೇಳಿಕೊಂಡಿದ್ದಾನೆ. ಈತನು ಪ್ರಭುತ್ವದೊಡನೆ ಇದ್ದುಕೊಂಡು ಸಮಾಜವನ್ನು ವ್ಯವಸ್ಥಿತಗೊಳಿಸಿದವನು. ಇದೇ ಲಾವೋತ್ಸೆಗೂ ಈತನಿಗೂ ಇರುವ ವ್ಯತ್ಯಾಸ. ಲಾವೋತ್ಸೆಯು ಪ್ರಭುತ್ವವನ್ನು ವಿರೋಧಿಸಿದನು ಮತ್ತು ಪ್ರಕೃತಿಯೊಡನೆ ತನ್ನ ಸಂಬಂಧವನ್ನು ಸ್ಥಾಪಿಸಿದನು. ಆದರೆ ಈತನು ಪ್ರಭುತ್ವದ ಜೊತೆಯಲ್ಲಿಯೇ ಸಮಾಜವನ್ನು ಸುಧಾರಿಸುವ ಪ್ರಯತ್ನ ಮಾಡಿದನು. ಈತನು ಪ್ರಾಮಾಣಿಕತೆ ಹಾಗು ನಂಬಿಕೆಗೆ ಪ್ರಾಶಸ್ತ್ಯವನ್ನು ಕೊಟ್ಟನು. ಪ್ರತಿಯೊಬ್ಬರೂ ಪರಸ್ಪರರನ್ನು ಪ್ರೀತಿಸಿದರೆ, ಹಿರಿಯರನ್ನು ಗೌರವಿಸಿದರಡೆ ಭೂಮಿಯು ಸ್ವರ್ಗವಾಗುತ್ತದೆ ಎಂದು ಹೇಳಿದನು. ಈತನು ಪರಂಪರೆಗೆ, ಸಂಪ್ರದಾಯಕ್ಕೆ ಮನ್ನಣೆ ನೀಡಿದನು. ಸಮಾಜ ಮತ್ತು ಸರ್ಕಾರ ಎರಡನ್ನೂ ಗುರಿಯಾಗಿಸಿಕೊಂಡು ತನ್ನ ತತ್ವಗಳನ್ನು ರೂಪಿಸಿದನು. ಅವನ ಶ್ರೇಷ್ಠವಾದ ಎರಡು ಸಾಲುಗಳೆಂದರೆ–

1. ಕೀರ್ತಿಯನ್ನು ನಿರಾಕರಿಸಿದವನಿಗೆ ದುಃಖವಿಲ್ಲ[37]
2. ಇತಿಹಾಸ ಇಲ್ಲದಿರುವವನು ಸುಖಿಯಾಗಿರುತ್ತಾನೆ[37]

**ಇಸ್ಲಾಂ–**

ಈ ಧರ್ಮವನ್ನು ಅನುಸರಿಸುವವರನ್ನು 'ಮುಸ್ಲಿಂ'ರು ಎಂದು ಕರೆಯಲಾಗುತ್ತದೆ. ಇದೂ ಸಹ ಕ್ರೈಸ್ತರಂತೆ ಏಕೀಶ್ವರವನ್ನು ಬೋಧಿಸುವಂತದ್ದು. ಇದರ ಸಂಸ್ಥಾಪಕ ಪ್ರವಾದಿ ಮಹಮ್ಮದ್. ಅರಬ್ಬಿನ 'ಮೆಕ್ಕಾ'ಎಂಬಲ್ಲಿ ಕ್ರಿಶ 570 ರಲ್ಲಿ ಜನಿಸಿದ. ಅಲ್ಲಹುವೇ ಪರಮ ಭಗವಂತನು, ಆತನ ಪ್ರವಾದಿ ಮಹಮ್ಮದನು ಎಂದು ಮುಸ್ಲಿಮರು ಎಂದು ನಂಬುತ್ತಾರೆ. ಕ್ಷುದ್ರ ದೇವತೆಗಳ ಪೂಜೆ, ಮೂಢನಂಬಿಕೆಗಳು, ಅನಾಗರಿಕತೆ ಇವೆಲ್ಲವೂ ಅರಬ್ಬದಲ್ಲಿ ಆ ಕಾಲದಲ್ಲಿ ಬಹುವಾಗಿ ಹರಡಿದ್ದವು. ಇವೆಲ್ಲವನ್ನೂ ಕೊನೆಗಾಣಿಸಲು ಮಹಮ್ಮದನು ಅಕ್ಷರಶಃ ಸೈನಿಕ ಕಾರ್ಯಾಚರಣೆಯನ್ನೇ ಮಾಡಿದನು.

ಅವನ ಮಹತ್ವಾಕಾಂಕ್ಷೆಯ ಫಲವಾಗಿ ಇಡೀ ಅರಬ್ ಜನಾಂಗವು ಒಂದುಗೂಡಿತು. ಅಲ್ಪಕಾಲದಲ್ಲಿಯೇ ಅದು ವ್ಯಾಪಿಸಿಕೊಂಡ ವ್ಯಾಪ್ತಿಯನ್ನು ನೋಡಿದಾಗ ಇದು ನಮಗೆ ಅರ್ಥವಾಗುತ್ತದೆ.

ಅಸ್ಗರ್ ಅಲಿ ಇಂಜಿನಿಯರ್ ಅವರು ಇಸ್ಲಾಮಿನ ಹುಟ್ಟನ್ನು ಕುರಿತು ಈ ರೀತಿ ಹೇಳುತ್ತಾರೆ "ಏಳನೇ ಶತಮಾನದಲ್ಲಿ ಇಸ್ಲಾಂ ಒಂದು ಐಡಿಯಾಲಾಜಿಕಲ್ ಆಂದೋಲನವಾಗಿ ಜನ್ಮತಳೆಯಿತು ಎಂದು ಬಣ್ಣಿಸುವುದು ನನಗೆ ಇಷ್ಟವಾಗುತ್ತದೆ"[38] ಎನ್ನುತ್ತಾರೆ. ಆರಂಭದಲ್ಲಿ ಮಹಮ್ಮದನು ಅಲ್ಲಿ ತುಂಬಾ ವಿರೋಧವನ್ನು ಎದುರಿಸಬೇಕಾಯಿತು. ಪ್ರಖ್ಯಾತ ಇಸ್ಲಾಂ ತಜ್ಞ ಎಚ್.ಎ.ಆರ್. ಗಿಬ್ ಹೇಳುವಂತೆ "ಮೆಕ್ಕಾ ನಿವಾಸಿಗಳ ವಿರೋಧಕ್ಕೆ ರಾಜಕೀಯ ಹಾಗೂ ಆರ್ಥಿಕ ವಿಚಾರಗಳು ಎಷ್ಟು ಕಾರಣವಾಗಿದ್ದವೋ, ಅಷ್ಟು ಅವರ ಸಂಪ್ರದಾಯ ನಿಷ್ಠತೆಯಾಗಲೀ ಇಲ್ಲಾ ಧಾರ್ಮಿಕ ಅಪನಂಬಿಕೆಯಾಗಲೀ ಕಾರಣವಾಗಿರಲಿಲ್ಲ"[39]. ಅಲ್ಲಿ ಯಾವ ಮೂಲಭೂತವಾದ ಧರ್ಮಗಳೂ ಇಲ್ಲದ್ದರಿಂದ ಯಾವ ಧರ್ಮಕಾರಣವೂ ವಿರೋಧಿಯಿರಲಿಲ್ಲ. ಅವರಿಗೆ ಭಯವಿದ್ದುದು ಆರ್ಥಿಕವಾಗಿ. ಪ್ರಮುಖವಾಗಿ ಅಲ್ಲಿಯ ಮೇಲುವರ್ಗದ ಜನರಿಗೆ ತಮ್ಮ ವ್ಯಾಪರಕ್ಕೆ ಪ್ರವಾದಿಯ ನೀತಿಗಳು ಅಡ್ಡಿಯಾಗಬಹುದೆಂಬ ಭಯವಿತ್ತು. ಆ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದುದು ಬಿದೋನರು, ಕುರ್ಯೆಷರು ಮುಂತಾದ ಬುಡಕಟ್ಟು ಜನಾಂಗಗಳು. ಅವರು ಯಾವ ವಿಧಿವತ್ತಾದ ಮತ್ತು ತತ್ವವತ್ತಾದ ಧರ್ಮವನ್ನು ಹೊಂದಿರಲಿಲ್ಲ. ಪ್ರವಾದಿ ಮಹಮ್ಮದನು ಅಲ್ಲಿಯ ಮೂಲಭೂತ ಸಮಸೆಗಳನ್ನು ಮೊದಲು ಇದಿರು ಹಾಕಿಕೊಂಡು ಅರಬ್ ಜನಾಂಗವನ್ನು ಒಂದು ಸಾಮ್ರಾಜ್ಯವನ್ನಾಗಿ ಪರಿವರ್ತಿಸಿದನು. ಇವರ ಧರ್ಮಗ್ರಂಥವನ್ನು 'ಖುರಾನ್' ಎಂದು ಕರೆಯಲಾಗುತ್ತದೆ. ಆತ್ಮಶುದ್ಧಿಯನ್ನು ಕುರಿತು ಇದು ಹೇಳುತ್ತದೆ.

**ಕ್ರೈಸ್ತ –**

ಇದು ಯಹೂದ್ಯ ಮೂಲದಿಂದ ಹುಟ್ಟಿದ ಪ್ರಮುಖ ಧರ್ಮ. ಒಂದು ಕಾಲದಲ್ಲಿ ಯಹೂದಿ ಧರ್ಮದ ತತ್ವಗಳು ಜನಪ್ರಿಯತೆಯಲ್ಲಿ ಕುಗ್ಗಿದಾಗ , ಅದರ ತತ್ವಗಳನ್ನೇ ಹೊಸರೂಪದಲ್ಲಿ ಮುಂದುವರೆಸಿದ್ದು ಈ ಕ್ರೈಸ್ತ ಧರ್ಮ. ಹಾಗೆ ನೋಡಿದರೆ ಏಸುಕ್ರಿಸ್ತನು ಆಧ್ಯಾತ್ಮಿಕ ಪ್ರವಾದಿಯಾಗಿರದೆ, ಸಶಸ್ತ್ರ ಹೋರಾಟಗಾರ ಎಂಬುದು ಇತ್ತೀಚಿನ ಸಂಶೋಧನೆಗಳಿಂದ ತಿಳಿದುಬಂದಿದೆ**. ಆರಂಭದಲ್ಲಿ ಯೇಸುವು ಜ್‌ನ್ ಎಂಬಾತನನ್ನು ತನ್ನ ಗುರುವಾಗಿ ಮಾಡಿಕೊಂಡಿದ್ದನು. ಈತನ ದೆಸೆಯಿಂದಲೇ ತನ್ನನ್ನು ಆಧ್ಯಾತ್ಮದಲ್ಲಿ ತೀವ್ರವಾಗಿ ತೊಡಗಿಸಿಕೊಂಡನು.

ಈ ಧರ್ಮದ ಪ್ರಮುಖ ತತ್ವಗಳನ್ನು ಹೀಗೆ ಹೇಳಬಹುದು–

" ನೀನು ಪ್ರಭುವಾದ ದೇವರನ್ನು ಪ್ರೀತಿಸಬೇಕು. ನಿನ್ನಂತೆಯೇ ನಿನ್ನ ನೆರೆಯವರನ್ನು ಪ್ರೀತಿಸಬೇಕು. ಪರಿವರ್ತನೆಯೇ ಪುನರ್ಜನ್ಮ. ಪಶ್ಚಾತಾಪವೇ ಪರಿವರ್ತನೆ. ನಿಮ್ಮ ಹಗೆಯನ್ನು ಪ್ರೀತಿಸಿರಿ. ನಿಮ್ಮನ್ನು ಬಯ್ಯುವವರನ್ನು ಹರಸಿರಿ. ದ್ವೇಷಿಗಳಿಗೆ ಒಳಿತನ್ನು ಮಾಡಿರಿ. .." ಮುಂತಾದವು.

ಇವಿಷ್ಟು ಧರ್ಮಗಳಲ್ಲದೇ ವಿಶೇಷವಾಗಿ ಹೇಳಬೇಕಾದ ಮತ್ತೆರೆಡು ಧರ್ಮಗಳೆಂದರೆ ಶೈವ ಮತ್ತು ವೈಷ್ಣವ. ಪ್ರಾಚೀನತೆಯ ದೃಷ್ಟಿಯಿಂದ ಶೈವ ಮೊದಲು. ಶೈವದ ಮೂಲವನ್ನು ಆಗಮಗಳಿಂದಲೇ ಕಂಡುಕೊಳ್ಳುವುದು ಹೆಚ್ಚು. ವೈಷ್ಣವರು ತಮ್ಮ ಮೂಲವನ್ನು ವೇದಗಳಿಂದ ಶುರು ಮಾಡುತ್ತಾರಾದರೂ, ಇದರಲ್ಲಿಯೇ ಸೇರುವ ಭಾಗವತ ಪಂಥವು ಬೇರೆಯದೇ ತಾತ್ವಿಕತೆಯನ್ನು ಹೊಂದಿದೆ. ಈ ಎರಡೂ ಧರ್ಮಗಳು ಕರ್ನಾಟಕದ ಮತ್ತು ಭಾರತದ ಪ್ರಮುಖ ಶಕ್ತಿಗಳಾಗಿ ಬಾಳಿದಂತವು. ಮತ್ತು ಈಗಲೂ ಸಹ ಈ ವಿಸ್ತಾರತೆಯನ್ನು ಉಳಿಸಿಕೊಂಡಿವೆ. ಇವುಗಳನ್ನು ಅಧ್ಯಯನದಲ್ಲಿ ತುಂಬಾ ವಿಸ್ತಾರವಾಗಿಯೇ ದಾಖಲಿಸಲಾಗಿದೆ.

**ಅಡಿ ಟಿಪ್ಪಣಿಗಳು**

1. ಅಶೋಕನ ಧರ್ಮ ಶಾಸನ
2. ನಮ್ಮ ಪ್ರಾಚ್ಯ ಪರಂಪರೆ, ವಿಲ್‌ಡ್ಯೂರಾಂಟ್
3. ಲೋಕಾಯತ ಮತ್ತು ಶಾಕ್ತ –1, ಟಿ ಬಸವರಾಜ ತೂಲಹಳ್ಳಿ, ಪು 28
4. ಲೋಕತತ್ವಶಾಸ್ತ್ರ ಪ್ರವೇಶಿಕೆ–1, ದೇವಿಪ್ರಸಾದ ಚಟ್ಟೋಪಾಧ್ಯಾಯ, ಪು 27
5. ಅದೇ ಸಂಪುಟ 3–– , ಪು 32
6. ಅದೇ ಸಂಪುಟ 4––– ಪು 34
7. ನಮ್ಮ ಪ್ರಚ್ಯ ಪರಂಪರೆ, ವಿಲ್‌ಡ್ಯೂರಾಂಟ್, ಪು 56
8. ಅದೇ , ಪು 66
9. ಅದೇ, ಪುಟ 126
10. ಕಬ್ಬಿಣದ ಯುಗ ಮತ್ತು ಧಾರ್ಮಿಕ ಕ್ರಾಂತಿ, ಕೃಷ್ಣಮೋಹನ ಶ್ರೀ ಮಾಲಿ, ಕ– ನಾ ದಿವಾಕರ
11. ಲೋಕಾಯತ, ದೇವಿಪ್ರಸಾದ ಪು 178
12. ಅದೇ  ಪು 182
13. ಅದೇ ಪು 185
14. ಅಂಬೇಡ್ಕರ್ ಸಮಗ್ರ ಬರಹಗಳು ಮತ್ತು ಭಾಷಣಗಳು. ಸಂ 1,1
15. ಪ್ರಾಚೀನ ಭಾರತ, ಆರ್ಯಸ್ ಶರ್ಮ, ಪು 90
16. ಅಂಬೇಡ್ಕರ್ ಸಮಗ್ರ ಬರಹಗಳು ಮತ್ತು ಭಾಷಣಗಳು, 3, ಪು 345
17. ಭಗವದ್ಗೀತೆ
18. ಕರ್ನಾಟಕದ ಸಾಂಸ್ಕೃತಿಕ ಪರಂಪರೆ, ಬಿ ಎಂ ಚಂದ್ರಶೇಖರಯ್ಯ
19. ಚಾಂದ್ಯೋಗ್ಯಪನಿಷತ್, 6, 1–2
20. ಅದೇ , 6, 1–7
21. ಅದೇ , 7, 1–1
22. ಉಪನಿಷದ್ ಭಾವಧಾರೆ, ಸೋಮಾನಾಥಾನಂದ
23. ಭಾರತೀಯ ತತ್ವಜ್ಞಾನ– ವೈಚಾರಿಕ ಮತ್ತು ಸಾಮಾಜಿಕ ಸಂಘರ್ಷ,. ಸರ್ದೇಸಾಯಿ
24. ಲೋಕಾಯತ, ಪು 25
25. ಲೋಕಾಯತ–ಶಾಕ್ತ–ಶೈವ; ಸಂಶೋಧನಾ ಸಮೀಕ್ಷೆ–1, ಬಸವರಾಜ ತೂಲಹಳ್ಳಿ
26. ಭಾರತೀಯ ಸಂಸ್ಕೃತಿ ದರ್ಶನ, ಜೈನಧರ್ಮ– ಕೆ ಎಸ್ ಧರಣೇಂದ್ರಯ್ಯ
27. ಜಾಗತೀಕ ಧರ್ಮಗಳು, ಜೈನಧರ್ಮ, ಶೇಷ ನವರತ್ನ

28. ಅದೇ, ಬೌದ್ಧ ಧರ್ಮ

29. ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ

30. ಅಂಬೇಡ್ಕರ್ ಸಮಗ್ರ ಬರಹಗಳು ಮತ್ತು ಭಾಷಣಗಳು ಸಂ–3

31. ಲೋಕಾಯತ, ದೇವಿಪ್ರಸಾದ, ಪು 333

32. ಜಾಗತೀಕ ಧರ್ಮಗಳು ,ಯಹೂದಿ ಧರ್ಮ , ಪು 145

33. ಅದೇ, ಜರಾತುಷ್ತ್ರ ಧರ್ಮ

34. ಅದೇ,

35. ಅದೇ , ಟಾವೋ ಧರ್ಮ ಪು 235

36. ಅದೇ , ಕನ್ ಫ್ಯೂಶಿಯಸ್, ಪು 239

37. ನಮ್ಮ ಪ್ರಾಚ್ಯ ಪರಂಪರೆ, ವಿಲ್ ಡ್ಯೂರಾಂಟ್, ಪು 551

38. ಇಸ್ಲಾಂ ಹುಟ್ಟು ಮತ್ತು ವಿಕಾಸ, ಅಸ್ಗರ್ ಅಲಿ ಎಂಜಿನಿಯರ್

39. ಅದೇ

40. ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ, ಡಾ ವಿಠ್ಠಲ್‌ರಾವ್ ಗಾಯಕ್‌ವಾಡ್

### 1. ಸಂಘರ್ಷದ ಪ್ರಕಾರಗಳು

ಅ) **ಅಂತರಿಕ ಸಂಘರ್ಷ** :– ಇದು ಒಂದು ಧರ್ಮದ ಒಳಗಡೆಯೆ ನಡೆಯುವಂತದ್ದು. ಜಾತಿ, ಪಂಥ, ಕವಲುಗಳ ಮಧ್ಯೆ ನಡೆಯುವಂತದ್ದು, ಇಲ್ಲವೇ ಅವುಗಳಿಗೆ ಕಾರಣವಾಗುವಂತದ್ದು. ಒಂದು ಉದಾಹರಣೆ ನೋಡುವುದಾದರೆ ಬವುದ್ದ ಧರ್ಮದಲ್ಲಿ ನಡೆದಂತಹ ಇಂತ ಸಂಘರ್ಷವು ಅದರಲ್ಲಿ ಹೀನಯಾನ, ಮಹಾಯಾನ ನಂತರದಲ್ಲಿ ವಜ್ರಯಾನ ಎಂಬ ಕವಲುಗಳಿಗೆ ಕಾರಣವಾಯಿತು.ಇಂತಹ ಹಲವಾರು ಉದಾಹರಣೆಗಳನ್ನು ನಾವು ನೋಡಬಹುದು.

ಆ) **ಬಾಹ್ಯ ಸಂಘರ್ಷ** :– ಇದು ಬೇರೆ ಬೇರೆ ಮತಗಳೊಂದಿಗೆ ನಡೆಯುವಂತದಾಗಿದೆ. ಒಂದು ಧರ್ಮದ ಇತಿಹಾಸದಲ್ಲಿ ಇದು ಪ್ರಮುಖವಾದ ಭಾಗವಾಗಿದೆ. ಇದಕ್ಕೆ ಕುರಿತಂತೆಯೆ ಹೇರಳವಾದ ದಾಖಲೆಗಳು ಸಿಗುತ್ತವೆ.

### 2. ಪ್ರಾಚೀನ ಕರ್ನಾಟಕದಲ್ಲಿ ಧರ್ಮಸಂಘರ್ಷ

#### ಅ. ಧರ್ಮ ಮತ್ತು ಮತಾಂತರ

ಮತಾಂತರ ಎನ್ನುವುದು ಧರ್ಮಗಳ ಹುಟ್ಟಿನಿಂದ ಹಿಡಿದು ಸದಾ ಚಾಲ್ತಿಯಲ್ಲಿರುವ ಒಂದು ಪದ ಮತ್ತು ಕ್ರಿಯೆ. ಮನುಷ್ಯನು ಒಂದು ಧರ್ಮವನ್ನು ಬಿಟ್ಟು ಇನ್ನೊಂದನ್ನು ಸೇರುವುದು ಮತಾಂತರ ಎಂದಾಗುತ್ತದೆ. ಇಲ್ಲಿ ಬದಲಾಗುವುದು ಧರ್ಮವಾದರೂ ಅದನ್ನು 'ಧರ್ಮಾಂತರ' ಎನ್ನದೆ, 'ಮತಾಂತರ' ಎನ್ನುವ ಹೆಸರಿನಂದಲೇ ಕರೆಯಲಾಗುತ್ತದೆ. ಹಾಗೆ ನೋಡಿದರೆ 'ಧರ್ಮ' ಪದವೇ 'ಮತ' ಪದಕ್ಕಿಂತಲೂ ವಿಶಾಲವಾದುದು ಮತ್ತು ಧರ್ಮಾಂತರ ಕ್ರಿಯೆಯಲ್ಲಿ ಹೆಚ್ಚಿನದಾಗಿ ಒಪ್ಪಿಕೊಳ್ಳಬಹುದಾದುದಾಗಿದೆ. ಆದರೂ ಈ ಅಧ್ಯಯನದಲ್ಲಿ 'ಮತಾಂತರ' ಎನ್ನುವ ಪದವನ್ನೇ ಮುಂದುವರೆಸಿಕೊಂಡು ಹೋಗಲಾಗಿದೆ. ಅನಿವಾರ್ಯತೆಗಳಿಂದ ಹಿಡಿದು 'ಫ್ಯಾಶನ್' ಎಂದು ಕರೆಸಿಕೊಳ್ಳಬಹುದಾದ ಕ್ರಿಯೆಯವರೆಗೂ ಈ ಮತಾಂತರದ ಕಾರಣಗಳು ಒಳಗೊಂಡಿವೆ. ಅನಿವಾರ್ಯ ಎಂದಾಗ ದಬ್ಬಾಳಿಕೆ, ಒತ್ತಾಯ, ಜೀವನಾನುಕೂಲ ಮುಂತಾದವು ಬರುತ್ತವೆ. ಫ್ಯಾಶನ್ ಎಂಬುದನ್ನು ಹೀಗೆ ಎಂದು ಹೇಳಲಾಗದು. ಇಲ್ಲಿ ಒಂದು ಸಾಂಸ್ಕೃತಿಕ ಯಜಮಾನಿಕತೆಯನ್ನು ಪಡೆದ

ಧರ್ಮವೊಂದರ ಕಡೆ ಆಕರ್ಷಿತವಾಗುವ ಮನಸ್ಥಿತಿಯನ್ನು ಇಲ್ಲಿ ಉದಾಹರಿಸಬಹುದು. ಇದರಲ್ಲಿ ಬಹುತೇಕ ಆಚರಣೆಗಳೇ ತುಂಬಿರುತ್ತವೆ.

ಈ ಅಧ್ಯಾಯದಲ್ಲಿ ಪ್ರಮುಖವಾಗಿ ಯಾವ ಯಾವ ಕಾರಣಗಳಿಗಾಗಿ ಮತಾಂತರ ಕ್ರಿಯೆಗಳು ಜರುಗಲ್ಪಟ್ಟವು ಮತ್ತು ಅವುಗಳು ಧರ್ಮದ ಪ್ರಾಬಲ್ಯದ ದೃಷ್ಟಿಯಿಂದ ಎಷ್ಟು ಮಹತ್ವವಾದವುಗಳು ಎಂಬುದನ್ನು ಚರ್ಚಿಸಲಾಗಿದೆ. ಮತಾಂತರವೆಂದರೆ ಧರ್ಮವನ್ನು ಬದಲಾಯಿಸುವುದನ್ನು ಮಾತ್ರವೇ ಒಳಗೊಂಡಿರುವುದಿಲ್ಲ. ಅದಕ್ಕೂ ಮೀರಿದ ಪರಿಣಾಮದ ವ್ಯಾಪ್ತಿಯನ್ನು ಅದು ಒಳಗೊಂಡಿರುತ್ತದೆ. ಅದು ಪ್ರಮುಖವಾಗಿ ಜನರ ಮಾನಸಿಕ ಮಟ್ಟದಲ್ಲಿ ಪ್ರಭಾವ ಬೀರುವ ಉದ್ದೇಶಗಳನ್ನು ಹೊಂದಿರುತ್ತದೆ. ಜನರನ್ನು ಕಳೆದುಕೊಳ್ಳುವ ಧರ್ಮಕ್ಕೆ ಈ ಮತಾಂತರ ಎನ್ನುವುದು ಭೀತಿಯಾದರೆ, ಪಡೆದುಕೊಳ್ಳುವ ಧರ್ಮಕ್ಕೆ ಇದೊಂದು ಉತ್ಸಾಹದ ಕ್ರಿಯೆ. ಕೆಲವೊಮ್ಮೆ ಜನರಷ್ಟೇ ಅಲ್ಲದೇ, ಆಯಾ ಧರ್ಮದ ಸಾಹಿತ್ಯವನ್ನು, ದೇವರುಗಳನ್ನು, ಕಟ್ಟಡಗಳನ್ನು ಮುಂತಾದುವೆಲ್ಲವನ್ನೂ ಮತಾಂತರ ಮಾಡಿಕೊಳ್ಳಲಾಗುತ್ತದೆ. ಈ ಎಲ್ಲಾ ಕುರಿತಂತೆ, ಈ ಅಧ್ಯಾಯವನ್ನು ಭಗವದ್ಗೀತೆಯಲ್ಲಿನ ಒಂದು ಶ್ಲೋಕದ ಮೂಲಕ ಶುರುಮಾಡೋಣ–

ಭಗವದ್ಗೀತೆಯಲ್ಲಿ ಹೀಗೊಂದು ಶ್ಲೋಕ ಬರುತ್ತದೆ.

**"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ !**

**ಸ್ವಧರ್ಮೇ ನಿಧನಂಶ್ರೇಯಃ ಪರಧರ್ಮೋ ಭಯಾವಹ !!"[1]**

ಕನ್ನಡದಲ್ಲಿ 'ಉತ್ತಮವಾಗಿ ಆಚರಿಸಲ್ಪಡುವ ಪರಧರ್ಮಕ್ಕಿಂತ ಗುಣವಿಲ್ಲದ ಸ್ವಧರ್ಮವೇ ಶ್ರೇಯಸ್ಕರ.ತನ್ನ ಧರ್ಮದಲ್ಲಿ ಸಾಯುವುದೂ ಸಹ ಶ್ರೇಷ್ಠ, ಪರಧರ್ಮವು ಭಯವನ್ನುಂಟುಮಾಡುವಂತಹುದು'.

ಬಹುತೇಕ ವಿದ್ವಾಂಸರು ಒಪ್ಪಿಕೊಂಡಿರುವಂತೆ ಈ ಶ್ಲೋಕದ ಕಾಲ ಕ್ರಿಶಪೂ 1ನೇ ಶತಮಾನ. ಅಂದರೆ ಇದು ಮಹಾಭಾರತ ಕೃತಿ ತಯಾರಾದ ಕಾಲವು ಅಂತೆಯೆ ಅದರಲ್ಲಿ ಭಗವದ್ಗೀತೆಯನ್ನು ಸೇರಿಸಲಾದ ಕಾಲವೂ ಆಗಿದೆ. ಅಂದರೆ ಭಗವದ್ಗೀತೆಯನ್ನು ಮಹಾಭಾರತದಲ್ಲಿ ಆನಂತರ ಸೇರಿಸಲಾಯಿತು. ಇದರ ರಚನಾ ಕಾಲ ಕ್ರಿಪೂ 6ನೇ ಶತಮಾನವೇ ಇರಬೇಕು.ಬಾರತದಲ್ಲಿ ಬಹುದೊಡ್ಡ ಸಾಮಾಜಿಕ ಕ್ರಾಂತಿ ಸಂಭವಿಸಿದ ಕಾಲವದು.ಜೈನ, ಬೌದ್ಧ, ಇತರೆ ಮತಗಳ ಪ್ರಭಾವದ ಪರಿಣಾಮದಿಂದ ತನ್ನನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯ ಕಾರಣದಿಂದ ವೈದಿಕವು ಈ ಮೇಲಿನ ಶ್ಲೋಕದ ನಿಲುವನ್ನು ತಳೆಯಬೇಕಾಯಿತು. ಹಲವು ಅರ್ಥರಹಿತ ಆಚರಣೆಗಳಿಂದಾಗಿ ವೈದಿಕದ ನೆಲೆಯು ಕುಸಿಯತೊಡಗಿತ್ತು.ಆನರು ಇತರೆ ಮತಗಳೆಡೆಗೆ ಆಕರ್ಷಿತರಾಗುತ್ತಿದ್ದರು.ಅದನ್ನು ತಡೆಯುವ ಒತ್ತಡವು ವೈದಿಕಕ್ಕೆ ಉಂಟಾಯಿತು.ಅದರ ಪರಿಣಾಮವೇ ಮೇಲಿನ ಶ್ಲೋಕ.ಇದನ್ನು ಇಂದಿನ

ಮತಾಂತರ ಎಂಬ ಪದಕ್ಕೆ ಹೊಂದಿಸಲಾಗದಿದ್ದರೂ ಅಧ್ಯಯನದ ಅನುಕೂಲಕ್ಕಾಗಿ ಮತಾಂತರ ಎಂತಲೇ ಕರೆಯಬೇಕಿದೆ.

ಇಲ್ಲಿ ತನ್ನ ಧರ್ಮಿಯರನ್ನು ತನ್ನಲ್ಲೇ ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಿರುವುದನ್ನು ನೋಡುತ್ತೇವೆ. ಇಂತದ್ದೇ ಉಲ್ಲೇಖವನ್ನು ಕ್ರಿಶ 11–12 ನೇ ಶತಮಾನದ ಜೈನ ಪರಿಸರದಲ್ಲಿ ಕಾಣುತ್ತೇವೆ. "ತೊಲಗದೆ ಜೈನ ಮಾರ್ಗದೊಳೆ ನಿಶ್ಚಳರಪ್ಪುದು"[2] ಎಂದು ಅದು ತನ್ನ ಅನುಯಾಯಿಗಳಿಗೆ ಕರೆ ನೀಡುತ್ತದೆ.ಕ್ರಿಶ 9–10–11 ನೇ ಶತಮಾನಗಳೆಂದರೆ ಅದು ಜೈನಧರ್ಮದ ಉತ್ತುಂಗದ ಕಾಲ. ಹಲವು ರಾಜಮನೆತನಗಳ ಆಶ್ರಯದಿಂದಲೂ, ಅಸಂಖ್ಯಾತ ಅನುಯಾಯಿಗಳಿಂದಲೂ ಅದು ಕೂಡಿತ್ತು. ಆ ನಂತರದಲ್ಲಿ ಮೊದಲು ಶೈವ ನಂತರದಲ್ಲಿ ವೈಷ್ಣವರ ಬೆಳವಣಿಗೆಯೊಂದಿಗೆ ಅದು ಕುಂದಲಾರಂಭಿಸಿತು.ಒಂದು ಕಾಲದಲ್ಲಿ ಅದು ಮತಾಂತರದ ಮೂಲಕವೇ ಬೃಹತ್ತಾಗಿ ಬೆಳೆದಿತ್ತಾದರೂ, ಅದೇ ಮತಾಂತರದ ಮೂಲಕ ಅದು ಸೊರಗತೊಡಗಿತ್ತು.ಒಂದು ಧರ್ಮವು ಹುಟ್ಟಿ ಬೆಳೆಯಲು ಮತಾಂತರವು ಹೇಗೆ ಸಹಾಯ ಮಾಡುತ್ತದೆಯೋ ಆ ಧರ್ಮದ ಅಳಿವಿನಲ್ಲಿಯೂ ಸಹ ಆದು ಅಂತದ್ದೇ ಕಾರ್ಯ ಮಾಡುತ್ತದೆ. ಹೀಗೆ ಮತಾಂತರವು ಧರ್ಮದ ಅಳಿವು ಉಳಿವಿನಲ್ಲಿ ಬಹು ಮುಖ್ಯವಾದ ಕಾರ್ಯ ನಿರ್ವಹಿಸುತ್ತದೆ.ಇತಿಹಾಸ ಕಾಲದಲ್ಲಿ, ಭಾರತದಲ್ಲಿ ಕ್ರಿಶ 7, 10, 12ನೇ ಶತಮಾನದಲ್ಲಿ ಅತಿಹೆಚ್ಚು ಮತಾಂರಗಳು ನಡೆದವು ಎಂದು ಗುರುತಿಸಲಾಗುತ್ತದೆ[57]. ಆ ನಂತರದಲ್ಲಿ ಮೊಗಲರ ಮತ್ತು ಬ್ರಿಟೀಷರ ಕಾಲದಲ್ಲಿಯ ಮತಾಂತರಗಳು. ಬೌದ್ದರು ಅತಿಹೆಚ್ಚು ಪ್ರಮಾಣದಲ್ಲಿ ಇಸ್ಲಾಂ ಗೆ ಮತಾಂತರ ಹೊಂದಿದರು.ಇದಕ್ಕೆ ಪುಷ್ಠಿ ನೀಡುವಂತೆ ಪ್ರೋ.ಸೇನರ ಪ್ರಕಾರ "ಈಗ ಮುಸ್ಲಿಮರು ಹೆಚ್ಚಿನ ಸಂಖ್ಯೆಯಲ್ಲಿರುವ ಪಂಜಾಬ, ಕಾಶ್ಮೀರ, ಬಿಹಾರ, ಬಂಗಾಳಗಳು ಮುಸ್ಲಿಮರು ಇಲ್ಲಿಗೆ ಬರುವುದಕ್ಕಿಂತ ಮುಂಚೆ ಪ್ರಮುಖ ಬೌದ್ದ ಕೇಂದ್ರಗಳಾಗಿದ್ದವು"[58].ಆಧುನಿಕ ಜಗತ್ತು ಮತ್ತು ಭಾರತ ಕಂಡ ಮತಾಂತರದ ಪರ್ವ ವರ್ಷವೆಂದರೆ 1956.ಅಂದು ಅಂಬೇಡ್ಕರರು ನಾಗಾಪುರದಲ್ಲಿ ಲಕ್ಷಾಂತರ ಬೆಂಬಲಿಗರೊಂದಿಗೆ ಬೌದ್ದಧರ್ಮವನ್ನು ಸ್ವೀಕರಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಮತಾಂತರಕ್ಕೆ ಈ ಮುಂದಿನ ಅರ್ಥ ಕೊಡುತ್ತದೆ[3]

ಮತಾಂತರ– **ಭಿನ್ನಾಭಿಪ್ರಾಯ**

**ಒಂದು ಮತವನ್ನು ಬಿಟ್ಟು ಇನ್ನೊಂದು ಮತವನ್ನು ಸೇರುವುದು**

ಒಂದು ಧರ್ಮವನ್ನು ಬಿಟ್ಟು ಇನ್ನೊಂದು ಧರ್ಮವನ್ನು ಸೇರುವುದನ್ನು ಸಾಮಾನ್ಯವಾಗಿ ಮತಾಂತರ ಎಂದು ಕರೆಯಲಾಗುತ್ತದೆ. ಇದನ್ನೇ ಧರ್ಮಧೀಕ್ಷೆ, ಧರ್ಮಸ್ವೀಕರಣ ಇನ್ನೂ ಮುಂತಾದ

ಹೆಸರುಗಳಿಂದ ಆಯಾ ಪರಿಸರದ ಪರಿಸ್ಥಿತಿಯ ಅನುಕೂಲದಿಂದ ಕರೆಯಲಾಗುವುದು. ಜನರು ತಮ್ಮ ಇಷ್ಟ ಬಂದ ಮತವನ್ನು ಸ್ವೀಕರಿಸಲು ಭಾರತೀಯ ಕಾನೂನಿನಲ್ಲಿಯೇ ಅವಕಾಶವನ್ನು ಕಲ್ಪಿಸಲಾಗಿದೆ. ಮತ್ತಿದು ಇತಿಹಾಸದ ಎಲ್ಲಾ ಕಾಲದಲ್ಲಿಯೂ ಒಂದು ಪ್ರಮಾಣದಲ್ಲಿ ಉಳಿದುಕೊಂಡು ಬಂದಿರುವಂತಹುದಾಗಿದೆ. ಒತ್ತಾಯದ ಮತಾಂತರವೂ ಸಹ ಇತಿಹಾಸದ ಕಾನೂನಿನಲ್ಲಿ ಸೇರಿಕೊಂಡು ಬಂದಿದೆ. ಈ ಎರಡಕ್ಕೂ ಹಲವು ದಾಖಲೆಗಳು ಇತಿಹಾಸದಲ್ಲಿ ನಮಗೆ ದೊರೆಯುತ್ತವೆ. ತನಗಿಷ್ಟವಾದುದನ್ನು ಆಚರಿಸುವ ,ಅಭಿವ್ಯಕ್ತಿಸುವ ಒಂದು ಉತ್ತಮ ಉದಾಹರಣೆಯಾಗಿ ಬ್ರಹ್ಮಶಿವನನ್ನು ನೋಡಬಹುದು. ಈತ ತನ್ನ ಕೃತಿಯಲ್ಲಿ ಒಂದು ಕಡೆ ಹೇಳಿಕೊಳ್ಳುತ್ತಾನೆ. **ಪಿರಿದರ್ತ್ತಿ ಮುನ್ನ**

**ಮಾಹೇಶ್ವರದೊಳ್ತನಗದರೊಳ್ಪುಗಾಣದೆ**

**ನೆಗಳ್ದೀ ಪರಮಜಿನಧರ್ಮದೊಳೆಪೊಕ್ಕು**[4] ಎನ್ನುತ್ತಾನೆ. ಇದನ್ನು ಈತ ತಾನು ಶೈವಧರ್ಮದಿಂದ ಜೈನಕ್ಕೆ ಮತಾಂತರವಾದ ಸಮಯದಲ್ಲಿ ಹೇಳುತ್ತಾನೆ.

ಮತಾಂತರದ ಕ್ರಿಯೆಯನ್ನು ಕಲಬುರ್ಗಿಯವರ ಮಾತುಗಳಲ್ಲಿ ಹೀಗೆ ಹೇಳಬಹುದು [5.]

ಆ ಕಾಲದಲ್ಲಿ**"ಸಾಮಾನ್ಯವಾಗಿ ಮತಾಂತರ ಕ್ರಿಯೆಯು ಎರಡು ರೀತಿಯಲ್ಲಿತ್ತು. ಮೊದಲನೆಯದು ಸ್ವಧರ್ಮಕ್ಕೆ ಮತಾಂತರಿಸಿ ಸಂಸ್ಕೃತಿಯನ್ನು ಬದಲಾಯಿಸುವುದು.ಎರಡನೆಯದು ಹೊರಗುಳಿದ ಸಂಸ್ಕೃತಿಯನ್ನು ಅಲ್ಲಲ್ಲಿಯೇ ಮತಾಂತರಿಸುವುದು"** ಈ ಎರಡನೆಯದನ್ನು ಅರ್ಥಮಾಡಿಕೊಳ್ಳಲು ನಾವು ಸುಕುಮಾರ ಸ್ವಾಮಿಯ ಕತೆಯನ್ನು ನೋಡಬಹುದು[6]. ಇದರಲ್ಲಿ ವಾಯುಭೂತಿ ಎನ್ನುವ ಬ್ರಾಹ್ಮಣನು ಜಿನಮುನಿಯೊಬ್ಬನನ್ನು ಅವಮಾನಿಸುತ್ತಾನೆ. ಈ ಕಾರಣಕ್ಕಾಗಿ ಆತನು ನಂತರದಲ್ಲಿ ಅನೇಕ ಹೀನ ಜನ್ಮಗಳನ್ನು ತಳೆದು ಸೋಮಶರ್ಮ ಎಂಬ ಬ್ರಾಹ್ಮಣನಿಗೆ ನಾಗಾಶ್ರೀಯೆಂಬ ಮಗಳಾಗಿ ಹುಟ್ಟುತ್ತಾನೆ. ಸೂರ್ಯಮಿತ್ರಾಚಾರ್ಯ ಎನ್ನುವ ಜೈನಮುನಿಯೋರ್ವ ಈ ನಾಗಾಶ್ರೀಗೆ ಜಿನಧರ್ಮವನ್ನು ಬೋದನೆ ಮಾಡುತ್ತಾನೆ. ಆಕೆಗೆ **'ಪಂಚಾಣುವ್ರತ'**ಗಳೆಂಬ ಐದು ವ್ರತಗಳನ್ನು ನಿತ್ಯವೂ ಮಾಡುವಂತೆ ಉಪದೇಶಿಸುತ್ತಾನೆ. ಇದರಂತೆ ಆಕೆಯು ನಿತ್ಯವೂ ಮಾಡುತ್ತಾಳೆ. ಹೀಗೆ ದಿನನಿತ್ಯ ಮಗಳು ಜಿನನಲ್ಲಿ ತೊಡಗುತ್ತಿರುವುದನ್ನು ಕಂಡು ತಂದೆಗೆ ಆತಂಕವಾಗುತ್ತದೆ.ಕೊನೆಗೆ ತನ್ನ ಮಗಳಿಗೆ ಹೀಗೆ ಬುದ್ದಿಯನ್ನು ಹೇಳುತ್ತಾನೆ **"ಮಗಳೇ ನಾವು ಬ್ರಾಹ್ಮಣರು.ಲೋಕಕ್ಕೆಲ್ಲಾ ಪೂಜ್ಯರು. ಸವಣರ ವ್ರತಗಳನ್ನು ನಾವು ಮಾಡಲಾಗದು**[7] **"** ಎನ್ನುತ್ತಾನೆ. ತಂದೆಯ ಮಾತನ್ನು ಧಿಕ್ಕರಿಸಲಾಗದೆ ಆಕೆ ಅನಿವಾರ್ಯವಾಗಿ ಅವುಗಳನ್ನು ಬಿಡಲು ಒಪ್ಪುತ್ತಾಳೆ. ಆ ವ್ರತಗಳನ್ನು ಹಿಂದುರಿಗಿಸಲು ಅವರು ಮುನಿಯಲ್ಲಿಗೆ ಹೋಗುವಾಗ, ಆ ಐದು ವ್ರತಗಳಿಗೆ ಸಂಬಂದಿಸಿದಂತೆ ಐದು ಘಟನೆಗಳು ನಡೆದು, ಆ ಐದು ವ್ರತಗಳ

ಮಹತ್ವವನ್ನು ಸಾರುತ್ತವೆ. ಇದರಿಂದ ಮನಬದಲಿಸಿದ ನಾಗಾಶ್ರೀಯು **"ಕೊಲ್ಲದ ಪುಸಿಯದ ಕಳ್ಳದ ಸ್ವದಾರಸಂತೋಷಂಪರಿಮಿತ ಪರಿಗ್ರಹಮಿಂತಯ್ದುಮಣುವ್ರತಂಗಳಂ ಕೊಂಡೆನೀ ಬ್ರತಂಗಳಂ ರಿಸಿಯರ್ಗೊಪ್ಪಿಸಿದೊಡಾನುಮೀಯಯ್ದು ಪಾಪಂಗಳೊಳಪ್ಪಸೇದೆಯಂ ಕಟ್ಟುಪಡುವುದುಂ ಕೊಲೆಯುಮನಿವರಂತೆಯ್ದಲ್ ವೇಳ್ಕುಮ್"**[8] ಎಂದು ವ್ರತಗಳನ್ನು ಹಿಂದುರಿಗಿಸಲು ನಿರಾಕರಿಸುತ್ತಾಳೆ. ಹೀಗೆ ಜೈನರು ಇತರೆ ಮತೀಯರನ್ನು ಗುರಿಯಾಗಿಸುತ್ತಿದ್ದ , ಮನ ಪರಿವರ್ತಿಸುತ್ತಿದ್ದ ರೀತಿಗಳನ್ನು ಇದರಲ್ಲಿ ನೋಡಬಹುದು.

ಹಿಂದಿನ ಮಾತನ್ನೇ ಮುಂದುವರೆದು ಕಲಬುರ್ಗಿಯವರು ಹೇಳುವುದನ್ನು ನಾವಿಲ್ಲಿ ಗಮನಿಸಬಹುದು **"…. ವೈದಿಕೇತರ ಹೊರತಾದ ಜೈನ ಬೌದ್ದ ಮೊದಲಾದವರ ಗುರಿಯು ಬ್ರಾಹ್ಮಣರೇ ಆಗಿದ್ದರು. ಬೌದ್ದ ಧರ್ಮಕ್ಕೆ ಮೊದಲ ಮತಾಂತರಗಳು ಬಂದಿದ್ದು ಬ್ರಾಹ್ಮಣರಿಂದ.ನಂತರ ಶ್ರೀಮಂತ ವರ್ಗದ ಯುವಕರಿಂದ ಎನ್ನುವುದನ್ನು ಇಲ್ಲಿ ನೆನೆಯಬಹುದು.ಇದಕ್ಕೆ ಪೂರಕವೆಂದರೆ ಕರ್ನಾಟಕದಲ್ಲಿ ಹಾಗೆ ಮತಾಂತರಗೊಂಡ ಮೊದಲ ಉಪಲಬ್ದ ದಾಖಲೆಯೆಂದರೆ ಪಂಪನ ತಂದೆ ಭಿಮಪ್ಪಯ್ಯನದು"** ಎಂದು ಹೇಳುತ್ತಾರೆ.ಅಂಬೇಡ್ಕರರ ಹೇಳಿಕೆಯೊಂದನ್ನು ಸಹ ಇದಕ್ಕೆ ಪೂರಕವಾಗಿ ತೆಗೆದುಕೊಳ್ಳಬಹುದು.ಅವರು ಹೇಳುವಂತೆ **"ಬೌದ್ದ ಧರ್ಮವು ಬ್ರಾಹ್ಮಣರು ಮತ್ತು ಬ್ರಾಹ್ಮಣ ಧರ್ಮದ ವಿರುದ್ದದ ಬಂಡಾಯವಾಗಿತ್ತು. ಆದರೆ ಬುದ್ದ ಹಾಗು ಅವನ ಧರ್ಮದ ಮೊದಲ ಹಿಂಬಾಲಕರಲ್ಲಿಅನೇಕರು ಬ್ರಾಹ್ಮಣರೇ ಆಗಿದ್ದರು"**[9] .

ಮತಾಂತರ ಕ್ರಿಯೆಯು ಇಂದು ನಿನ್ನೆಯದಲ್ಲ. ವೇದಗಳ ಕಾಲಕ್ಕೇನೆ ಇದರ ಹರವು ದೊರೆಯುತ್ತದೆ. ಅನಾರ್ಯರನ್ನು ಆರ್ಯರು ಮತಾಂತರ ಮಾಡಿಕೊಳ್ಳುತ್ತಿದ್ದರು ಮತ್ತು ಅವರಿಗೆ ಪೂರ ಪೌರ ಹಕ್ಕುಗಳನ್ನು ಕೊಡುತ್ತಿದ್ದರು.[10] ಆ ನಂತರ ಅಧಿಕೃತವಾಗಿ ಧರ್ಮ ಎನ್ನುವಂತಹುದು ಬಂದಮೇಲೆ ಈ ಮತಾಂತರ ಎನ್ನುವ ಪ್ರಕ್ರಿಯೆಯ ಅರ್ಥವಿನ್ಯಾಸ ಬದಲಾದ ವಿಸ್ತಾರಕ್ಕೊಳಗಾಯಿತು. ಇದಕ್ಕೆ ಪ್ರತ್ಯೇಕವಾಗಿ ಮತಪ್ರಚಾರಕರು ಎಂಬುದೊಂದು ವರ್ಗ ಶುರುವಾಗಿ ಮತಾಂತರವು ಮತ್ತೊಂದು ಮಜಲನ್ನು ಹೊಂದಿತು. ಭಾರತದಲ್ಲಿ ಮತಾಂತರದ ಮೊದಲ ಅಧೀಕೃತ ದಾಖಲೆಗಳೆಂದರೆ ಅಶೋಕನ **'ಧರ್ಮಶಾಸನ'**ಗಳು[11].ಈತನನ್ನು ಬುದ್ದ ಧರ್ಮದ ಅನುಯಾಯಿ ಎಂದು ಕರೆಯಲಾಗುತ್ತದೆ. ಕ್ರೌರ್ಯ ಪ್ರವೃತ್ತಿಯುಳ್ಳವನಾಗಿದ್ದ ಈತನು ಕಳಿಂಗ ರಾಜ್ಯದ ಮೇಲಿನ ವಿಜಯದ ನಂತರ ಅಲ್ಲಿಯ ಹಿಂಸೆಯನ್ನು ಕಂಡು ಮತ್ತು ವೈದಿಕದ ಯಜ್ಞಹಿಂಸೆಯನ್ನು ಕಂಡು ಅಹಿಂಸೆ ಬೋದಿಸುವ ಬುದ್ದ ಧರ್ಮವನ್ನು ಹೊಂದಿದನೆಂದು ಇತಿಹಾಸಕಾರರು ಹೇಳುತ್ತಾರೆ. ಉಪಾಸಕರು ಬುದ್ದನ ತತ್ವಗಳಿಂದ ಆಕರ್ಷಿತರಾಗಿ ಅವನ ಅನುಯಾಯಿಗಳಾಗುತ್ತಿದ್ದರು.ಸಾಮಾನ್ಯವಾಗಿ ಬುದ್ದ ಇಲ್ಲವೇ ಅವನ ಅನುಯಾಯಿಗಳೊಡನೆ ವಾದ ನಡೆಸಿ ನಂತರ ಮತಾಂತರ

ಹೊಂದುತ್ತಿದ್ದರು[12]. ದೀಪವಂಶ ಮತ್ತು ಮಹಾವಂಶದ ಪ್ರಕಾರ ಅಶೋಕನು ತನ್ನ ಮಕ್ಕಳಾದ ಮಹೇಂದ್ರ ಮತ್ತು ಸಂಘಮಿತ್ರೆಯರನ್ನು ಸಿಂಹಳಕ್ಕೂ ಹಾಗು ಮಹಾದೇವ ಹಾಗು ರಕ್ಕಿತ ಎನ್ನುವವರನ್ನು ಕರ್ನಾಟಕದ ಬನವಾಸಿಗೂ ಮತಪ್ರಚಾರಕರನ್ನಾಗಿ ಕಳಿಸುತ್ತಾನೆ[13].

ಬಹುಶ ಅಶೋಕನ ಕಾಲಕ್ಕಾಗಲೇ ಸಮಾಜದಲ್ಲಿ ಕೆಲವು ಬದಲಾವಣೆಗಳು ಆಗಿರುವಂತೆ ಕಾಣುತ್ತದೆ. ಅವನಿಗಿಂತಲೂ ಹಿಂದಿನದಲ್ಲಿ , ಮುಖ್ಯವಾಗಿ ಪಾಶ್ಚಿಮಾತ್ಯ ಪ್ರದೇಶಗಳಲ್ಲಿ ಈ ಮತಾಂತರ ಕ್ರಿಯೆಯು ಸಾಮೂಹಿಕವಾಗಿ ಜರುಗುತ್ತಿತ್ತು. ಆ ಪಂಗಡದ ನಾಯಕ ಅಥವಾ ಅಲ್ಲಿಯ ರಾಜನು ಆಯ್ದುಕೊಳ್ಳುವ ಧರ್ಮವನ್ನು ಇಡೀ ಸಂಕುಲವು ಅನುಸರಿಸುತ್ತಿತ್ತು. ಈ ರೀತಿಯದಕ್ಕೆ ಹಲವು ಉದಾಹರಣೆಗಳು ನಮಗೆ ಸಿಗುತ್ತವೆ. ಈ ಮತಾಂತರ ಕ್ರಿಯೆಯು ಕೇವಲ ವ್ಯಕ್ತಿಗತವಾಗಿ ಮಾತ್ರವೇ ನಡೆಯುತ್ತಿದ್ದಿಲ್ಲ. ಅದು ದೇವರುಗಳ, ದೇವಸ್ಥಾನಗಳ, ಕಾವ್ಯಗಳ ....ಇನ್ನೂ ಮುಂತಾದ ನೆಲೆಯಲ್ಲಿಯೂ ನಡೆಯುತ್ತಿತ್ತು. ಈ ದೇವರುಗಳ ಮಟ್ಟದ ಮತಾಂತರಕ್ಕೆ ಉತ್ತಮ ಉದಾಹರಣೆಯೆಂದರೆ ಬುದ್ದನದು.ಯಾವ ಬುದ್ದ ವೈದಿಕರ ವಿರುದ್ದವಾಗಿ ನಿಂತನೋ ಅವನನ್ನೇ ವೈದಿಕರು ತಮ್ಮ ದೇವರುಗಳ ಅವತಾರಗಳಲ್ಲಿ ಹತ್ತನೇಯ ಅವತಾರವನ್ನಾಗಿ ಮಾಡಿಕೊಂಡದ್ದು ವಿಪಯಾಸವೇ ಸರಿ.ಈ ಹಿನ್ನೆಲೆಯಲ್ಲಿ ನೋಡಿದಾಗ ಮಹಾವೀರನಿಗೂ ಈ ಅವತಾರದ ಭಾಗ್ಯ ಸಿಗಬೇಕಿತ್ತು. ಅವನಿಗೂ ಸಹ ಬುದ್ದನಂತೆಯೆ ಅಸಂಖ್ಯಾತಅನುಯಾಯಿಗಳಿದ್ದರು. ಇಬ್ಬರ ಪ್ರಭಾವವೂ ಸಹ ಸಮಾಜದಲ್ಲಿ ಅಷ್ಟೇ ರೀತಿಯಲ್ಲಿ ಬೇಳೆಯುತ್ತಿತ್ತು. ನಂತರ ಬದಲಾದ ಪರಿಸ್ಥಿತಿಯಲ್ಲಿ ಬುದ್ದ ಧರ್ಮ ಬಲಿಷ್ಟವಾಗಿ ನಿಂತದ್ದರಿಂದಲೋ  ಏನೋ ಬುದ್ದನಿಗೆ ಮಾತ್ರವೇ ಅವತಾರದ ಭಾಗ್ಯ ದೊರಕಿತು. ಕೇವಲ ಇವರು ಮಾತ್ರವೇ ಅಲ್ಲ ; ಶಿವ, ಕೃಷ್ಣ .. ಮುಂತಾದವರ ಕತೆಯೆಲ್ಲವೂ ಹೀಗೆಯೆ.ಇವರೆಲ್ಲರನ್ನೂ ವೈದಿಕರು ತಮ್ಮ ಪಕ್ಷಕ್ಕೆ ಮತಾಂತರ ಮಾಡಿಕೊಂಡರು.ಕೃತಿಗಳ ವಿಚಾರದಲ್ಲಿಯೂ ಅಷ್ಟೇ.ರಾಮಾಯಣ, ಮಹಾಭಾರತ ಮುಂತಾದ ಪುರಾಣ ಕಾವ್ಯಗಳೆಲ್ಲವನ್ನು ವೈದಿಕರು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡರು.ಇವರಂತೆಯೆ ಇತರೆ ಧರ್ಮಗಳವರೂ ಸಹ, ಪ್ರಮುಖವಾಗಿ ಜೈನರು ಕೆಲವು ಈ ರೀತಿಯ ದೇವರುಗಳನ್ನು ಮತ್ತು ಕಾವ್ಯಗಳನ್ನು ಜೈನೀಕರಣ ಕ್ರಿಯೆಗೆ ಒಳಪಡಿಸಿದರಾದರೂ ವೈದಿಕರಷ್ಟು ಯಶಸ್ವಿಯಾಗಲಿಲ್ಲ.

ಹೀಗೆ ಅನ್ಯವೊಂದನ್ನು ತಮ್ಮದನ್ನಾಗಿ ಒಗ್ಗಿಸಿಕೊಳ್ಳುವುದರಲ್ಲಿಯೂ ಸಂಘರ್ಷ ಅಡಗಿದೆ. ವೈದಿಕರ ದೃಷ್ಠಿಯಲ್ಲಿ ಯಾರು ರಾಕ್ಷಸರಾಗಿ, ದುಷ್ಟರಾಗಿ ಮಾರ್ಪಟ್ಟಿದ್ದರೋ ಅಂತಹ ಕರ್ಣ, ದುರ್ಯೋಧನ, ರಾವಣ ಇವೆ ಮುಂತಾದವರು ಜೈನರಲ್ಲಿ ಪ್ರತಿನಾಯಕರುಗಳಾಗಿ, ಉದಾತ್ತ ವ್ಯಕ್ತಿತ್ವ ಉಳ್ಳವರಾಗಿ ಕಾಣಿಸಿಕೊಂಡರು. ಈ ವಿಷಯದಲ್ಲಿ ಜೈನ ಕಾವ್ಯಗಳು ಹೆಚ್ಚು ವಾಸ್ತವೀಕತೆಯನ್ನು ತೋರುತ್ತವೆ. ದೇವರ ವಿಷಯದಲ್ಲಿ ಕೆಲವೊಮ್ಮೆ ಎರಡೂ ಪಕ್ಷದವರು ಒಬ್ಬರ ಕುರಿತು

ಜಗಳವಾಡುವುದು ನಡೆಯುತ್ತದೆ.ಇದನ್ನು ವೃಷಭನಾಥನಲ್ಲಿ ಕಾಣಬಹುದು.ಈ ವೃಷಭನಾಥ ಜೈನರ ಆದಿತೀರ್ಥಕರನೆಂದು ಸಧ್ಯ ಒಪ್ಪಿಕೊಂಡಿರುವ ವಿಷಯ.ಅವನನ್ನು ಶೈವನೆಂದು ಸಾಧಿಸುವ ಅನೇಖ ವಾದಗಳೂ ಇವೆ. ಸ್ವಾರಸ್ಯಕರವಾದ ಇನ್ನೊಂದು ವಿಷಯವೆಂದರೆ ಇಂದ್ರ, ವಿಷ್ಣು, ಬ್ರಹ್ಮ ಮೊದಲಾದವರನ್ನು ಜೈನರು ತಮ್ಮ ದೇವತೆಗಳನ್ನಾಗಿ ಮಾಡಿಕೊಂಡಿರುವರಾದರೂ ಶಿವನ ಕುರಿತಾಗಿ ಅವರು ಇಂತಹ ನಿಲುವನ್ನು ತಳೆಯುವುದಿಲ್ಲ.

ಈ ದೇವರುಗಳನ್ನು ತಮ್ಮವರೆಂದು ಸಾಧಿಸಿಕೊಳ್ಳುವ ಪ್ರಯತ್ನದ ಜೊತೆಯಲ್ಲಿಯೇ ದೇವಾಲಯಗಳನ್ನು ಈ ವಿಷಯದಲ್ಲಿ ಬಳಸಲಾಗಿದೆ. ಅನೇಕ ಜೈನ ಬಸದಿಗಳ ಚರಿತ್ರೆಯನ್ನು ಹೀಗೆ ಕಟ್ಟಲಾಗಿದೆ[14]:– **'ಈ ಬಸದಿಯನ್ನು ಕಟ್ಟಿದ್ದು ಕುಂತಿ, ಈ ಬಸದಿಯು ರಾಮನಿಂದ ನಿರ್ಮಿತವಾದದ್ದು** ..'ಹೀಗೆ ಅನೇಕ ಬಸದಿಗಳು ನಮಗೆ ದೊರೆಯುತ್ತವೆ. ಈಗಲೂ ನಮ್ಮ ಜನಪದರಲ್ಲಿ ನಂಬಿಕೆ ಇರುವಂತೆ ಪಾಂಡವರು ವನವಾಸ ಮಾಡುವಾಗಲೋ, ರಾಮನು ವನವಾಸ ಮಾಡುವಾಗಲೋ ಬಂದು ಹೋದ ಸ್ಥಳಗಳು ಮತ್ತು ಕಟ್ಟಿಸಿದ ದೇವಾಲಯಗಳು ಈಗಲೂ ಇರುವುದನ್ನು ಕಾಣಬಹುದು.

ಪ್ರತಿ ಪರಿಣಾಮಕ್ಕೂ ಹಿಂದೆ ಒಂದು ಕ್ರಿಯೆ ಇರುವಂತೆ ಈ ಮತಾಂತರದ ಹಿಂದೆಯೂ ಅನೇಕ ಕಾರಣಗಳು ಇವೆ. ಈ ಹಿಂದೆಯೆ ಬ್ರಹ್ಮಶಿವನ ಪ್ರಸಂಗದಲ್ಲಿ ನೋಡಿದಂತೆ ಆತನು ಹೇಳುವುದು ಶೈವದಲ್ಲಿ ತನಗೆ ಒಳ್ಪು ಕಾಣಲಿಲ್ಲ ಎಂದು. ಈ ಕಾರಣಕ್ಕಾಗಿಯೆ ನಾನು ಜೈನ ಮತವನ್ನು ಸೇರುತ್ತಿದ್ದೇನೆಂದು ಆತನು ಹೇಳುತ್ತಾನೆ. ಈ ಒಳ್ಪು ಎಂಬುದರ ಹಿಂದೆ ಒಂದುಮಾತ್ರ ಕಾರಣವನ್ನು ನಾವು ಊಹಿಸುವಂತಿಲ್ಲ. ಹಲವು ಕಾರಣಗಳು ಈ ಒಳ್ಪುವಿನ ಹಿಂದೆ ನಿಲ್ಲುತ್ತವೆ. ಕಲಬುರ್ಗಿಯವರು ಒಂದು ಕಡೆ ಹೇಳುವಂತೆ **"ಮತ ಮಹತ್ವವನ್ನರಿತ ಜ್ಞಾನಿಗಳು ಇಲ್ಲವೇ ಬೌತಿಕಲಾಭಕ್ಕೆ ಜೋತುಬಿದ್ದ ಅಜ್ಞಾನಿಗಳು ಮತಾಂತರವಾಗುತ್ತಾರೆ"**[15] ಎಂದು ಹೇಳುವಷ್ಟು ಸರಳವಾಗಿಯೂ ಇಲ್ಲ. ಬೇರೆ ಬೇರೆ ಕಾರಣಗಳು ಇರುತ್ತವೆ. ಅಂಬೇಡ್ಕರ್ ಒಂದು ಕಡೆ ಒಂದು ಅಂಶವನ್ನು ಗುರುತಿಸುತ್ತಾರೆ. **"ಭಾರತದ ಬೌದ್ದರು ಇಸ್ಲಾಂ ಅನ್ನು ಹೆಚ್ಚು ಸ್ವೀಕರಿಸಲು ಕಾರಣಗಳೇನು ಎಂಬುದನ್ನು ಅರಿಯಬೇಕಿದೆ"**[16] ಎಂದವರು ಹೇಳುತ್ತಾರೆ. ಮತಾಂತರಕ್ಕೆ ಕಾರಣಗಳು ಹಲವು ರೀತಿಯಲ್ಲಿರುತ್ತವೆ.

ಹಾಗಾದರೆ ಮತಾಂತರಕ್ಕೆ ಕಾರಣಗಳೇನು? ಧರ್ಮದ ಹುಟ್ಟುವಿಕೆಯೂ ಬೆಳೆಯುವಿಕೆಯೂ ಮತ್ತು ಸಾಯುವಿಕೆಯೂ ಆಯಾ ಕಾಲದ ಸ್ಪಂದನೆಯಾಗಿರುವಂತೆ ಅದಕ್ಕೆ ಅಂಟಿಕೊಂಡ ಮತಾಂತರವೂ ಸಹ ಸ್ಪಂದನೆಯೆ ಆಗುತ್ತದೆ. **"ಒಂದು ಧರ್ಮವು ಸತ್ಯವಾದರೆ ಎಲ್ಲಾ ಧರ್ಮಗಳೂ ಸತ್ಯವಾಗಿರಲೇಬೇಕು"**[17] ಎಂದು ವಿವೇಕಾನಂದರು ಹೇಳುತ್ತಾರೆ. ಹಾಗಾದರೆ ಮತಾಂತರವೆಂದರೆ ಒಂದು ಸತ್ಯದಿಂದ ಮತ್ತೊಂದು ಸತ್ಯಕ್ಕೆ ಹೊರಳುವುದೇ? ಜೈನರ **'ಅನೇಕಾಂತವಾದ'** ಈ ವಿಷಯದಲ್ಲಿ ನಮಗೆ

ಸಹಾಯ ಮಾಡಬಲ್ಲುದು. ಆಗ ಮಾತ್ರ ಎಲ್ಲಾ ಧರ್ಮಗಳು ನಮಗೆ ಸತ್ಯವಾಗಿ ಕಾಣಬಲ್ಲವು.ಹಾಗೆಯೆ ಈ ಮುಂದಿನ ಘಟನೆಗಳು ಉಳಿದ ಭಾಗವನ್ನು ಅರ್ಥೈಸಬಲ್ಲವು.

ಧರ್ಮಾಮೃತದಲ್ಲಿ ಹೀಗೊಂದು ಕತೆ ಬರುತ್ತದೆ[18]. ರಾಜ ಪರಿವಾರಕ್ಕೆ ಸೇರಿದವನಾದ ವಾರಿಷೇಣ ಎನ್ನುವವನು ಪತ್ರಾಚಾರ್ಯರ ಬಳಿ ವರಪಡೆದು ಇರುವಾಗ, ಇವನಮೇಲೆ ಕಳ್ಳತನದ ಆರೋಪ ಬರುತ್ತದೆ. ಇದರಿಂದ ಸಂಸಾರಕ್ಕೆ ಹೇಸಿದ ವಾರಿಷೇಣನು ದೀಕ್ಷೆ ಕೈಕೊಂಡು ಜಿನಮುನಿಯಾಗುತ್ತಾನೆ. ನಂತರದಲ್ಲಿ ತನ್ನ ಬಾಲ್ಯಗೆಳೆಯನಾದ ಬ್ರಾಹ್ಮಣನಾದ ಪುಷ್ಪದಾಡ ಎನ್ನುವವನನ್ನೂ ಸಹ ಸಂಸಾರದಿಂದ ಪಾರುಮಾಡಬೇಕೆಂದು ಬಯಸುತ್ತಾನೆ. ನಂತರ ಅವನನ್ನು ಬಲವಂತವಾಗಿ ಜಿನದೀಕ್ಷೆಕೊಳ್ಳುವಂತೆ ಮಾಡುತ್ತಾನೆ. ಅವನು ಆಗತಾನೇ ಮದುವೆಯಾದವನಿರುತ್ತಾನೆ. ಈ ಕಾರಣಕ್ಕೆ ಅವನು ಪುನ ಮನೆಗೆ ಬಂದು ಸಂಸಾರಿಯಾಗುತ್ತಾನೆ. ಪಟ್ಟುಬಿಡದ ವಾರಿಷೇಣನು ಅವನಿಗೆ ಭರತಮುನಿ ಮುಂತಾದವರ ಕತೆ ಹೇಳಿ, ಅವರ ಸರ್ವಸಂಗ ಪರಿತ್ಯಾಗವನ್ನು ತಿಳಿಸುತ್ತಾನೆ. ಕೊನೆಗೆ ತಾನು ಸುಂದರಿಯರಾದ 500 ಜನ ರಾಣಿಯರನ್ನು ತೊರೆದು ಬಂದುದನ್ನು ತಿಳಿಸಿ ಅವನಿಗೆ ಸಂಸಾರದಲ್ಲಿ ಹೇಸಿಗೆ ಮೂಡಿಸುತ್ತಾನೆ. ಅವನನ್ನು ಮತ್ತೆ ಸವಣನನ್ನಾಗಿ ಮಾಡುತ್ತಾನೆ. ಇದು ಕತೆಯ ಸಾರ.

ಇದು ಬಲವಂತದ ಮತಾಂತರಕ್ಕೆ ಉದಾಹರಣೆಯಾಗಿ ನಿಲ್ಲಬಲ್ಲುದು. ತನಗೆ ಸಂಸಾರದಲ್ಲಿ ಹೇಸಿಗೆಯಾದ ಮಾತ್ರಕ್ಕೆ ಅದನ್ನು ಇನ್ನೊಬ್ಬರಲ್ಲಿಯೂ ಮೂಡಿಸಬೇಕು ಎನ್ನುವುದು ಯಾವ ರೀತಿಯ ನ್ಯಾಯ. ಅವನಿಗೆ ವ್ರತಗಳನ್ನು ಮಾತ್ರವೇ ದಯಪಾಲಿಸಿ ಸಂಸಾರದಲ್ಲಿ ಅವನು ಇಷ್ಟವಿರುವವರೆಗೆ ನೆಲೆಸಲು ಬಿಡಬಹುದಿತ್ತು. ಈ ಘಟನೆ ಮತಾಂತರದ ವ್ಯಂಗವಲ್ಲದೆ ಮತ್ತೇನೂ ಅಲ್ಲ. ಇಲ್ಲಿ ಬ್ರಾಹ್ಮಣ ಮಿತ್ರನನ್ನೇ ಮತಾಂತರಿಸಲು ಪ್ರಯತ್ನಿಸುತ್ತಿರುವಲ್ಲಿ ಕತೆಯ ರಚನೆಕಾರರ ಉದ್ದೇಶವೂ ಅಡಗಿದೆ. ಇಲ್ಲಿಯ ಸರ್ವಸಂಗ ಪರಿತ್ಯಾಗ ಎನ್ನುವಲ್ಲಿ ಮಹಿಳೆಯೆ ಮೊದಲು ನಿಲ್ಲುವುದೊಂದು ದುರಂತವೇ ಸರಿ. ಇದು ಎಲ್ಲ ಧರ್ಮಗಳಲ್ಲಿಯೂ ವಿವಿಧ ರೀತಿಯಲ್ಲಿ ಅಡಗಿರಬಹುದಾದ ಇನ್ನೊಂದು ಮುಖ. ಮಹಿಳೆಯರನ್ನು ಸಂಸಾರದಿಂದ ಮುಕ್ತ ಮಾಡಬೇಕೆಂಬ ನೇರ ಉಕ್ತಿ ದೊರೆಯದಿರುವುದು ಧರ್ಮದ ಇನ್ನೊಂದು ದುರಂತ.

ಇದೆ ಕತೆಯಲ್ಲಿ ಒಂದು ಮಾತು ಬರುತ್ತದೆ. **“ಸುಂದರವಾದ ಸುಖವನ್ನುಂಟು ಮಾಡುವ ಮನಸ್ಸಿದ್ದರೆ ಜೈನ ಧರ್ಮವನ್ನು ನಂಬಿಕೆಯಿಂದ ಸುಗಮವಾಗಿ ಹಿಡಿಯಬೇಕು. ಹಗೆಯಿಂದ ತುಂಬಿ ಹೆದರಿಕೆಯಿಂದ ಕೊಲೆಯಲ್ಲಿ ಕೂಡಿದ ಮತವನ್ನು ತೊರೆಯಬೇಕು”**[19]. ಇದು ಆ ಕಾಲದ ತನ್ನ ಪ್ರತಿಸ್ಪರ್ಧಿಗಳ ಕುರಿತು ಜೈನಧರ್ಮ ಹೇಳಿಕೊಳ್ಳುತ್ತಿರುವ ಮಾತು. ಬಹುಶ ಇದು ಶೈವರ ಕುರಿತಾದದಂತೆ ಹೆಚ್ಚು ಹೋಲುತ್ತದೆ. ಯಾಕೆಂದರೆ ಕೃತಿಯ ರಚನೆಯ ಕಾಲಕ್ಕೆ ಜೈನರಿಗೆ ಪ್ರಬಲವಾದ

ಪೋಟಿ ಎಂದರೆ ಇವರೇ. ಇವರೇ ಜೈನರಿಗೆ ಬಹುದೊಡ್ಡ ಪೆಟ್ಟು ಕೊಟ್ಟವರು. ಇತರೆ ಎಲ್ಲಾ ಧರ್ಮಗಳಿಗೂ ಸಹ ಅನ್ವಾಗುವಂತೆಯೂ ಆ ಮಾತನ್ನು ಅರ್ಥೈಸಬಹುದು. ಇದರಲ್ಲಿ ಶೈವದ ಪಾಲು ಹೆಚ್ಚು ಅಷ್ಟೆ.

ಇದಕ್ಕೆ ಉತ್ತಮ ಉದಾಹರಣೆಯೆಂದರೆ ಇರಿಭಕ್ತಯ್ಯ[20]. ಈ ಇರಿಭಕ್ತಯ್ಯನು **'ದೂಷಕರನಳರಿಸಲ್ವೇಕೆಂದು'** ಸಿದ್ದನಾದವನು. ಇದಕ್ಕಾಗಿಯೇ ಒಂದು ವಿಶೇಷವಾದ ಆಯುಧವನ್ನು ಮಾಡಿಸಿ **'ಕೊಡಲಿಗೊಂಡಂ'** ಎನ್ನುವ ಬಿರುದನ್ನೂ ಸಹ ಪಡೆದವನು. **'ಎಲ್ಲಿ ಹರನಿಂದೆಗೆಯ್ದಲ್ಲಿ ನೆರೆಕೊಲತಿರ್ಪ'** ಎಂದು ಕವಿ ಈತನನ್ನು ವರ್ಣಿಸುತ್ತಾನೆ. ಈತನ ಉಗ್ರಭಕ್ತಿ ಎಂತಹುದಾಗಿತ್ತೆಂದರೆ ಅನ್ಯಸಮಯಿಗಳನ್ನು ಸದೆಬಡಿಯಲು ಸದಾ ಕೊಡಲಿಯನ್ನು ಹಿಡಿದುಕೊಂಡೆ ತಿರುಗುತ್ತಿದ್ದನಂತೆ. ಹೀಗೆ ಒಂದು ದಿನ ಈತ ಶಿವಪೂಜೆಯನ್ನು ಮುಗಿಸಿಬರುವಾಗ ಎದುರಿಗೆ ನೀಳಬೊಟ್ಟಿಟ್ಟುಕೊಂಡ ವೈಷ್ಣವನೊಬ್ಬ ಎದುರಾಗುತ್ತಾನೆ. ಆ ಬೊಟ್ಟುತೆಗೆದು ವಿಭೂತಿಯಿಟ್ಟುಕೊಳ್ಳಲು ಹೇಳುತ್ತಾನೆ. ಅವನು ಇದಕ್ಕೆ ಒಪ್ಪದಿದ್ದಾಗ ಕೊಡಲಿಯಿಂದ ಹೊಡೆದು ಕೊಲ್ಲುತ್ತಾನೆ. ಎಂತಹ ಉಗ್ರಭಕ್ತ..!?

ಈ ಕತೆಯು ಇನ್ನೂ ಮುಂದುವರೆಯುತ್ತದೆ. ಆ ಕೊಲೆಯ ದೂರು ರಾಜನನ್ನು ಮುಟ್ಟುತ್ತದೆ. ವಿಪರ್ಯಾಸವೆಂದರೆ ಆ ಕೊಲೆಯ ವಿಷಯ ರಾಜನಿಗೆ ಸಂತಸದ ವಿಷಯವೇ ಆಗಿರುತ್ತದೆ. ಆದರೂ ತನ್ನ ಸಂತಸವನ್ನು ಹೊರಗೆ ತೋರಗೊಡದೆ ಆ ಶಿವಭಕ್ತನನ್ನು ವಿಚಾರಿಸುವಂತೆ ನಟಿಸುತ್ತಾನೆ. ಇದಲ್ಲದೆ ರಾಜನು ಅವನನ್ನು ಸಂಬೋದಿಸುವುದು ಭಕ್ತ ಎಂತಲೇ. ಇಲ್ಲಿ ಒಂದು ವಿಷಯ ಸ್ಪಷ್ಟವಾಗುತ್ತದೆ ರಾಜನೂ ಸಹ ಆ ದಾಳಿಮಾಡಿದವನ ಮತದವನೇ ಇರಬೇಕು. ಇಲ್ಲವಾದಲ್ಲಿ ಒಂದು ಕೊಲೆಯ ವಿಷಯ ಅವನಲ್ಲಿ ಸಂತಸ ಮೂಡಿಸುವುದಾದರೂ ಹೇಗೆ? ಇವು ಪ್ರಭುತ್ವ ಮತ್ತು ಧರ್ಮಗಳ ಒಳ ಒಪ್ಪಂದಗಳು. ಬಹುತೇಕ ಎಲ್ಲಾ ಧರ್ಮಗಳೂ ಇದರಲ್ಲಿ ಭಾಗಿ. ಪ್ರಭುತ್ವವು ತಾನು ನೆಮ್ಮದಿಯಾಗಿರಲು ಹೀಗೆ ಬಹುಸಂಖ್ಯಾತ ಮತವೊಂದರ ಬೆನ್ನುಬೀಳುತ್ತದೆ.ಮತ್ತು ಮತವು ತಾನು ಬಲಿಷ್ಠವಾಗಲು ಮತ್ತು ಸಾಮಾಜಿಕ ರಾಜಕಾರಣ ಮಾಡಲು ಹೀಗೆ ಪ್ರಭುತ್ವವೊಂದನ್ನು ಬಳಸಿಕೊಳ್ಳುತ್ತದೆ. ಪ್ರಭುತ್ವದ ಬೆಂಬಲವಿಲ್ಲದ ಪಕ್ಷದಲ್ಲಿ ಹೀಗೆ ಸಾಮಾನ್ಯಬೀದಿಯಲ್ಲಿ ಕೊಲೆಮಾಡುವುದು ಅಂತಹ ಭಕ್ತರಿಗೆ ಸರಳಮಾತಲ್ಲ. ಆ ರಾಜನ ವಿಚಾರಣೆಗೆ ಪ್ರತಿಯಾಗಿ ಆ ಭಕ್ತ ಹೀಗೆ ವಾದಿಸುತ್ತಾನೆ. ಶಿವನು ನಮಗೆ **"ಭಸಿತಮನಿಡಲ್ಕೆಂದು ಭಾಳಮಂ ಮಾಡಿದಂ**

**ಒಸೆದು ತುತಿಯಿಸಲೆಂದು ಜಿಹ್ವೆಯಂ ಮಾಡಿದಂ**

**ತನ್ನನರ್ಚಿಸಲೆಂದು ಕೈಗಳಂ ಮಾಡಿದಂ**

**ತನ್ನನೀಕ್ಷಿಸಲೆಂದು ಕಣ್ಗಳಂ ಮಾಡಿದಂ"**

ಎಂದು ಆತನು ವಾದಿಸುತ್ತಾನೆ. ಎಲ್ಲವೂ ಶಿವನಿಂದ ಬಂದುದು , ಆದ್ದರಿಂದ ಎಲ್ಲವೂ ಶಿವನಿಗಾಗಿ ಅರ್ಪಿತವಾಗಬೇಕು ಎಂದು ಅವನು ಬಯಸುತ್ತಾನೆ. ಇದಕ್ಕೆ ಪ್ರತಿಯಾಗಿ ಆ ವೈಷ್ಣವರೂ ವಾದ ಮಾಡಬಹುದಿತ್ತು. ಇವನು ಹೇಳಿದ ಅದೇ ವಿಷಯಗಳನ್ನು ತಮ್ಮ ವಿಷ್ಣುವಿಗೆ ಸೋಕಿಸಿ. ಇಲ್ಲಿ ಹಾಗಾಗುವುದಿಲ್ಲ. ರಾಜನಿಗೆ ಪ್ರತಿವಾದ ಬೇಕಿಲ್ಲ. ರಾಜನು ಈ ಶಿವಭಕ್ತನ ವಾದವನ್ನು ಪೂರ್ಣವಾಗಿ ಒಪ್ಪುತ್ತಾನೆ. ಅದು ಎಷ್ಟರ ಮಟ್ಟಿಗೆಂದರೆ , ಶಿವನನ್ನು ಒಪ್ಪದ್ದರಿಂದಲೇ ತಾನು ಕೊಲೆ ಮಾಡಿದುದಾಗಿ ತನ್ನನ್ನು ಸಮರ್ಥಿಸಿಕೊಂಡ ಆ ಶಿವಭಕ್ತನು ಕೊಲೆಯಾದವನ ಬಳಗವೆಲ್ಲವೂ ಶಿವದೀಕ್ಷೆಯನ್ನು ಕೊಂಡರೆ ಅವನನ್ನು ಬದುಕಿಸುವುದಾಗಿ ಹೇಳುತ್ತಾನೆ. ರಾಜನೂ ಇದನ್ನು ಅನುಮೋದಿಸುತ್ತಾನೆ. ನಂತರ ಬೇರೆ ದಾರಿ ಇಲ್ಲದ ಆ ಬಳಗವೆಲ್ಲವೂ ಶಿವಭಕ್ತರಾಗಿ ಬದಲಾಗುತ್ತಾರೆ.

ಕವಿ ಈ ಕತೆಯನ್ನು ಮುಗಿಸುವ ಈ ಸಾಲುಗಳನ್ನು ನೋಡಿ **"ಅಂದು ಮೊದಲಾಗಿ ವೈಷ್ಣವರೆಂಬರೆಲ್ಲಲ್ಲಿ ಇರ್ದಡಿರಿ ಭಕ್ತನರೆಯಟ್ಟಿ ಕೊಂದಪನೆಂದು ಇರ್ದರೆಲ್ಲಂ ಶಿವನಭಕ್ತರಾದರು"**. ಈ ಘಟನೆಯ ನಂತರ ಉಳಿದ ವೈಷ್ಣವರೆಲ್ಲರೂ ಇರಿಭಕ್ತನಿಗೆ ಅಂಜಿ ಶೈವರಾಗಿ ಬದಲಾದರಂತೆ. ಆ ವಾತವಾರಣದಲ್ಲಿ ಅನ್ಯರಿಗೆ ಲಭ್ಯವಿದ್ದುದು ಎರಡೇ ದಾರಿಗಳೆಂದು ತೋರುತ್ತದೆ. ಒಂದು ತಮ್ಮ ಧರ್ಮವನ್ನು ಬಿಡುವುದು ಇಲ್ಲವೇ ತಮ್ಮ ಜೀವವನ್ನು ಬಿಡುವುದು. ಬಹುಶ ಇನ್ನು ಕೆಲವರು ಮೂರನೆಯ ದಾರಿಯೊಂದರ ಬಗ್ಗೆಯೂ ಚಿಂತಿಸಿರಬಹುದು ಅದು ಊರನ್ನು ಬಿಡುವುದು.

ಕೆಲವು ಘಟನೆಗಳು ಸಾಮೂಹಿಕ ಮತಾಂತರಕ್ಕೆ ದಾರಿ ಮಾಡಿಕೊಡುತ್ತವೆ ಎಂಬುದಕ್ಕೆ ಈ ಕತೆಯೆ ಉತ್ತಮ ಉದಾಹರಣೆ. ಕಾರಣಗಳಿಗೆ ಏನೋ ಇದರ ಹಿಂದಿನ ಘಟನೆಯಲ್ಲಿ ಜೈನರು ಹೇಳಿದ್ದು **'ಭಯದಿಂದ ಕೂಡಿದ ಧರ್ಮವನ್ನು ಬಿಡುವುದು'** ಎಂದು. ಧರ್ಮ ಮತ್ತು ಪ್ರಭುತ್ವಗಳು ಒಂದುಕಡೆ ಸೇರಿದಾಗ ಜನಸಾಮಾನ್ಯರ ಬದುಕು ಹೇಗೆ ಉಸಿರಾಡುತ್ತದೆ ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ಅರಿಯಬಹುದು. ಧರ್ಮದ ಹೆಸರಿನಲ್ಲಿ ಪ್ರಭುತ್ವವು ಕೊಂದವರ ಪರ ನಿಲ್ಲುವುದು ದುರಂತವಲ್ಲದೆ ಮತ್ತೇನೂ ಅಲ್ಲ. ಅನ್ಯಾಯಕ್ಕೆ ಒಳಗಾದದ್ದು ತನ್ನದೇ ರಾಜ್ಯದ ಪ್ರಜೆಯಾದರೂ ರಾಜನಿಗೆ ಅದು ತಟ್ಟುವುದಿಲ್ಲ. ಚಿದಾನಂದಮೂರ್ತಿಯವರು ಒಂದುಕಡೆ ಉಲ್ಲೇಖ ಮಾಡುತ್ತಾರೆ–**"ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿ ಧರ್ಮ[21]"** ಎಂದು. ಈ ಮಾತು ಎಲ್ಲಾ ಕಾಲಕ್ಕೂ ಎಲ್ಲಾ ಧರ್ಮಕ್ಕೂ ಅನ್ವಯಿಸುವುದಿಲ್ಲವೇನೋ. ಅನ್ವಯಿಸಿದರೂ ಸಹ ಅದು ಆ ಧರ್ಮದ ಸಿದ್ಧಾಂತದ ಮಟ್ಟಿಗಷ್ಟೆ ಆಗಿರುತ್ತದೆಯೆ ವಿನಹ ಆಚರಣೆಗಳ ಮಟ್ಟಿಗಂತೂ ಆಗಿರಲಾರದು. ತನ್ನ ರಾಜ್ಯದ ಬಹುಸಂಖ್ಯಾತರ ಪರ ನಿಲ್ಲುವುದು ರಾಜನ ರಾಜಕೀಯ ನಡೆಯೇ ಆದರೂ ಸಹ, ತನ್ನದೇ ಪ್ರಜೆಯ ಕೊಲೆಯಂತಹ ವಿಷಯದಲ್ಲಿ ಸಂತಸಪಡುವುದು ಯಾವ ಕಾಲಕ್ಕೂ ಸರಿಯಾದುದಲ್ಲ. ಇಂತದೇ

ಒಂದು ಬಹುಸಂಖ್ಯಾತರ ಪರ ಘಟನೆಯು ಬುಕ್ಕರಾಯನ ಕಾಲದಲ್ಲಿಯೂ ಸಹ ನಡೆಯುತ್ತದೆ. ಇಲ್ಲಿ ಪ್ರಾಸಂಗಿಕವಗಿಯಷ್ಟೇ ಹೇಳಿದ್ದು ಬೇರೊಂದು ಅಧ್ಯಾಯದಲ್ಲಿ ಅದನ್ನು ಚರ್ಚಿಸಲಾಗಿದೆ.

ಈ ಧರ್ಮಕ್ಕೂ ಪ್ರಭುತ್ವಕ್ಕೂ ಎಂತಹ ನಂಟೆಂದರೆ ಒಂದು ಇನ್ನೊಂದಕ್ಕೆ ಪೂರಕ ಮತ್ತು ವಿರುದ್ದವಾದಲ್ಲಿ ಒಂದು ಇನ್ನೊಂದಕ್ಕೆ ಮಾರಕ. ಇದಕ್ಕೆ 13–14ನೇ ಶತಮಾನದ ಜೈನದ ಪರಿಸ್ಥಿತಿಯನ್ನು ಸರಿಮಾಡಬಹುದು. ಆ ಕಾಲದ ಜೈನವು ಪದೆ ಪದೆ ತನ್ನ ಹಳೆಯ ದಿನಗಳನ್ನು ನೆನೆಯುತ್ತದೆ. ಆ ಹಳೆಯ ದಿನಗಳಲ್ಲಿ ಮುಕ್ಕಾಲು ಪಾಲು ಗಂಗ ಅರಸರನ್ನು ಕುರಿತಾದುವು. ಕಾರಣ ಗಂಗರು ಆರಂಭದಿಂದಲೂ ತಮ್ಮ ಕೊನೆಯವರೆಗೆ ಜೈನಕ್ಕೆ ಆಶ್ರಯ ನೀಡಿದರು. ಒಂದು ರೀತಿಯಲ್ಲಿ ಜೈನರು ದೊಡ್ಡದಾಗಿ ಬೆಳೆಯಲಿಕ್ಕೆ ಗಂಗರು ಬಹುದೊಡ್ಡ ಕಾರಣರು. ರಾಷ್ಟ್ರಕೂಟರ ಕಾಲದವರೆಗೆ ಅಂದರೆ ಸುಮಾರು 11ನೇ ಶತಮಾನದವರೆಗೆ ಜೈನಕ್ಕೆ ರಾಜರ ಆಶ್ರಯಗಳು ಬಲವಾಗಿಯೆ ದೊರೆತವು. ಆ ಕಾಲವನ್ನು ಸಾಮಾನ್ಯವಾಗಿ ಜೈನರ ಸುವರ್ಣಯುಗ ಅಂತಲೇ ಕರೆಯಲಾಗುತ್ತದೆ. ಆ ನಂತರದಲ್ಲಿ ರಾಜಾಶ್ರಯಗಳು ಅದರ ಕೈತಪ್ಪಿದವು. ಜನರ ಬೆಂಬಲ ಕಡಿಮೆಯಾದುದಕ್ಕೆ ರಾಜಾಶ್ರಯಗಳು ಕೈ ತಪ್ಪಿದವೋ ಇಲ್ಲವೇ ರಾಜಾಶ್ರಯಗಳು ಕಡಿಮೆಯಾದುದಕ್ಕೆ ಜನರಬೆಂಬಲ ಕಡಿಮೆಯಾಯಿತೋ ಹೇಳುವುದು ಕಷ್ಟ. ಅಂತೂ ಜೈನವು ಆ ಕಾಲದಲ್ಲಿ ಮತ್ತೆಂದು ಏಳಿಗೆಯಾಗದಷ್ಟು ಸೊರಗಿದ್ದಂತೂ ಸ್ಪಷ್ಟ.ಜನಬೆಂಬಲ ಅಥವಾ ಬಹುಸಂಖ್ಯಾತತೆ ಒಂದಕ್ಕೊಂದು ಪೂರಕ ಎಂಬುದಕ್ಕೆ ಜೈನವೇ ಪ್ರಮಾಣ.

ಎಲ್ಲಾ ಧರ್ಮಗಳು ರಾಜಾಶ್ರಯವನ್ನು ಬಯಸುವುದಕ್ಕೂ ಕಾರಣವಿದೆ. ಈ ಹಿಂದೆಯೆ ಹೇಳಿದಂತೆ ರಾಜನು ಅನುಸರಿಸುವ ಧರ್ಮವು ಜನರ ಮೇಲೆ ಪ್ರಭಾವ ಬೀರುವ ಸಮಯವಿರುತ್ತದೆ. ಇಂತಹದೆ ವಿವರಣೆಯ ಪ್ರಸಂಗವೊಂದು ಆದಿಪುರಾಣದಲ್ಲಿ ಬರುತ್ತದೆ[22]. ಭರತ ಬಾಹುಬಲಿಯರ ಯುದ್ಧ ಮುಗಿದ ತರುವಾಯು ಬಾಹುಬಲಿ ತಪಸ್ಸಿಗೆ ಸಿದ್ಧನಾಗುತ್ತಾನೆ. ಅವನನ್ನು ಕಳುಹಿಸಲು ಬಂದಿದ್ದ ಭರತಾದಿಯಾಗಿ ಪುರಜನರು ವಾಪಸ್ಸು ಹೋಗುತ್ತಾರೆ. ಆದರೆ ಕಚ್ಚ–ಮಹಾ ಕಚ್ಚರು, ಭರತನ ಮಗ ಮರೀಚಿಯು, ಇನ್ನೂ ನಾಲ್ಕುಸಾವಿರ ಕಿರೀಟದಾರಿಯಾದ ಅರಸುಮಕ್ಕಳು

**"ಅರಸನ ನೆಗಳ್ದಂದದೊಳನು**

**ಚರಂಗೆ ನೆಗಳಲ್ಕೆವೇಳ್ಕುಮೆಂದರಿಯದೆ ತ**

**ದ್ಗುರುವಿನ ಮತಮಂ ಭಕ್ತಿಯ**

**ಭರದಿಂದಂ ಜಾತರೂಪಮ್ ಕೈಕೊಂಡರ್"**

ಅರಸನ ಮತವೇ ತಮ್ಮ ಮತವೆಂದು ಅರಿತು ಅವರೆಲ್ಲರೂ ಅವನಂತೆಯೆ ದೀಕ್ಷೆ ಕೈಕೊಂಡು ತಪಸ್ಸಿಗೆ ನಿಲ್ಲುತ್ತಾರೆ. ಇಲ್ಲಿ ದೀಕ್ಷೆಗೂ ಮತಾಂತರಕ್ಕೂ ಸ್ವಲ್ಪ ವ್ಯತ್ಯಾಸವನ್ನು ಉಳಿಸಬೇಕಾಗುತ್ತದೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಬಾಹುಬಲಿಯೂ ಸೇರಿದಂತೆ ಅವರೆಲ್ಲರೂ ದೀಕ್ಷೆಯನ್ನು ಕೈಕೊಳ್ಳುತ್ತಾರೆ. ಬಾಹುಬಲಿ ಮತ್ತು ಭರತರು ಆದಿದೇವನ ಮಕ್ಕಳೆಂಬುದು ನಮಗೆ ತಿಳಿದ ವಿಷಯವೇ ಆಗಿದೆ. ಈ ಆದಿದೇವನೇ ಜೈನರ ಮೊದಲ ತೀರ್ಥಂಕರ. ತಂದೆಯು ಮುನ್ನವೇ ಜೈನನಿರುವಾಗ ಮಕ್ಕಳು ಮತ್ತೆ ಜೈನದೀಕ್ಷೆಯನ್ನು ಪಡೆಯುವ ತಿರುಳಾದರೂ ಏನು? ಈ ವಿಷಯಕ್ಕೆ ಸಂಬಂಧಿಸಿದಂತೆ ಮನು ವಿ ದೇವದೇವನ್ ಅವರ ಒಂದೆರೆಡು ವಿಚಾರಗಳನ್ನು ನೋಡಬಹುದು[23]. ಅವರು ಊಹಿಸುವಂತೆ ಬಹುಶ ಆಗ ತಂದೆತಾಯಿಯರ ಮತವು ಮಕ್ಕಳಿಗೆ ಅಂಟಿಕೊಳ್ಳುತ್ತಿದ್ದಿಲ್ಲ. ಅಂದರೆ ಮಕ್ಕಳಿಗೆ ತಾವು ಬೆಳೆದು ವಿಚಾರ ಮಾಡಲು ಶಕ್ತರಾದ ಮೇಲೆ ತಮಗೆ ಬೇಕಾದ ಮತವನ್ನು ಆಯ್ಕೆಮಾಡಿಕೊಳ್ಳುವ ಅವಕಾಶವಿತ್ತೆಂದು ನಾವಿಲ್ಲಿ ಭಾವಿಸಬಹುದು. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬಹುತೇಕ ಕಡೆಗಳಲ್ಲಿ ನಾವು ಈ ಕುರಿತ ಪ್ರಸಂಗಗಳನ್ನು ನೋಡಬಹುದು. ಅವರೇ ಮುಂದುವರೆದು ಹೇಳುವಂತೆ "ತಂದೆ ತಾಯಿಯರ ಮತವೇ ತನ್ನದೆಂದು ಹೇಳುವ ಮೊದಲ ಉಲ್ಲೇಖ ಪದ್ಮಾವತಿಯದು" ಎಂದು ಹೇಳುತ್ತಾರೆ. ಈ ಪದ್ಮಾವತಿ ಆದಯ್ಯನ ಕತೆಯಲ್ಲಿ ಬರುವಾಕೆ. ಕನ್ನಡದ ಮೂಲಗಳು ಆದಯ್ಯ ಎಂದು ಗುರುತಿಸುವ ಈತ ಗುಜರಾತಿನಿಂದ ಬಂದ ವ್ಯಾಪಾರಿ. ಕಾಲ ಕ್ರಿಶ 12ನೇ ಶತಮಾನ. ದೇವದೇವನ್ ಅವರು ಈತನನ್ನು ಗುಜರಾತಿನಿಂದ ಬಂದ ವ್ಯಾಪಾರಿಯೊಬ್ಬ ಪುಲಿಗೆರೆಯಲ್ಲಿ ಸೋಮನಾಥ ಬಸದಿಯನ್ನು ಉರುಳಿಸಿ ಸೋಮನಾಥ ದೇವಾಲಯ ಸ್ಥಾಪಿಸಿದ ಕತೆಯೊಂದಿಗೆ ಗುರುತಿಸುತ್ತಾರೆ. ಈತನು ಕರ್ನಾಟಕಕ್ಕೆ ಬಂದು ಜೈನಳಾದ ಪದ್ಮಾವತಿಯಲ್ಲಿ ಮೋಹಗೊಳ್ಳುತ್ತಾನೆ. ವೈವಾಹಿಕ ಮತಾಂತರವನ್ನು ಇಲ್ಲಿ ಕಾಣಬಹುದು. ಇದೇ ಆದಯ್ಯನ ಕತೆಯನ್ನು ಒಳಗೊಂಡಂತದು ರಾಘವಾಂಕ ಕವಿಯ ಸೋಮನಾಥ ಚರಿತ್ರೆ. ಒಂದು ಯುದ್ಧದ ಘಟನೆ ಬರುತ್ತದೆ. ಆದಯ್ಯ ಹಾಗು ಅವನ ಗುಂಪು ಜೈನರ ರಾಜ ಚಂದ್ರಾದಿತ್ಯನೊಂದಿಗೆ ಸೆಣೆಸುತ್ತದೆ. ಇಲ್ಲಿ ಸೋತ ಚಂದ್ರಾದಿತ್ಯನು ಪಲಾಯನ ಮಾಡುತ್ತಾನೆ. ಸೋತ ಜೈನರ ಮಾರಣಹೋಮ ನಡೆಯುತ್ತದೆ. ಉಳಿದವರು ಪ್ರಾಣ ಉಳಿಸಿಕೊಳ್ಳಲು ಆದಯ್ಯನ ಮತಕ್ಕೆ ಮತಾಂತರಗೊಳ್ಳುತ್ತಾರೆ[25]. ಇಂತಹ ಧರ್ಮ ಸಂಬಂಧೀ ಅದೆಷ್ಟೋ ಯುದ್ಧಗಳು ನಮ್ಮ ಇತಿಹಾಸದಲ್ಲಿ ನಡೆದು ಹೋಗಿವೆ. ಸೋತವರು ಮತಾಂತರವಾಗುವ ಪ್ರಕ್ರಿಯೆಯನ್ನು ಇಲ್ಲಿ ಕಾಣಬಹುದು. ಇದೂ ಸಹ ಮತಾಂತರದ ಕಾರಣಗಳಲ್ಲಿ ಪ್ರಮುಖವಾದುದು.

ಸದ್ಯ ದೇವದೇವನ್ ಅವರು ಹೇಳಿರುವ ವಿಷಯದ ಕುರಿತಂತೆ ಹೆಚ್ಚಿನ ಅಧ್ಯಯನಗಳು ಆಗಬೇಕಿದೆ.ಆ ಮೂಲಕ ಆ ವಿಚಾರದ ಗಟ್ಟಿತನವನ್ನು ಕಂಡುಕೊಳ್ಳಬೇಕಿದೆ.

ಈಗ ಬಾಹುಬಲಿಯ ವಿಚಾರಕ್ಕೆ ಬರೋಣ. ಅವನ ಜೊತೆ ಸಾವಿರ ಸಂಖ್ಯೆಯಲ್ಲಿ ದೀಕ್ಷೆ ಕೊಂಡಿದ್ದನ್ನು ನೋಡಿದೆವು. ಇಂತವು ಒಂದು ಧರ್ಮವು ಅನಾಯಾಸವಾಗಿ ತನ್ನ ಅನುಯಾಯಿಗಳನ್ನು ಹೆಚ್ಚಿಸಿಕೊಳ್ಳುವ ಪ್ರಸಂಗಗಳು. ಇಂತವುಗಳಿಂದ ಬಹುಸಂಖ್ಯಾತವಾಗುವ ಧರ್ಮವು ರಾಜರುಗಳ ವಿಶೇಷ ಕಾಳಜಿಗೆ ಪಾತ್ರವಾಗುತ್ತದೆ. ಈ ಕಾರಣಕ್ಕೆ ಯಾವ ಧರ್ಮವಾದರೂ ಮೇಲುವರ್ಗದ ಬ್ರಾಹ್ಮಣನನ್ನೋ, ಆರ್ಥಿಕವಾಗಿ ಬಲಿತ ವ್ಯಾಪಾರಿಯನ್ನೋ, ಜನ ಬೆಂಬಲದ ನಾಯಕನನ್ನೋ, ಮತ್ತು ಇವೆಲ್ಲವೂ ಇರಬಹುದಾದ ರಾಜನನ್ನು ತಮ್ಮ ಮತಕ್ಕೆ ಸೆಳೆಯಲು ವಿಶೇಷ ಪ್ರಯತ್ನವನ್ನು ಮಾಡುತ್ತವೆ. ಅಶೋಕ ಸಾಮ್ರಾಟನಿಂದ ಬೌದ್ಧ ಧರ್ಮಕ್ಕಾದ ಲಾಭಗಳನ್ನು ನಾವು ಈ ಹಿನ್ನೆಲೆಯಲ್ಲಿ ನೊಡಬಹುದು. ಅವನ ವಿಶೇಷ ಪ್ರಯತ್ನಗಳಿಂದ ಅದು ಭಾರತವನ್ನು ದಾಟಿ ವ್ಯಾಪಿಸಲು ಸಹಾಯವಾಯಿತು. ಅಂತೆಯೇ ರಾಜನಾದ ವಿಷ್ಣುವರ್ಧನನನ್ನು ಈ ನಿಟ್ಟಿನಲ್ಲಿ ನೋಡಬಹುದು. ನಮಗೆಲ್ಲ ಗೊತ್ತಿರುವಂತೆ ಈತನು ಜೈನವನ್ನು ತೊರೆದು ವೈಷ್ಣವನಾದವನು. ಈತನ ಒಟ್ಟಾರೆ ಧರ್ಮಯಾತ್ರೆಯನ್ನು ಈ ಮುಂದಿನ ಕತೆಯ ಮೂಲಕ ಹೀಗೆ ನೋಡಬಹುದು[24].

ಈ ಕತೆಯು ರಾಮಾನುಜಚಾರ್ಯರಿಂದ ಶುರುವಾಗುತ್ತದೆ. ಈತನೇ ಬಿಟ್ಟಿದೇವನನ್ನು ವಿಷ್ಣುವರ್ಧನನನ್ನಾಗಿ ಮಾಡಿದವನು. ಈತನ ಶಿಷ್ಯೆಯಾರಾದ ಬಂಗಾರಿ ಮತ್ತು ಸಿಂಗಾರಿಯರು 'ಜೈನರೆಲ್ಲರಂ ಶ್ರೀವೈಷ್ಣವರಂ ಮಾಳ್ಪ ಕಜ್ಜಮನೆತ್ತಿಕೊಂಡು' ರಾಜನ ಆಸ್ಥಾನವನ್ನು ಸೇರುತ್ತಾರೆ. ಅಲ್ಲಿ ರಾಜ ಮೆಚ್ಚುವಂತ ಕೆಲಸಗಳಿಂದ ಅವನ ಕೃಪೆಗೆ ಪಾತ್ರರಾಗುತ್ತಾರೆ. ಒಮ್ಮೆ ರಾಮಾನುಜರು ಅರಮನೆಯ ಕಡೆಯಲ್ಲಿ ಇರುವಾಗ ಅವರ ಬಗ್ಗೆ ಪಣಕಟ್ಟಿ ವಿಷ್ಣುವರ್ಧನನು ಸೋಲುವಂತೆ ಮಾಡುತ್ತಾರೆ. ಸೋತ ರಾಜನು ಕರಾರಿನಂತೆ ವೈಷ್ಣವಧರ್ಮವನ್ನು ಸೇರುತ್ತಾನೆ. ಅಂದಿನ ಕಾಲದಲ್ಲಿ ಪಣಗಳನ್ನೊಡ್ಡಿ ಮತಾಂತರ ಮಾಡಿಸುವ ಘಟನೆಗಳು ನಡೆಯುತ್ತಿದ್ದವಾದರೂ ವಿಷ್ಣುವರ್ಧನನ ವಿಷಯದಲ್ಲಿ ಈ ಕತೆಯನ್ನು ನಂಬುವುದು ಕಷ್ಟ. ಅವನು ಮತಾಂತರವಾದದ್ದು ನಿಜವೇ ಆದರೂ ಅದಕ್ಕೆ ಬೇರೆಯದೇ ಆದ ಕಾರಣಗಳಿರಬೇಕು. ವಿಷ್ಣುವರ್ಧನನನ್ನು ಮತಾಂತರ ಮಾಡಲು ರಾಮಾನುಜರು ಮಾಡಿದ ಪ್ರಯತ್ಮವನ್ನಾದರೂ ಈ ಕತೆಯು ಹೇಳುತ್ತಿದ್ದಿರಬೇಕು. ತಮಿಳುನಾಡಿನಲ್ಲಿ ವೈಷ್ಣವರ ಬೆಳವಣಿಗೆಗೆ ಅನುಕೂಲಕರ ವಾತಾವರಣ ಇಲ್ಲದ ಆ ಸಮಯದಲ್ಲಿ ರಾಜರ ಆಶ್ರಯವೊಂದು ಅದಕ್ಕೆ ಅನಿವಾರ್ಯವೂ ಸಹ ಆಗಿತ್ತು. ಕತೆಯಲ್ಲಿನ ನಿಜವೆಷ್ಟೇ ಇರಲಿ, ಆಗಷ್ಟೇ ಪ್ರವರ್ಧಮಾನಕ್ಕೆ ಬರುತ್ತಿದ್ದ ವೈಷ್ಣವ ಮತವು ರಾಜನನ್ನು ಸೆಳೆದುಕೊಂಡು ಲಾಭಮಾಡಿಕೊಂಡಿದ್ದಂತೂ ನಿಜ.

ಆ ಕತೆಯು ಮುಂದುವರೆದು ಹೇಳುವಂತೆ ಅತನು ತನ್ನ ಹೊಂದಿಕೆಯಲ್ಲಿದ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿಗಳೆಲ್ಲರನ್ನೂ ವೀರವೈಷ್ಣವರನ್ನಾಗಿ ಮಾಡಿದನಂತೆ. ಕೆಲವರನ್ನು ಬಡಿದು

ಬಲತ್ಕಾರದಿಂದ ಮತಾಂತರ ಮಾಡಿಸುತ್ತಾನಂತೆ. ಈ ಕತೆಯನ್ನು ಬರೆದವನು ಜೈನಕವಿಯಾದ್ದರಿಂದ ವಾಸ್ತವಕ್ಕಿಂತ ಹೆಚ್ಚಿನ ವರ್ಣನೆಗಳು ಇರಬಹುದು. ಬರಿ ಜೈನ ಮಾತ್ರವಲ್ಲ, ಆಯಾ ಕೃತಿಗಳ ಕರ್ತೃಗಳ ಧರ್ಮಗಳೆಲ್ಲವೂ ಇದರಲ್ಲಿ ಭಾಗಿ. ಆದರೂ ರಾಜನೊಬ್ಬನ ಸರ್ವಾಧಿಕಾರ ಪ್ರವೃತ್ತಿಯು ಇವೆಲ್ಲವನ್ನೂ ಮಾಡಿಸಲು ಶಕ್ತವಾದುದು ಎಂಬುದನ್ನು ಮಾತ್ರ ನಾವು ಮರೆಯಬಾರದು. ಮುಂದುವರೆದಂತೆ ಅವನು ತೊಂಡನೂರಿನ 780, ಕಲಶವಾಡಿಯ 100, ಹೆಡತಲೆಯ 16 ಮುಂತಾಗಿ ಜೈನಬಸದಿಗಳನ್ನು ಆತ ಕೆಡಿಸುತ್ತಾನಂತೆ. ಶಿವಾಲಯಗಳಲ್ಲಿಯೂ ಸಹ ವಿಷ್ಣುವನ್ನು ಸ್ಥಾಪಿಸುತ್ತಾನಂತೆ. ತಿರುಪತಿಯಲ್ಲಿ ಅನೇಕರನ್ನು ಶ್ರೀವೈಷ್ಣವರನ್ನಾಗಿ ಮಾಡಿ, ಕಾಶಿಯಲ್ಲಿ ವಿಷ್ಣುಮೂರ್ತಿಯನ್ನು ಸ್ಥಾಪಿಸಿ, ಮಧ್ಯದೇಶದ ಜಿನಾಲಯವನ್ನು ಮರೆಸಿ ಅಲ್ಲಿ ಚಲುವರಾಯನನ್ನು ಸ್ಥಾಪಿಸಿ...... ಹೀಗೆ ಕತೆಯು ಮುಂದುವರೆಯುತ್ತದೆ. ಇತಿಹಾಸದಲ್ಲಿ ನಾವು ನೋಡುವ ವಿಷ್ಣುವರ್ಧನನು ಈ ರೀತಿಯಾಗಿ ಪರಮತದ್ವೇಷಿಯಾಗಿ ಕಂಡುಬರುವುದಿಲ್ಲ. ಆದರೂ ಅವನ ಸಮಕಾಲೀನದಲ್ಲಿ ಕರ್ನಾಟಕದಲ್ಲಿ ಜೈನರು ಹೀಗೆ ಇತರರಿಂದ ಹಾನಿಗೊಳಗಾಗುತ್ತಿದ್ದುದು ಇತಿಹಾಸದಲ್ಲಿ ದಾಖಲಾಗಿದೆ. ಆದರೂ ಈ ಕತೆಯ ಮೂಲಕ ನಾವು ಗ್ರಹಿಸಬೇಕಾದದ್ದು ಒಂದು ಧರ್ಮಕ್ಕೆ ರಾಜಾಶ್ರಯ ದೊರೆಯುವುದರಿಂದ ಉಂಟಾಗಬಹುದಾದ ಫಲಗಳು ಮತ್ತು ಅನ್ಯ ಮತಗಳಿಗೆ ಆಗಬಹುದಾದ ಅನಾನುಕೂಲಗಳು.

ಇದೇ ಕತೆಯಲ್ಲಿ ಇನ್ನೊಂದು ಮುಖ್ಯವಾದ ಅಂಶ ಬರುತ್ತದೆ. ವೀರಬಲ್ಲಾಳನು ಇಲ್ಲದಂತಹ ವೇಳೆಯಲ್ಲಿ ದೆಹಲಿಯ ಪಾದಶಾಹಿಯು ಆ ದೇಶದೊಳಗೆ ಇದ್ದಂತಹ ಜಿನಗೃಹ, ಶಿವಾಲಯ, ವಿಷ್ಣುವಿನಾಲಯ ಮುಂತಾದ ಸಕಲ ದೇವಾಲಯಗಳನ್ನು ಪಾಳುಮಾಡಿಸುತ್ತಾನೆ. ಇದು ಇತಿಹಾಸದಲ್ಲಿಯೂ ದಾಖಲಾಗಿದೆ. ಬಲ್ಲಾಳನು ಆಳುವ ವೇಳೆಯಲ್ಲಿ ದೆಹಲಿಯ ದಂಡನಾಯಕ ಮಲ್ಲಿಕಾಫರನು ದಕ್ಷಿಣಭಾರತದ ದಂಡಯಾತ್ರೆ ಮಾಡುತ್ತಾನೆ. ಈ ಸಮಯದಲ್ಲಿ ಹಲವಾರು ದೇವಾಲಯಗಳನ್ನು ಆತ ನಾಶ ಮಾಡುತ್ತಾನೆ. ಇಂತಹ ಘಟನೆಗಳು ಆಗಾಗ್ಗೆ ನಡೆಯುವಂತವಾಗಿದ್ದವು.

ಆಯಾ ಮತಗಳವರು ಜನರನ್ನು ತಮ್ಮತ್ತ ಸೆಳೆಯಲು ಹಲವಾರು ತಂತ್ರಗಳನ್ನು ಮಾಡುತ್ತಿದ್ದರು. ವಾದದ ಮೂಲಕ ಇತರರನ್ನು ಜಯಿಸುವುದು, ಪವಾಡಗಳ ಮೂಲಕ ಆಕರ್ಷಿಸುವುದು ಇವೆ ಮುಂತಾದುವು. ಈ ರೀತಿಯ ಘಟನೆಗಳು ಹಲವು ದಾಖಲಾಗಿವೆ. ಅದರಲ್ಲಿ ಒಂದು ಹಿಮಶೀತಲ ಮಹಾರಾಜನದು[26]. ಬಹುಶ ಇದು ಹತ್ತನೇ ಶತಮಾನಕ್ಕಿಂತ ಹಿಂದಿನದೇ ಇರಬೇಕು. ಇದು ನಡೆದದ್ದು ಬೌದ್ಧರಿಗೂ ಜೈನರಿಗೂ ನಡುವೆ. ಜೈನರ ಪರವಾಗಿ ಗುರು ಭಟ್ಟಾಕಳಂಕ ಮತ್ತು ಬೌದ್ಧರಿಂದ ಗುರು ಸುಗತಾಚಾರ್ಯ. ಈ ಇಬ್ಬರೂ ಹಿಮಶೀತಲನ ಆಸ್ಥಾನದಲ್ಲಿದ್ದವರು. ಈ ರಾಜ ಬುದ್ಧ ಮತಾನುಯಾಯಿದ್ದವನು. ಒಮ್ಮೆ ಮದಗಜವೊಂದು ರಾಜಬೀದಿಯಲ್ಲಿ ಆಕ್ರೋಶದಿಂದ

ಬರುತ್ತಿತ್ತು. ಕಂಡವರನ್ನೆಲ್ಲಾ ಕೊಲ್ಲುತ್ತಿತ್ತು. ಅದನ್ನು ನಿಲ್ಲಿಸಿದವರು ವಿಜಯಿಯೆಂದು , ಸೋತವರನ್ನು ಕಲ್ಲುಗಾಣಕ್ಕೆ ಹಾಕುವುದೆಂದು ಜೈನ–ಬೌದ್ಧರಲ್ಲಿ ಪಣವಾಯಿತು. ಅದು ಬರುವ ದಾರಿಯಲ್ಲಿ ಉಭಯರ ಶಾಸ್ತ್ರಗಳನ್ನು ಇಡಲಾಯಿತು. ಆಗ ಅದು ಬೌದ್ಧಾಗಮ ಪುಸ್ತಕವನ್ನು ಎಡಗಾಲಿನಿಂದ ಪುಡಿಮಾಡಿ, ಜಿನಸಿದ್ಧಾಂತವನೆತ್ತಿ ಮಸ್ತಕದಲ್ಲಿ ಇಟ್ಟುಕೊಂಡು ಊರೆಲ್ಲಾ ಪ್ರದಕ್ಷಿಣೆ ಹಾಕಿದಂತೆ. ಇದನ್ನು ಕಂಡ ಮಹಾರಾಜನು ಸುಗತಾಚಾರ್ಯರನ್ನೂ ಅನುಯಾಯಿಗಳನ್ನೂ ಕಲ್ಲುಗಾಣದಲ್ಲಿಡಲು ಆಜ್ಞಾಪಿಸುತ್ತಾನೆ. ಜೀವಹಿಂಸೆ ಬೇಡವೆಂದು ಭಟ್ಟಾಕಳಂಕರು ಇದನ್ನು ತಡೆಯುತ್ತಾರೆ. ಆ ನಂತರ ಹಿಮಶೀತಲ ಮಹಾರಾಜನು ಜೈನ ಧರ್ಮಕ್ಕೆ ಮತಾಂತರ ಹೊಂದುತ್ತಾನೆ.

ಇಲ್ಲಿ ಜೈನರು ಸುಗತಾಚಾರ್ಯರನ್ನು ರಾಜ್ಯದಿಂದ ಹೊರಹಾಕಲು ಯಶಸ್ವಿಯಾಗುತ್ತಾರಾದರೂ ನಂತರ ಇಲ್ಲೊಂದು ಘಟನೆ ನಡೆಯುತ್ತದೆ. ಹಾಗೆ ಸೋತ ಬೌದ್ಧರು ತಮ್ಮ ಸರ್ವಸ್ವವನ್ನು ಅರಸನಿಗೊಪ್ಪಿಸಿ ಸಿಂಗಳ, ಹಂಸ ಮೊದಲಾದ ದ್ವೀಪಗಳ ಕಡೆ ವಲಸೆ ಹೋಗುತ್ತಾರೆ. ಈ ರೀತಿಯಾಗಿ ಅವರು ಕರ್ನಾಟಕ ಮುಂತಾದ ಕಡೆ ಹೇಳಹೆಸರಿಲ್ಲರಾದರು ಎಂದು ಕವಿ ಉಲ್ಲೇಖಿಸುತ್ತಾನೆ. ನಿಜವಾದ ಇತಿಹಾಸದಲ್ಲಿ ಬೌದ್ಧರು ಕರ್ನಾಟಕದಿಂದ ಹೇಗೆ ಅವನತಿಯಾದರು ಎಂಬುದನ್ನು ಇಂದಿಗೂ ಖಚಿತವಾಗಿ ಅರಿಯಲು ಸಾಧ್ಯವಾಗಿಲ್ಲ. ಈ ಕತೆಯು ಇತಿಹಾಸವಲ್ಲದಿದ್ದರೂ ಇದರಿಂದ ಕೆಲವು ಸುಳಿವುಗಳನ್ನಾದರೂ ನಾವು ಕಾಣಬಹುದು. ಈ ಕುರಿತ ಸಿ.ವೀರಣ್ಣ ಅವರ ಒಂದು ಮಾತನ್ನು ಇಲ್ಲಿ ನೋಡಬಹುದು–"ಶಂಕರಾಚಾರ್ಯರ ವೈದಿಕ ಪುನರುತ್ಥಾನ ಚಳುವಳಿ ಉತ್ತರ ಮತ್ತು ದಕ್ಷಿಣಭಾರತದಲ್ಲಿ ಬೌದ್ಧಧರ್ಮದ ಮೂಲೋತ್ಪಾಟನಕ್ಕೆ ಕಾರಣವಾಯಿತು ಎಂಬ ಅಭಿಪ್ರಾಯವಿದ್ದರೂ, ಕರ್ನಾಟಕದಲ್ಲಿ ಅದರ ನಾಶದ ಕಾರಣ ಇನ್ನೂ ಅಜ್ಞಾತವಾಗಿಯೇ ಇದೆ"[59]. ಬಹುಶ ಬೌದ್ಧರ ಅವನತಿಗೆ ಒಂದು ಕಾರಣವಲ್ಲದೇ ಈ ಕತೆ ಹೇಳುತ್ತಿರುವ ಇಂತಹದ್ದೇ ಹಲವು ಕಾರಣಗಳು ಇರಬೇಕು. ಈ ವಿಷಯದ ಕುರಿತ ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.

ಇಂತಹ ಸಮೂಹ ವಲಸೆಗಳು ಆ ಕಾಲದಲ್ಲಿ ನಡೆಯುತ್ತಿದ್ದ ಸಾಮಾನ್ಯ ಘಟನೆಗಳಾಗಿದ್ದವೆನೋ. ಇದರಂತೆಯೇ ಸಮೂಹ ಮತಾಂತರಗಳೂ ಸಹ ಆ ಕಾಲದಲ್ಲಿ ನಡೆಯುತ್ತಿದ್ದವು. ಮಧುರೆಯ ಅರಸನ ಕತೆಯನ್ನು ಇದಕ್ಕೆ ಪೂರಕವಾಗಿ ನೋಡಬಹುದು[27]. ದಕ್ಷಿಣ ಮಧುರೆಯಲ್ಲಿ ವೀರಪಾಂಡ್ಯನ ಮಗನು ಆಳುತ್ತಿದ್ದನು. ಅವನು ಜಿನಧರ್ಮ ಪಾಲಕನಾಗಿದ್ದ. ಕಾಲಕ್ರಮೇಣ ಅಲ್ಲಿ ಶೈವ ಧರ್ಮವು ಪ್ರಸರಿಸಿ ಬಲಿಷ್ಠವಾಯಿತು. ಅಲ್ಲಿಯ ಶೈವ ಆಂಡಿಗಳು ಪ್ರಬಲರಾದರು. ಇವರೆಲ್ಲರೂ ಸೇರಿ ರಾಜನಿಗೆ ಬೋದಿಸಿ, ಲಿಂಗವನ್ನು ಕಟ್ಟಿಸಿ, ಶೈವನನ್ನಾಗಿ ಮಾಡಿದರು. ಆ ನಂತರ ಶೈವದಲ್ಲಿ ದೃಢಚಿತ್ತನಾದ ಈತನು ತನ್ನ ಪುರಜನ, ಪರಿಜನ, ತಾನಾಳುವ ಚಾತುರ್ವರ್ಣ್ಯಗಳೆಲ್ಲವಕ್ಕೂ ಲಿಂಗವನ್ನು ಕಟ್ಟಿಸಿ ಅವರನ್ನು ಬಲತ್ಕಾರದಿಂದ ಶೈವರನ್ನಾಗಿ ಮಾಡುತ್ತಾನೆ.

ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ರಾಜನು ಜಿನಧರ್ಮವನ್ನು ಪಾಲಿಸುತ್ತಿದ್ದ ಸಮಯದಲ್ಲಿ ತನ್ನ ಸಮಯವನ್ನು ಪ್ರಜೆಗಳ ಮೇಲೆ ಹೇರಿರಲಿಲ್ಲ. ಬದಲಾಗಿ ಅವುಗಳಿಗೆ ಉತ್ತಮ ಪರಿಸರವನ್ನೇ ಕೊಟ್ಟಿದ್ದನು. ಶೈವರ ಸಂಖ್ಯಾ ವೃದ್ಧಿಯಲ್ಲಿ ಇದಕ್ಕೆ ಸಾಕ್ಷ್ಯವಿದೆ. ಅದೇ ರಾಜನು ಶೈವನಾಗಿ ಬದಲಾದ ಕೂಡಲೇ ತನ್ನ ರಾಜ್ಯವನ್ನೆಲ್ಲಾ ತನ್ನ ಮತಕ್ಕೆ ಒತ್ತಾಯದಿಂದ ಮತಾಂತರಿಸಿಬಿಡುತ್ತಾನೆ. ಇದನ್ನು ಆಂಡಿಗಳು ಮಾಡಿದ ಕೃತ್ರಿಮವೆಂದು ಕವಿ ವರ್ಣಿಸುತ್ತಾನೆ. ಇದು ಬಹುಶ ಅಷ್ಟೇ ಆಗಿರಲಾರದೇನೋ. ಇದರಿಂದ ಶೈವರಿಗಂತೂ ಬಹುದೊಡ್ಡ ಲಾಭವಾಯಿತು. ರಾಜನನ್ನು ವಶಮಾಡಿಕೊಳ್ಳುವುದರಿಂದ ಒಂದು ಮತಕ್ಕಾಗುವ ಬಹುದೊಡ್ಡ ಲಾಭವೆಂದರೆ ಇದುವೆ. ಈ ಘಟನೆಯ ನಂತರ ಮಹತ್ವದ ಬೆಳವಣಿಗೆಯೊಂದರಲ್ಲಿ ಹೊಯ್ಸಳ ಗುರುಗಳ ಪ್ರಯತ್ನದಿಂದಾಗಿ ಆ ರಾಜನು ಲಿಂಗವನ್ನು ಕಳೆದು ಸಮ್ಯಗ್ದರ್ಶನವನ್ನು ಕೈಕೊಳ್ಳುತ್ತಾನೆ. ಅಂದರೆ ಜೈನ ಧರ್ಮವನ್ನು ಹಿಡಿಯುತ್ತಾನೆ. ಆ ಹೊಯ್ಸಳ ಗುರುಗಳು ಯಾರೆಂಬುದು ಕತೆಯಲ್ಲಿ ಉಲ್ಲೇಖವಿಲ್ಲ. ಮತ್ತು ಆ ರಾಜನು ಈ ಘಟನೆಯ ನಂತರ ತನ್ನ ಪ್ರಜೆಗಳಿಗೆ ಏನೆಂದು ಆದೇಶಿಸಿದನು ಎಂಬುದೂ ಸಹ ಉಲ್ಲೇಖವಿಲ್ಲ.

ಮತ್ತೊಂದು ಪ್ರಮುಖ ವಿಷಯವನ್ನು ಈ ಘಟನೆಯಲ್ಲಿ ಗುರುತಿಸಬಹುದು. ಜೈನನಾಗಿದ್ದ ರಾಜನು ಶೈವವನ್ನು ಹಿಡಿಯುತ್ತಾನೆ. ಮತ್ತೆ ನಂತರದಲ್ಲಿ ಜಿನಕ್ಕೆ ವಾಪಾಸ್ಸಾಗುತ್ತಾನೆ. ಇದನ್ನು ಮರುಮತಾಂತರವೆಂದು ಕರೆಯಲಾಗುತ್ತದೆ. ಇಂತಹ ಹಲವು ಘಟನೆಗಳು ಆ ಕಾಲದಲ್ಲಿ ಸಾಮಾನ್ಯವಾಗಿದ್ದವು. ಒಬ್ಬ ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಹಲವು ಧರ್ಮಗಳಿಂದ ದಾಟುತ್ತಿದ್ದ. ಈಗಲೂ ಸಹ ನಾವಿದನ್ನು ಕಾಣಬಹುದು. 'ಘರ್ ವಾಪ್ಸಿ' ಎಂಬ ಹೆಸರಲ್ಲಿ ಧರ್ಮವೊಂದು ಅನ್ಯ ಧರ್ಮೀಯರನ್ನು , ಅವರು ಈ ಮುಂಚೆ ನನ್ನ ಧರ್ಮದವರು ಎಂದು ಮತಾಂತರಿಸುವುದನ್ನು ಕಾಣುತ್ತೇವೆ. ಇಂತಹ ಮತಾಂತರಗಳನ್ನು ಕುರಿತು ಮುಂದೆ ವಿವರವಾಗಿ ಹೇಳಲಾಗಿದೆ.

ಚಿದಾನಂದಮೂರ್ತಿಯವರು ತಮ್ಮ ಗ್ರಂಥದಲ್ಲಿ ಒಂದು ಕಡೆ ಪ್ರಸ್ತಾಪಿಸುತ್ತಾರೆ[28]. ಹೆಮ್ಮಾಡಿ ಎನ್ನುವ ಅರಸನನ್ನು ಬಾಸನೂರು140 ರ ಶಾಸನವೊಂದು ಮೊದಲು **'ಪದ್ಮಾವತಿಲಬ್ಧವರಪ್ರಸಾದಂ'** ಎಂದು ಕರೆಯುತ್ತದೆ. ಆ ನಂತರದ ಶಾಸನಗಳಲ್ಲಿ **'ಮಾಹೇಶ್ವರ ದೀಕ್ಷೆಯಂ ಕೊಂಡು'** ತನ್ನ ಗುರು ತ್ರಿಭುವನಪಂಡಿತರ ಕಾಲು ತೊಳೆದುದನ್ನು ಹೇಳುತ್ತದೆ. ಈ ಹೆಮ್ಮಡಿಯರಸನು ಭೂಲೋಕಮಲ್ಲನ ಮಹಾಮಾಂಡಳೇಶ್ವರನು ಇರಬಹುದು. ಇವನ ಕುರಿತಾದ ಶಾಸನವೊಂದು ಬೀದರ್‌ನಲ್ಲಿದೆ[29]. ಹೀಗೆ ಇವನು ಮೊದಲು ಜೈನನಿದ್ದವನು ನಂತರದಲ್ಲಿ ಶೈವನಾಗುತ್ತಾನೆ. ಇದೇ ರೀತಿಯಾಗಿ ಇನ್ನೊಬ್ಬ ಅರಸನೂ ಸಹ ಮತಾಂತರವಾದುದನ್ನು ಬೇರೆ ಶಾಸನಗಳಲ್ಲಿ ನೋಡಬಹುದು. ಗೊಲ್ಲಾಚಾರ್ಯನೆಂಬ ಜೈನಮುನಿಯ ಬಗ್ಗೆ ಶ್ರವಣಬೆಳಗೊಳದ ಶಾ.ಸಂ.71,156,173 ರಲ್ಲಿ ಮಾಹಿತಿಯಿದೆ[30]. ಅಲ್ಲದೆ ಕೊಪ್ಪಳ

ಜಿಲ್ಲೆಯ ಸಂಖ್ಯೆ 76ರ ಶಾಸನವೂ ಈತನನ್ನೂ ಈತನ ಶಿಷ್ಯನನ್ನು ಹೇಳುತ್ತದೆ[31]. ಈತನು ಚಂಡಿಲ ವಂಶದ ಗೊಲ್ಲರಾಜ. ಐಹಿಕ ಜೀವನದಲ್ಲಿ ಬೇಸರಹೊಂದಿ ಜಿನಧೀಕ್ಷೆಯನ್ನು ಸ್ವೀಕರಿಸುವುದಷ್ಟೇ ಅಲ್ಲದೆ, ಆಚಾರ್ಯ ಪದವಿಗೂ ಪಾತ್ರನಾಗುತ್ತಾನೆ.

ಭೀಮಕವಿಯ ಬಸವಪುರಾಣದಲ್ಲಿ ಮತ್ತೊಂದು ಉಲ್ಲೇಖ ಬರುತ್ತದೆ[32]. "

**"ಶ್ರಾವಕರನಪಹರಿಸಿ ಸುಗ್ಗಲ**

**ದೇವಿಯರ ಗುರು ದಾಸಿಮಯ್ಯನು**

**ಶೈವನಂ ಮಾಡಿನೊಲಿದು ದೇಸಿಂಗರಾಯನನು"**

ಎಂದು ಅದರಲ್ಲಿ ಬರುತ್ತದೆ. ಈ ದೇಸಿಂಗನೆಂದರೆ ಜಯಸಿಂಹ. ಬಹುಶ ಈತ ಚಾಲುಕ್ಯ ಜಯಸಿಂಹ. ಜೈನನಿದ್ದ ಇವನನ್ನು ದಾಸಿಮಯ್ಯರು ತಮ್ಮ ಪ್ರಭಾವದಿಂದ ಶೈವನನ್ನಾಗಿ ಮಾಡುತ್ತಾರೆ. ಆ ಸುಗ್ಗಲದೇವಿಯೂ ಸಹ ಮೊದಲು ಜೈನಳಿದ್ದವಳೇ. ಹೀಗೆ ಮತಾಂತರಗೊಂಡವರು ಅನೇಕ ಬಾರಿ ತಮ್ಮ ಪೂರ್ವಸಮಯಗಳಿಗೆ ಹಿಂದಿರುಗುತ್ತಿದ್ದುದೂ ಉಂಟು. ಈ ಹಿಂದೆ ಹೇಳಿದ ಮದುರೆಯ ಅರಸನ ಕತೆ ಒಂದಾದರೆ ಅಂತವು ಇನ್ನೂ ಹಲವಿವೆ. ಬ್ರಹ್ಮಶಿವನದನ್ನೂ ಈ ಹಿಂದೆ ಮತಾಂತರದ ವಿಷಯದಲ್ಲಿ ಹೇಳಲಾಗಿದೆ. ಅವನೂ ಸಹ ಮರುಮತಾಂತರದವನು. ಆತನು ಮೊದಲು ಜಿನನಾಗಿದ್ದ. ನಂತರ ಶೈವನಾದ.ಆ ನಂತರ ಮತ್ತೆ ಜಿನಕ್ಕೆ ಹಿಂದಿರುಗಿದ. ವಿಜಯನಗರ ಆಳ್ವಿಕೆಯ ಸಮಯದಲ್ಲಿ **"ಕಳಲೆಯ ಅರಸನೋರ್ವ ಜಿನಮತದಿಂದ ವೈಷ್ಣವನಾಗಿಯೂ, ವೈಷ್ಣವದಿಂದ ಶೈವನಾಗಿಯೂ ಬದಲಾದ ಪ್ರಸಂಗವೊಂದಿದೆ[33]**. ಇದು ಮರುಮತಾಂತರದ ಹೆಸರಿನಲ್ಲಿ ಬಾರದೆನೋ. ಕಾರಣ ಅವನು ಜೈನದಿಂದ ವೈಷ್ಣವಕ್ಕೆ ಮತಾಂತರವಾದವನಾದರೂ ಅವನು ಮತ್ತೆ ಮತಾಂತರವಾಗುವುದು ಜೈನಕ್ಕಲ್ಲ. ಬದಲಾಗಿ ಶೈವಕ್ಕೆ. ಇದನ್ನು ಅನುಮತಾಂತರ ಎಂದು ಕರೆಯಬಹುದು.

ಇಂತಹ ಮತಾಂತರಗಳನ್ನು ಇಂದಿನ ಹಿನ್ನೆಲೆಯಲ್ಲಿ ನೋಡಿದಾಗ ಅದು ನಮಗೆ ಪೂರ್ಣವಾಗಿ ಅರ್ಥವಾಗಲಾರದು. ಆಗ ಪೂರ್ಣವಾಗಿ ಹೊರಾಕಾರಗಳಿಂದ ಕೂಡಿದ ಮತಗಳಿದ್ದವು ಎನ್ನುವುದಕ್ಕಿಂತ ಹೆಚ್ಚಾಗಿ ಮತೀಯ ಆಚರಣೆಗಳಿದ್ದವು ಎನ್ನುವುದು ಸೂಕ್ತ. ಕೆಲವರು ಪೂರ್ಣವಾಗಿ ಒಂದು ಮತದ ತತ್ವಗಳನ್ನು ಪಾಲಿಸುತ್ತಿದ್ದರು. ಕೆಲವರು ತಮಗೆ ಅನುಕೂಲವೆನಿಸಿದ

ಆಚರಣೆಗಳೆಲ್ಲವನ್ನೂ ಪಾಲಿಸುತ್ತಿದ್ದರು. ಕೆಲವೊಮ್ಮೆ ನಾಮಮಾತ್ರಕ್ಕೆ ಒಂದು ಮತಕ್ಕೆ ಅನುಯಾಯಿಗಳಾಗಿ ಮತ್ತೊಂದು ಮತಕ್ಕೆ ನಿಷ್ಠೆ ತೋರುವವರೂ ಇದ್ದರು. ಕೆಲವರಿಗೆ ಮತ ಮುಖ್ಯವಾದರೆ ಕೆಲವರಿಗೆ ಆಚರಣೆಗಳು ಮುಖ್ಯವಾಗಿರುತ್ತಿದ್ದವು. ಇಂತಹವರನ್ನು ಮತ್ತು ಇಂತಹವುಗಳನ್ನು ಧರ್ಮಾಮೃತ ಕಾವ್ಯವು ವಿವರವಾಗಿ ಹೇಳುತ್ತದೆ. ಅದು ತನ್ನ(ಜೈನ) ಧರ್ಮದ ಅನುಯಾಯಿಗಳಿಗೆ ಅನುಸರಿಸಿ ಹೇಳುವಂತೆ, ಅಂತಹವರನ್ನು **ಅಳಿಶ್ರಾವಕ, ಸಂಶಯಶ್ರಾವಕ, ವೃಥಾ ಶ್ರಾವಕ, ಪೊಸ ಶ್ರಾವಕ** ಇನ್ನು ಮುಂತಾಗಿ ಕರೆಯುತ್ತದೆ. ಹೆಸರುಗಳೇ ಹೇಳುವಂತೆ ನಾವು ಅವರನ್ನು ಅರ್ಥ ಮಾಡಿಕೊಳ್ಳಬಹುದು. ಈ ಪಟ್ಟಿಯಲ್ಲಿ ನಿಷ್ಠ ಅನುಯಾಯಿಗಳ ಹೆಸರು ಇಲ್ಲ. ಸಮಯಪರೀಕ್ಷೆಯು ಇವರನ್ನು **"ಕನಕಾಚಲ ಪ್ರಳಯಗಾಳಿಯಿಂದ ಚಲಿಸದಂತೆ, ಜೈನಮತೀಯ ಕುಮತಗಳಿಗೆ ವಶನಾಗುವುದಿಲ್ಲ[34]"** ಎಂದಿದೆ.

ಆ ಸಮಯದಲ್ಲಿ ಅಂತಹ ಆಚರಣೆಗಳು ಅಧಿಕವಿರುವಂತೆ ತೋರುತ್ತದೆ. ಅಂತಹವರನ್ನು ಸಮಯಪರೀಕ್ಷೆಯು ವಿಶೇಷವಾಗಿ ಗುರುತಿಸುತ್ತದೆ. 'ದೇಗುಲದಲ್ಲಿ ಮಹೇಶ್ವರನನ್ನು, ಬಸದಿಯಲ್ಲಿ ಜೈನನನ್ನು ಪೂಜಿಸುವವನನ್ನು ಕಾಗೆ' ಎನ್ನುತ್ತದೆ. ಮುಂದುವರೆದು **'ಒಂದೆಡೆ ಜಿನಬಿಂಬ, ಮತ್ತೊಂದೆಡೆ ವಿಷ್ಣುವನ್ನು ಪೂಜಿಸುವವನು ಜೈನನಲ್ಲ'** ಎಂದೂ ಸಹ ಘೋಷಿಸುತ್ತದೆ. ಇದನ್ನು ಕೇವಲ ಇಬ್ಬಗೆಯ ನಿಷ್ಠೆ ಎಂದು ಕರೆದು ಸುಮ್ಮನಾಗಲಾರದು. ಇದಕ್ಕಿರುವ ಕಾರಣಗಳನ್ನು ನೋಡಬೇಕಾಗುತ್ತದೆ. ಯಾವುದಾದರೂ ಒತ್ತಡಕ್ಕೆ ಸಿಲಿಕಿಯೋ, ಆಮಿಷಕ್ಕೆ ಸಿಲಿಕಿಯೋ ಇಂತಹವುಗಳು ನಡೆಯುತ್ತಿರುತ್ತವೆ. ಈ ವಿವಿಧ ನಿಷ್ಠೆ ವ್ಯಕ್ತಿಗತ ಮಾತ್ರವಲ್ಲದೆ ಕುಟುಂಬ ಮಟ್ಟದಲ್ಲಿಯೂ ಇತ್ತು. ಅದೇ ಸಮಯಪರೀಕ್ಷೆಯು ಇಂತಹ ಕುಟುಂಬಗಳನ್ನು ಕುರಿತು **'ಹೆಂಡತಿ ಮಾಹೇಶ್ವರಿ, ಗಂಡ ಜೈನ, ಮಕ್ಕಳು ಮಾರ್ತಾಂಡನಿಗೆ ಭಕ್ತರು, ಇವರು ಜೈನರಲ್ಲ ಎನ್ನುತ್ತಾನೆ'**. ಇದನ್ನು ನೋಡಿದರೆ ಕುಟುಂಬ ಸದಸ್ಯರಿಗೆ ಮತದ ಆಯ್ಕೆಯ ಸ್ವಾತಂತ್ರ್ಯವಿರುವಂತೆ ಕಾಣುತ್ತದೆ. ಸ್ತ್ರೀ ಹಿನ್ನೆಲೆಯಲ್ಲಿ ಇದನ್ನು ಇನ್ನು ಹೆಚ್ಚಾಗಿ ಕಾಣಬಹುದು. ನಮ್ಮಲ್ಲಿ ಈಗ ಸಾಮಾನ್ಯಾವಾಗಿ ಪ್ರಚಲಿತವಿರುವಂತೆ ಗಂಡನ ಧರ್ಮವೇ ಹೆಂಡತಿಯದಿರಬೇಕು ಎನ್ನುವಂತದ್ದು ಆ ಸಮಯದಲ್ಲಿ ಪ್ರಮಾಣದಲ್ಲಿ ಕಮ್ಮಿಯಿರಬೇಕು ಅನ್ನಿಸುತ್ತದೆ. ಹಲವು ಒತ್ತಡಗಳು ಇದ್ಯಾಗೂ ಅವನ್ನು ಮೀರಿ ನಿಲ್ಲುವಂತ ಅವಕಾಶಗಳು ಆ ಮಹಿಳೆಯರಿಗೆ ಸಿಗುತ್ತಿದ್ದಿರಬೇಕು. ಇಲ್ಲಿ ಮೂರನೆಯ ಮಾತಾದ **'ಮಕ್ಕಳು ಮಾರ್ತಾಂಡನಿಗೆ ಭಕ್ತರು'** ಎನ್ನುವಲ್ಲಿ ನಾವು ಈ ಹಿಂದೆ ಚರ್ಚಿಸಿದ ಮಕ್ಕಳಿಗೆ ತಂದೆತಾಯಿಯರ ಧರ್ಮದ ಹೊರತಾಗಿಯೂ ಆಯ್ಕೆಯ ಸ್ವಾಂತ್ರ್ಯವಿತ್ತು ಎನ್ನುವುದನ್ನು ಪುಷ್ಠೀಕರಿಸುತ್ತದೆ. ಇದರ ಕುರಿತಂತೆ ಹೆಚ್ಚಿನ ಸೂಚನೆಗಳು ಕೃತಿಯಲ್ಲಿ ಅಷ್ಟಾಗಿ ದೊರೆಯುವುದಿಲ್ಲ.

ಬಸವಣ್ಣನ ಒಂದು ವಚನವು ಸಹ ಇಂತದ್ದೇ ಪರಿಸ್ತಿತಿಯನ್ನು ನಮ್ಮ ಮುಂದಿಡುತ್ತದೆ.

**"ಗಂಡ ಶಿವಲಿಂಗದೇವರ ಭಕ್ತ**

**ಹೆಂಡತಿ ಮಾರಿಮಸಣೆಯ ಭಕ್ತೆ**

**ಗಂಡ ಕೊಂಬುದು ಪಾದೋದಕ ಪ್ರಸಾದ**

**ಹೆಂಡತಿ ಕೊಂಬುದು ಸೌರೆಮಾಂಸ"**[35]

ಇಲ್ಲಿ ಒಂದು ವಿಷಯವನ್ನು ಗಮನಿಸಬಹುದು. ಬಹುಶ ಅದು ಕಾಕತಾಳೀಯವೂ ಇರಬಹುದು. ಈ ಮೇಲಿನ ಎರಡೂ ಉದಾಹರಣೆಗಳಲ್ಲಿಯೂ ಹೇಳುವವರು ತಮ್ಮ ಧರ್ಮವನ್ನು ಆರೋಪಿಸಿಕೊಂಡಿದ್ದಾರೆ. 'ಗಂಡ ಜೈನನೆಂದು' ಕರೆಯುವಲ್ಲಿ ಬ್ರಹ್ಮಶಿವನೂ, 'ಗಂಡ ಶಿವಲಿಂಗದೇವರ ಭಕ್ತ' ಎನ್ನುವಲ್ಲಿ ಬಸವಣ್ಣನೂ ಹೆಂಡತಿಯ ಸ್ಥಾನವನ್ನು ಪ್ರತಿವಾದಿಯ ಇಲ್ಲವೇ ಮತ್ತೊಂದು ನಂತರದ ಸ್ಥಾನದಲ್ಲಿ ಇರಿಸುತ್ತಾರೆ. ಇದು ಆ ಕಾಲದ ಪುರುಷತನ ಪ್ರಭಾವವನ್ನು ಸೂಚಿಸುತ್ತದೆ.

ಇದಕ್ಕೆ ಪೂರಕವಾಗಿ ಬ್ರಹ್ಮಶಿವನ ಇನ್ನೊಂದು ಮಾತನ್ನು ಪೂರಕವಾಗಿ ನೋಡಬಹುದು. ಆತ ಹೇಳುತ್ತಾನೆ **'ಗಂಡ ಹೇಳಿದಂತೆ ಅರ್ಹತ್ಪೂಜೆ ಮಾಡುವ ಹೆಂಡತಿಯನ್ನು ಪಡೆದಾತ ಸಂಪತ್ತು ಪಡೆದಂತೆ'**. ಇದರ ಸಾಮಾನ್ಯ ವಿವರಣೆಯೂ ಸಹ ನಮ್ಮನ್ನು ಆ ಕಾಲದ ಪುರುಷಪರ ಸಮಾಜದೆಡೆ ಕೊಂಡೊಯ್ಯುತ್ತದೆ. ಇದಕ್ಕೆ ವಚನಕಾರರ ಮತ್ತೊಂದು ಮಾತನ್ನು ಸೇರಿಸಬಹುದು. **'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'** ಎನ್ನುವಲ್ಲಿಯೂ ಇದರ ಛಾಯೆಯನ್ನು ಕಾಣಬಹುದು.

ಈ ರೀತಿಯಾಗಿ ಒಂದೇ ಮನೆಯಲ್ಲಿ ಬೇರೆ ಬೇರೆ ಮತಗಳ ಪರಿಸರವಿದ್ದಾಗ, ಕೆಲವೊಮ್ಮೆ ವೈಮನಸ್ಸು, ಅಶಾಂತಿ, ಅಸಹನೆ ಇವೆ ಮುಂತಾದುವಕ್ಕೆ ಕಾರಣವಾಗುತ್ತಿರಬಹುದು. ಕಾರಣ ಪ್ರತಿಯೊಬ್ಬರಿಗೂ ತಮ್ಮ ತಮ್ಮ ಮತದ ಮೇಲೆ ವಿಶೇಷ ಗೌರವ ಇದ್ದೇ ಇರುತ್ತದೆ. ಈ ಕಾರಣಕ್ಕೆ ಗಂಡ ಹೆಂಡತಿಯನ್ನು, ಹೆಂಡತಿ ಗಂಡನನ್ನು ತಮ್ಮ ತಮ್ಮ ಮತಕ್ಕೆ ಸೆಳೆಯುವ ಪ್ರಯತ್ನವನ್ನು ಮಾಡುತ್ತಿದ್ದರು. ಇದಕ್ಕೆ ಹಲವು ಸಾಕ್ಷಿಗಳು ನಮಗೆ ಲಭ್ಯವಾಗುತ್ತವೆ. ಪಾಂಡ್ಯ ಅರಸನ ರಾಣಿ ಪಾಂಡ್ಯಮಹಾದೇವಿಯು ಒಬ್ಬ ಶಿವಭಕ್ತೆಯಾಗಿದ್ದಳು. ಈಕೆಯು ತನ್ನ ಗುರುಗಳಾದ ಜ್ಞಾನಮುನೀಂದ್ರರನ್ನು ಕರೆಸಿ, ಜೈನನಾದ ತನ್ನ ಗಂಡನಿಗೆ ಉಪದೇಶವನ್ನು ಮಾಡಿಸುತ್ತಾಳೆ. ಇದರ ಪರಿಣಾಮವಾಗಿ ಆತನು ಶಿವಭಕ್ತನಾಗಿ ಬದಲಾಗುತ್ತಾನೆ[36]. ಇಲ್ಲಿ ಹೆಂಡತಿಯು ಗಂಡನನ್ನು ತನ್ನ ಧರ್ಮಕ್ಕೆ ಕರೆಸಿಕೊಂಡುದನ್ನು ಕಾಣಬಹುದು. ಅಂತೆಯೆ ಇನ್ನೊಂದು ಸಂಧರ್ಭದಲ್ಲಿ ಗೋವಿಂದದೇವ ಮತ್ತು ಉಮ್ಮವ್ವೆಯರ ಪ್ರಸಂಗವನ್ನು ನೋಡಬಹುದು(ಇದಕ್ಕೆ ಟಿಪ್ಪಣಿ ಹಾಕಬೇಕು). ವೈಷ್ಣವ ವಿಪ್ರನಾದ ಗೋವಿಂದದೇವನು ಕಾಶಿಗೆ ಹೊರಟಿರುತ್ತಾನೆ. ದಾರಿಯಲ್ಲಿ ಕಾರಣಾಂತರಗಳಿಂದ ನವಿಲೆ ಊರಿನ ಜಡೆಶಂಕರ ದೇವಾಲಯದಲ್ಲಿ

ತಂಗುತ್ತಾನೆ. ಅಲ್ಲಿ ಆತನ ಮನಸ್ಸು ಬದಲಾಯಿಸಲ್ಪಟ್ಟು ಅಲ್ಲಿಯೇ ಸಾಧನೆಗೆಯ್ದು ಶಿವದೀಕ್ಷೆಯನ್ನು ಪಡೆಯುತ್ತಾನೆ. ಈತನು ತನ್ನ ಹೆಂಡತಿಯ ಮೇಲೂ ಪ್ರಭಾವವನ್ನು ಬೀರಿ, ಆಕೆಯು ಪತಿಯನ್ನು ನೆರಳಿನಂತೆ ಹಿಂಬಾಲಿಸುತ್ತಾಳೆ. ಈ ಕಾರಣಕ್ಕೆ ಕವಿ ಈಕೆಯನ್ನು ಉತ್ತಮಗೃಹಿಣಿ ಎಂದು ಕರೆಯುತ್ತಾನೆ. ನಂತರ ಅವರಿಬ್ಬರು ತಮ್ಮ ಹೆಸರನ್ನು ಶಂಕರ ದಾಸಿಮಯ್ಯ– ಶಿವದಾಸಿ ಎಂದು ಬದಲಾಯಿಸಿಕೊಳ್ಳುತ್ತಾರೆ. ಹಿಂದೆಯೆ ಬ್ರಹ್ಮಶಿವನು ಹೇಳಿದ ವಾಕ್ಯವನ್ನು ಗಮನಿಸಬಹುದು **'ಗಂಡ ಹೇಳಿದಂತೆ ಅರ್ಹತ್ಪೂಜೆ ಮಾಡುವ ಹೆಂಡತಿಯನ್ನು ಪಡೆದಾತ ಸಂಪತ್ತು ಪಡೆದಂತೆ'** ಎಂಬುದು. ಅಲ್ಲಿ ಆತ ಜೈನಪರವಾಗಿ ಹೇಳಿದರೆ ಇಲ್ಲಿಯ ಕವಿಯು ಶೈವ ಪರವಾಗಿ ಇಷ್ಟೇ ವ್ಯತ್ಯಾಸ.

ಧರ್ಮಾಮೃತದಲ್ಲಿ ಒಂದು ಕತೆ ಬರುತ್ತದೆ[37]. ಅಂತರ್ಜಾತಿ ಕತೆಯನ್ನು ಒಳಗೊಂಡಿರುವ ಇದರಲ್ಲಿ, ಪರಸ್ಪರರನ್ನು ಪರಸ್ಪರರ ಸಮಯಗಳಿಗೆ ಸೆಳೆಯುವ ಆಶಯವನ್ನು ನೋಡಬಹುದು. ವೆಂಗಿಮಂಡಳದ ಪ್ರತಿಪಾಲಪುರದ ರಾಜ ಧನದ. ಈತ ಕಮಲ ಶ್ರೀ ಎನ್ನುವಾಕೆಯಲ್ಲಿ ಮೋಹಗೊಂಡು ಮದುವೆಯಾಗುವಂತೆ ಕೇಳಿಕೊಳ್ಳುತ್ತಾನೆ. ಈಕೆ ಸುಗತ ಸಮಯದವಳು. ಈಕೆಯ ತಂದೆಯಾದ ಸಂಘ ಶ್ರೀಯು ಈ ಮದುವೆಗೆ ಖುಷಿಯಿಂದಲೇ ಒಪ್ಪುತ್ತಾನೆ. ತನ್ನ ಮಗಳನ್ನು ಈತನಿಗೆ ಕೊಟ್ಟರೆ ತಾನು ಹಿಡಿದ ಆ ಬುದ್ದಸಮಯವು ಈ ಊರಲ್ಲಿಯೂ ದೇಶದಲ್ಲಿಯೂ ಶೋಭಿಸುತ್ತದೆ ಎಂದು ಆತನು ಯೋಚಿಸುತ್ತಾನೆ. ತನ್ನ ಮಗಳ ಮೇಲೆ ಮೋಹ ಹೊಂದಿರುವ ರಾಜನನ್ನೂ ಸಹ ಬುದ್ದನ ಭಕ್ತನಾಗುವಂತೆ ಮಾಡುವ ಆಶೆಯಲ್ಲಿರುತ್ತಾನೆ. ಇತ್ತ ರಾಜನೂ ಸಹ ಕಮಲ ಶ್ರೀಯನ್ನು ತನ್ನ ಧರ್ಮಕ್ಕೆ ಬರುವಂತೆ ಮಾಡಿ, ಸಂಘ ಶ್ರೀಯನ್ನು ಶ್ರಾವಕನನ್ನಾಗಿ ಮಾಡುತ್ತೇನೆಂದು ಉಪಾಯಿಸುತ್ತಾನೆ.

ಅಂದುಕೊಂಡಂತೆಯೆ ಹಲವು ಉಪಾಯಗಳಿಂದಲೂ ಪ್ರಸಂಗಗಳಿಂದಲೂ ರಾಜನು ಕಮಲ ಶ್ರೀಯನ್ನೂ ಸಂಘ ಶ್ರೀಯನ್ನೂ ಜೈನಮತಕ್ಕೆ ತರುವಲ್ಲಿ ಯಶಸ್ವಿಯಾಗುತ್ತಾನೆ. ಈ ವಿಷಯ ತಿಳಿದ ಸಂಘ ಶ್ರೀಯ ಗುರುವಾದ ಬುದ್ದ ಶ್ರೀಯು ಹಲವು ಪ್ರಯತ್ನಗಳನ್ನು ಮಾಡಿ ಈತನನ್ನು ವಾಪಸ್ಸು ಬುದ್ದಮತಕ್ಕೆ ತರುತ್ತಾನೆ. ಈ ಕ್ರಿಯೆಯನ್ನು ಕವಿಯು **'ಪುನಃ ಶ್ವಾನೋ ಭವಿಷ್ಯತಿ'** ಎಂದು ಉದ್ಗರಿಸುತ್ತಾನೆ. ಸ್ವಮತಪರನಾದ ಕವಿಗೆ ಈ ಅನಿಸಿಕೆಯು ಸಹಜವೇ. ಇದಕ್ಕೆ ಅಂಟಿಕೊಂಡಂತೆಯೆ ಹಲವು ಘಟನೆಗಳು ನಡೆದು ರಾಜನು ಸಂಸಾರದಲ್ಲಿ ನಿರುತ್ಸಾಹವನ್ನು ಹೊಂದಿ ದೀಕ್ಷೆಕೊಂಡು ತಪಸ್ಸಿಗೆ ತೆರಳುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ರಾಜನು ಈ ಮುಂಚೆಯೇ ಜಿನಸಮಯಿಯಾಗಿದ್ದರೂ ಸಹ ಜೈನಮುನಿಯೋರ್ವರಲ್ಲಿ ದೀಕ್ಷೆಯನ್ನು ಪಡೆಯುತ್ತಾನೆ. ಈ ಹಿನ್ನೆಲೆಯಲ್ಲಿ ದೀಕ್ಷೆ ಪದವು ಮತ್ತೊಂದು ಅರ್ಥವನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಧನದನು ರಾಜನಾಗಿದ್ದರೂ ಸಹ ಅವರ ಮೇಲೆ ಯಾವುದೇ ಅಧಿಕಾರ ಪ್ರಯೋಗ ಮಾಡುವುದಿಲ್ಲ. ತಾನೇ ನೊಂದು ದೀಕ್ಷೆ ಪಡೆಯುತ್ತಾನೆ. ಇದುವೇ ಅಲ್ಲವೇ ದಯಾಮೂಲ ಧರ್ಮದ ಮೂಲತತ್ವ.ಆಯಾ

ಧರ್ಮದ ತತ್ವಗಳನ್ನು ಅನುಯಾಯಿಗಳು ಅನುಷ್ಠಾನಕ್ಕೆ ತಂದುದೆ ಆದರೆ ಈ ರೀತಿಯ ಸ್ವಮತ ಅಂಧಾಭಿಮಾನದಿಂದ ಹೊರಬರುವಂತಬೇಳವಣಿಗೆ ಸಾಧ್ಯ. ಈ ಕತೆಯ ಮೂಲಕ ಸಂಘ ಶ್ರೀಯ ರೂಪದಲ್ಲಿ **'ಮರು ಮತಾಂತರ'**ಕ್ಕೆ ಒಂದೊಳ್ಳೆ ಉದಾಹರಣೆ ಸಿಕ್ಕಂತಾಯಿತು.

ಕೆಲವೊಮ್ಮೆ ಅರಸನಿಗೆ ಇಬ್ಬರು ಹೆಂಡತಿಯರಿದ್ದು ಅವರಿಬ್ಬರೂ ಬೇರೆ ಬೇರೆ ಮತಕ್ಕೆ ಸೇರಿದವರಾಗಿರುತ್ತಿದ್ದರು. ಈ ಕಾರಣ ಆ ಇಬ್ಬರೂ ರಾಜನನ್ನು ತಮ್ಮ ತಮ್ಮ ಮತಕ್ಕೆ ಸೆಳೆಯಲು ಯತ್ನಿಸುತ್ತಿದ್ದರು. ಅಂತದ್ದೇ ಒಂದು ಕತೆ ಪೂತಿವಾಹನ ರಾಜನದ್ದು[38]. ಇದನ್ನು ಬರೆದಾತ ಜೈನ ಕವಿ. ಈ ಕಾರಣಕ್ಕೇ ಎನೋ ಅರಸನ ಮೊದಲ ಹೆಂಡತಿ ಜಿನಪ್ರಿತೆ ಓಹಿಲೆ: ಎರಡನೆಯಾಕೆ ಸುಗತವ್ರತೆ ಬುದ್ದದಾಸಿ. ತಂದೆ ತಾಯಿಯರ ಮತವು ಮಕ್ಕಳಿಗೆ ಬಂದಿದ್ದ ಪಕ್ಷದಲ್ಲಿ ಈ ಬುದ್ದದಾಸಿಯು ಬಾಲ್ಯದಲ್ಲಿಯೇ ಮತಾಂತರಕ್ಕೆ ಒಳಪಟ್ಟವಳಾಗುತ್ತಾಳೆ. ಬ್ರಾಹ್ಮಣರಿರಬಹುದಾದ ಸಮುದ್ರದತ್ತ ಮತ್ತು ಧನಧೆಯರು ಈಕೆ ಚಿಕ್ಕವಳಿರುವಾಗಲೇ ಸಾಯುತ್ತಾರೆ. ಈ ಮಗುವು ಮುಂದೆ ಪೂತಿವಾಹನನ ರಾಣಿಯಾಗುತ್ತಾಳೆ ಎಂಬ ಭವಿಷ್ಯವನ್ನು ಅಭಿನಂದನ ಭಟ್ಟಾರಕರಿಂದ ಕೇಳಿದ ಬುದ್ಧಾತ್ಮನೆಂಬ ಬೌದ್ದನೋರ್ವನು ಈಕೆಯನ್ನು 'ಬುದ್ದದಾಸಿ'ಯನ್ನಾಗಿ ಮಾಡಿ ಬೆಳೆಸುತ್ತಾನೆ.

ಪ್ರತಿವರ್ಷದಂತೆ ಓಹಿಲೆ ಮಹಾದೇವಿಯು ಜಿನಪೂಜೆ ಉತ್ಸವಕ್ಕೆ ತಯಾರಿ ನಡೆಸಿರುತ್ತಾಳೆ. ಇತ್ತ ಬುದ್ದದಾಸಿಯು ತಂದೆ ಬುದ್ಧಾತ್ಮನ ಅಭಿಮತದಂತೆ ಬುದ್ದಪೂಜಾ ಉತ್ಸವಕ್ಕೆ ತಯಾರಾಗುತ್ತಾಳೆ. ಇದಕ್ಕೆ ರಾಜನಿಂದ ಬೆಂಬಲವನ್ನೂ ಪಡೆಯುತ್ತಾಳೆ. ಇದರಿಂದ ನೊಂದ ಓಹಿಲೆಯು ಶ್ರೀ ದತ್ತ ಮುನಿಗಳ ಸಹಾಯ ಬೇಡುತ್ತಾಳೆ. ಆತನು ತನ್ನ ಶಕ್ತಿಯಿಂದ ಸಾಗರ ಜನರನ್ನು ಸೇರಿಸಿ ವಿಜೃಂಭಣೆಯಿಂದ ಜಿನಪೂಜೆಯನ್ನು ಮಾಡಿಸುತ್ತಾನೆ.

ಪರಸ್ಪರ ಮತಗಳು ಮಹತ್ತನ್ನು ಸಾಧಿಸಲು ರಾಜನ ಆಸ್ಥಾನದಲ್ಲಿ ಸ್ಪರ್ಧಿಸುವಂತೆಯೇ ಅವನ ವೈಯಕ್ತಿಕ ಜೀವನದಲ್ಲಿಯೂ ಸ್ಪರ್ಧಿಸುತ್ತಿದ್ದವು. ಇಂತಹ ಪ್ರಯತ್ನಗಳನ್ನು ಅವು ರಾಜರ ಆಪ್ತರ ಮೂಲಕ ನಡೆಸಬೇಕಿತ್ತು. ಇಲ್ಲಿ ಓಹಿಲೆ ಮತ್ತು ಬುದ್ದದಾಸಿಯರನ್ನು ಎರಡು ಪಾತ್ರಗಳಿಗಿಂತ ಹೆಚ್ಚಾಗಿ ಎರಡು ಮತಗಳ ರೂಪಕಗಳಾಗಿ ನೋಡಬೇಕಿದೆ. ಕವಿಯು ಹೇಳುವಂತೆ ಬುದ್ದದಾಸಿಯು ನಾಡಲ್ಲಿ ಎಂದೂ ನಡೆಯದ ಸುಗತನ ಉತ್ಸವಕ್ಕೆ ಪ್ರಯತ್ನಿಸುತ್ತಾಳೆ. ಅಂದರೆ ಈ ನಾಡಲ್ಲಿ ಬುದ್ದಧರ್ಮವು ಇನ್ನೂ ಆರಂಭದ ದಿನಗಳಲ್ಲಿ ಇದ್ದಿರಬೇಕು ಅಥವಾ ಇನ್ನೂ ಪ್ರಭಾವಿಯಾಗದ ಹಂತದಲ್ಲಿ ಇದ್ದಿರಬೇಕು. ಈ ಕಾರಣಕ್ಕೆ ಅದು ತನ್ನ ಪ್ರಭಾವ ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದೆ. ಇದಕ್ಕೆ ರಾಜನು ಮೂಲಕ ದಾರಿ ಹುಡುಕುವ ಯತ್ನ ಮಾಡಿದೆ. ಅಲ್ಲಿ ಜೈನರು ಬಹುಸಂಖ್ಯಾತರಿದ್ದರೆನೋ.'ಸಾಗರ ಜನರನ್ನು ಸೇರಿಸಿ' ಎನ್ನುವಲ್ಲಿ ಇದನ್ನು ಅಂದಾಜಿಸಬಹುದು. ಅಂತೂ ಬುದ್ದ ಉತ್ಸವವನ್ನು ನಡೆಯಲು ಅವರು ಬಿಡಲಿಲ್ಲ.

ಇಂತದ್ದೇ ಪರಸ್ಪರರನ್ನು ಸಾಧಿಸುವ ಪ್ರಯತ್ನವುಳ್ಳ ಮತ್ತೊಂದು ಪ್ರಸಂಗವಿದೆ[39]. ಇಲ್ಲಿಯೂ ಸಹ ಎರಡು ಪಕ್ಷಗಳಿವೆ. ವಸುಭೂತಿ ಎನ್ನುವ ಬ್ರಾಹ್ಮಣನು ವೈದಿಕ ಧರ್ಮದ ಪರವಾಗಿಯೂ ದಯಾಮಿತ್ರ ಸೆಟ್ಟಿಯು ಜಿನಧರ್ಮದ ಪರವಾಗಿಯೂ ನಿಲ್ಲುತ್ತಾರೆ. ಇಲ್ಲಿ ದಯಾಮಿತ್ರ ಸೆಟ್ಟಿಯು ತಾನು ಹಾಕಿಕೊಂಡ ವ್ರತಗಳ ಪರಿಣಾಮವಾಗಿ, ದಾನಧರ್ಮದ ಸಲುವಾಗಿ ತನ್ನ ಕರಗದ ಆಸ್ತಿಯನ್ನು ಕರಗಿಸುತ್ತಿರುತ್ತಾನೆ. ಇದನ್ನು ನೋಡುತ್ತಿದ್ದ ವಸುಭೂತಿಗೆ ಅಸಹನೆ ಉಂಟಾಗುತ್ತದೆ. **'ಇವನ ಹಣವೂ ಬುದ್ದಿಯೂ ವ್ಯರ್ಥವಾಗದ ಹಾಗೆ ಇವನಿಗೆ ಬುದ್ದಿಹೇಳಿ, ಇವನು ನಂಬಿರುವ ಧರ್ಮವನ್ನು ಬಿಡಿಸಿ ನನ್ನ ಧರ್ಮದಲ್ಲಿ ತೊಡಗಿಸುತ್ತೇನೆ'** ಎಂದು ನಿರ್ಧರಿಸುತ್ತಾನೆ. ದಯಾಮಿತ್ರ ಸೆಟ್ಟಿಯೂ ಸಹ **'ಈತನು ನಂಬಿರುವ ಕುಮತವನ್ನು ಬಿಡಿಸಿ, ಜಿನಮಾರ್ಗದಲ್ಲಿ ನಡೆಸಬೇಕೆಂದು'** ನಿಶ್ಚಯಿಸುತ್ತಾನೆ. ಕತೆಯು ಮುಂದುವರೆದಂತೆ ಬ್ರಾಹ್ಮಣತೆಯ ದೌರ್ಬಲ್ಯಗಳನ್ನೂ, ಜಿನಮತದ ಶ್ರೇಷ್ಠತೆಯನ್ನು ಹೇಳುತ್ತಾ ಹೊಗಲಾಗಿದೆ. ಹೀಗೆಯೆ ಬ್ರಾಹ್ಮಣ ಮತ್ತು ಜಿನಮತಗಳ ಮಧ್ಯೆ ಯಾವುದು ಶ್ರೇಷ್ಠವೆಂಬ ವಾದಗಳು ಬಿರುಸಾಗಿ ನಡೆದವು. ಎರಡೂ ಪಕ್ಷಗಳ ವಾದವಿವಾದಗಳು ಕೊನೆಯಾದ ಮೇಲೆ ಬ್ರಾಹ್ಮಣನಾದ ವಸುಭೂತಿಯು **'ತನಗೆ ಜಿನನೇ ದೈವವೆಂಬ ಭಾವನೆಯಿಂದ ದಯಾಮೂಲಮಪ್ಪ ಜಿನಧರ್ಮಮಂ ನೆನೆಯುತ್ತಾ'** ಎನ್ನುವಲ್ಲಿ ಮತಾಂತರದೊಂದಿಗೆ ಕತೆಯು ಮುಗಿಯುತ್ತದೆ.

ಆ ಕಾಲದಲ್ಲಿ ಒಮ್ಮೆ ಬ್ರಾಹ್ಮಣರೂ ಮತ್ತೊಮ್ಮೆ ಜೈನರು ತಮ್ಮ ತಮ್ಮ ಕಾವ್ಯದಲ್ಲಿ ತಮ್ಮ ತಮ್ಮ ವಿಜಯವನ್ನು ಸಾಧಿಸುತ್ತಿದ್ದರು. ಇದಲ್ಲದೆ ಬ್ರಾಹ್ಮಣದಿಂದ ಜೈನಕ್ಕೆ ಮತಾಂತರಗೊಂಡ ಕೆಲವರು ಎರಡೂ ಮತಗಳಲ್ಲಿಯೂ ಶ್ರೇಷ್ಠತೆಯನ್ನು ಹಂಬಲಿಸುತ್ತಿದ್ದರು. ಇಂತಹದ್ದೆ ಮನಸ್ಥಿತಿಗಳು ಆಗ ಇದ್ದವು. ಅಲ್ಲದೆ ಕೊನೆಯಲ್ಲಿ ಜಿನನನ್ನು ಎತ್ತಿ ಹಿಡಿಯುವ ಅನಿವಾರ್ಯತೆಯೂ ಅವರಿಗಿತ್ತು.ಇಂತಹ ಎತ್ತಿಹಿಡಿಯುವ ಕಾರ್ಯವನ್ನು ಅನೇಕ ಕವಿಗಳು ಸಮರ್ಥವಾಗಿ ಮಾಡಿದರು.ಈ ಮೇಲಿನ ಕತೆಯಲ್ಲಿಯೂ ಸಹ ಆಗಿದ್ದು ಅದೆಯೆ.

ಕೈಲಾಗದವರು ಜೈನಧರ್ಮವನ್ನು ಸ್ವೀಕರಿಸರು ಎನ್ನುವ ಸಾಮಾನ್ಯ ಮಾತೊಂದು ಜೈನರಲ್ಲಿ ಬರುತ್ತದೆ. ಇದು ಇತರ ಧರ್ಮಿಯರನ್ನು ಹಂಗಿಸುವಂತಿದೆ. ಕೆಲವರಲ್ಲಿಯಾದರೂ ಜಿದ್ದನ್ನು ಮೂಡಿಸುವಂತಿದೆ. ಇದೂ ಸಹ ಅನ್ಯರನ್ನು ಮತಕ್ಕೆ ಸೆಳೆಯುವ ತಂತ್ರಗಳಲ್ಲಿ ಒಂದು. ಈ ವಸುಭೂತಿ ಕತೆಯಲ್ಲಿ ಆಗಿದ್ದು ಇದೆಯೆ. ಸೆಟ್ಟಿಯು ಹೇಳಿದ ವ್ರತಗಳನ್ನು ಗೌಣವೆಂಬಂತೆ ಕಂಡ ವಸುಭೂತಿಯು ಅವನ್ನು ಪಾಲಿಸುವಲ್ಲಿ ಪೂರ್ಣವಾಗಿ ಸೋಲುತ್ತಾನೆ. ಕೊನೆಗೆ ಜೈನಧರ್ಮವನ್ನು ಸೇರುತ್ತಾನೆ. ಅನೇಕ ಧಾರ್ಮಿಕ ಕತೆಗಳ ಅಂತ್ಯದ ಫಲವೇ ಈ ರೀತಿಯ ಬಯಕೆಯುಳ್ಳದ್ದು.ಅಂತೂ ವಸುಭೂತಿ ಜೈನನಾದ.

ಕವಿಗಳ ಬಗ್ಗೆ ಹಿಂದೆಯೆ ಒಂದು ಮಾತನ್ನು ಹೇಳಲಾಯಿತು. ಧರ್ಮದ ವಿಷಯ ಬಂದಾಗ ಇವರು ತುಂಬಾ ಮಹತ್ವವಾದ ಪಾತ್ರವನ್ನೇ ವಹಿಸುತ್ತಾರೆ. ಈಗಲೂ ಇದನ್ನು ನೋಡಬಹುದು.

ಪ್ರಾಚೀನ ಕಾಲದಲ್ಲಿಯಂತೂ ಈ ಪಂಡಿತರು ಎನ್ನಿಸಿಕೊಂಡ ಕವಿಗಳೇ ಧರ್ಮದ ಚರಿತ್ರೆಯನ್ನು ಕಟ್ಟುತ್ತಿದ್ದರು. ಅದರ ಬಗೆಗಿನ ಕತೆಗಳು ಮುಂತಾದವುನ್ನೆಲ್ಲಾ ಇವರೇ ಕಟ್ಟುತ್ತಿದ್ದುದು. ಧರ್ಮಪ್ರಚಾರಕರ ಕಾರ್ಯವನ್ನು ಇವರು ನಿರ್ವಹಿಸುತ್ತಿದ್ದರು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಬ್ರಹ್ಮಶಿವ. ಈತನ ಕೃತಿ ಸಮಯಪರೀಕ್ಷೆ.ಈ ಕೃತಿಯ ಕುರಿತು ಈತ ಹೀಗೆ ಹೇಳಿಕೊಳ್ಳುತ್ತಾನೆ[41].

**"ಇದು ರತ್ನಕರಂಡಕಮೆಂ**

**ಬುದು ಭಾವಿಸುವಾಗಳಿದುವೆ ಪರಸಮಯಿಗಳಂ**

**ಮುದದಿಂ ಪಥಕ್ಕೆ ತರಲಾ**

**ರ್ಪುದು ಸಮಯಪರೀಕ್ಷೆಯೆಂಬುದಿಂತೀ ಕಾವ್ಯಂ"**

ಈ ಕೃತಿಯು ಜೈನ ಮತದ ಆಶಯ-ಮಹತ್ವಗಳನ್ನು ಪ್ರಚಾರ ಮಾಡಲೆಂದೇ ರಚಿಸಲಾದ ಕೃತಿ.ಈ ಸಮಯದಲ್ಲಿ ಸಮಾಜದಲ್ಲಿ ಜೈನ ಧರ್ಮದ ಪ್ರಭಾವವು ಕಡಿಮೆಯಾಗತೊಡಗಿತ್ತು. ಅದನ್ನು ಸುಧಾರಿಸುವ ಸಲುವಾಗಿ ಇದು ಪ್ರಯತ್ನ ಮಾಡಿತು. ಈತನೇ ಹೇಳಿಕೊಂಡಂತೆ ಇದು ಪರಸಮಯಿಗಳನ್ನು ಮುದದಿಂದ ಪಥಕ್ಕೆ ಅಂದರೆ ಜಿನಸಮಯಕ್ಕೆ ತರುವ ಸಲುವಾಗಿಯೇ ಇದೆ. ಇದು ಕಾವ್ಯದ ಸಂಪೂರ್ಣವಾದ ಉದ್ದೇಶವೂ ಸಹ. ಈತ ಹುಟ್ಟಿನಲ್ಲಿ ಶೈವ ಬ್ರಾಹ್ಮಣನಾಗಿದ್ದವನು. ನಂತರದಲ್ಲಿ ಜೈನ ಧರ್ಮಕ್ಕೆ ಪರಿವರ್ತಿತನಾದವನು(ಹಿಂದೆ ಬರೆದುದನ್ನು ಗಮನಿಸು). ಈತ ತನ್ನನ್ನು **'ದ್ವಿಜಕುಳ ರತ್ನ','ವತ್ಸಗೋತ್ರ ತಿಳಕ'** ಎಂದು ಕರೆದುಕೊಂಡಿದ್ದಾನೆ[41]. ಈ ಎರಡು ಬಿರುದುಗಳು ತಾನು ಒಂದಾನೊಂದು ಕಾಲದಲ್ಲಿ ವಿಪ್ರನಾಗಿದ್ದುದರ ನೆನಪುಗಳು. ಈತನ ಸಮಯ ಬದಲಾದರೂ ಸಾಮಾಜಿಕತೆ ಪೂರ್ಣವಾಗಿ ಬದಲಾಗಿಲ್ಲ. ಈ ಕೃತಿಯ ಪೂರ ಈತನು ಅನ್ಯಧರ್ಮದವರ ಅವಹೇಳನ ಮಾಡುತ್ತಾನೆ. ಈತನ ಕುರಿತಂತೆ **"ಅನ್ಯಧರ್ಮಗಳಲ್ಲಿ ಒಳಿತನ್ನು ಕಾಣದ ಈತನ ಮನಸ್ಸು, ತನ್ನ ಧರ್ಮದಲ್ಲಷ್ಟೇ ಕಾಣಹೊರಡುವುದು"** ಎಂದು ವಿಮರ್ಶೆಯೊಂದರಲ್ಲಿ ಹೇಳಲಾಗಿದೆ[42].

ಈತನಂತೆಯೇ ಮತಾಂತರವಾದ ಕವಿಗಳು ಇನ್ನೂ ಹಲವು ಜನ ಇದ್ದಾರೆ. ಈ ಸಂಧರ್ಭದಲ್ಲಿ ಹೇಳುವುದಾದರೆ **'ಹಸ್ತಿಮಲ್ಲ'** ಎಂಬ ಕವಿ.ಈತನನ್ನು **"ಉಭಯಭಾಷಾ ಕವಿ ಚಕ್ರವರ್ತಿ"** ಎಂದು ಕರೆಯಲಾಗುತ್ತದೆ. ಈತನೂ ಬ್ರಾಹಣನೇ.ನಂತರದಲ್ಲಿ ಜಿನದೀಕ್ಷೆಯನ್ನು ಕೊಂಡವನು. ಈತನಿದ್ದ ಪರಿಸರದ ಪರಿಸ್ಥಿತಿಯೇ ಬೇರೆಯಿತ್ತು. ಈತನಿದ್ದ ರಾಜ್ಯದ ರಾಜ ಶೈವ. ಈ ರಾಜನೂ ಈತನೊಂದಿಗೆ 50 ಜನ ವಿಪ್ರರನ್ನು ಕರೆಯಿಸಿ ಲಿಂಗ ಕಟ್ಟಿಕೊಳ್ಳಲು ಹೇಳುತ್ತಾನೆ. ಈ 50 ವಿಪ್ರರೂ ಸಹ ಜಿನಕ್ಕೆ ಮತಾಂತರವಾದವರೇ ಇರಬೇಕು. ಇವರು ಒಪ್ಪದಿದ್ದಾಗ ರಾಜನು ಇವರನ್ನು ಕೊಲ್ಲಲು

ಆದೇಶಿಸುತ್ತಾನೆ. ಅಲ್ಲಿಂದ ತಪ್ಪಿಸಿಕೊಂಡ ಇವರೆಲ್ಲರೂ ವಿಜಯಮಂಗಲ ಎಂಬ ಪಟ್ಟಣಕ್ಕೆ ಹೋಗುತ್ತಾರೆ[43].

ರಾಜನಾದವನು ಒಂದು ಧರ್ಮಪರ ಅಭಿಮಾನಿಯಾದಾಗ ಹೀಗೆಯೆ ಆಗುವುದು. ಪ್ರಾಣವೂ ಧರ್ಮವೂ ಮುಖ್ಯವಾದಾಗ ಅವರಿಗೆ ಉಳಿಯುವುದು ಪಲಾಯನ ಮಾರ್ಗವೊಂದೆ. ಆದರೆ ಹೀಗೆ ಅರಸನು ಮಾತ್ರವೇ ಒತ್ತಡ ಹೇರುವುದು ಸುಲಭಸಾದ್ಯವಲ್ಲ. ಅಲ್ಲಿ ಅವರು ಬಹುಸಂಖ್ಯಾತರಿರಬೇಕು. ಆಗ ಅರಸನಿಗೆ ಇನ್ನಷ್ಟು ಬಲ ಬರುತ್ತದೆ. ಆದರೂ ಈ ರೀತಿ ಅರಸನು ಎದುರಾದರೂ ಅವನನ್ನು ಎದುರಿಸಿ ನಿಂತವರೂ ಇದ್ದಾರೆ. ಅವರಲ್ಲಿ ಒಬ್ಬನು ವಾಗೀಶ[44]. ಈತನ ಕತೆಯೆ ಒಂದು ರೀತಿ ವಿಚಿತ್ರತೆಯಿಂದ ಕೂಡಿದೆ. ಈತನ ಜನ್ಮ ಶೈವ ದಂಪತಿಗಳಿಂದಲೇ ಆಗಿರಬೇಕು. ಕಾರಣ ಕವಿಯು ಈತನ ಕುರಿತಂತೆ **“ಚಿತ್ತದೊಳು ಪತ್ತಿರ್ದ ಪೂರ್ವ ವಾಸನೆಯಿಂದ ಆರುಹತದೀಕ್ಷೆಯೊಳಗತಿ ಚಪಳತರನಾಗಿ, ತನ್ನ ಹೆಸರಂ ಧರ್ಮಸೇನ ಪಂಡಿತರೆಂದು ಮನ್ನಿಸುತ್ತಾ”** ಎನ್ನುತ್ತಾನೆ. ಪೂರ್ವವಾಸನೆ ಎನ್ನುವುದಕ್ಕೆ ಅರ್ಥ ಸ್ಪಷ್ಟವಾಗುವುದಿಲ್ಲ. ಬಾಲ್ಯದ್ದು ಇಲ್ಲವೇ ಪೂರ್ವ ಜನ್ಮದ್ದು ಎನ್ನುವ ಎರಡು ಅರ್ಥವಾಗುತ್ತದೆ. ಸಧ್ಯ ಇಲ್ಲಿ ಪೂರ್ವ ಜನ್ಮದ ವಾಸನೆ ಎಂದುಕೊಂಡು ಮುಂದುವರೆಯಬಹುದು.

ಈತನು ಪೂರ್ವ ಜನ್ಮದಲ್ಲಿ ಜೈನ ಪಂಡಿತನಾಗಿರಬೇಕು. ಈಗಲೂ ಸಹ ಅದನ್ನು ಮುಂದುವರೆಸಿರಬೇಕು. ಈತನು ಸುಮಾರು 8000 ಸವಣ ಶಿಷ್ಯರೊಂದಿಗೆ ಕೂಡಿ ತನ್ನ ವಾದಬಲದಿಂದ ಎಲ್ಲಾ ಮತಗಳನ್ನು ಸೋಲಿಸುತ್ತಾನೆ.

**“ಕರಿತುರಗ ವಸ್ತುವಾಹನ ಸಂಪದಮನುಳ್ಳ**

**ಪರಿವಾಪದಾತಿರಥ ಸಂಕುಳಂಗಳನುಳ್ಳ**

**ಮನ್ನೆಯಂ ಬಂದು ಜಿನದೀಕ್ಷೆಯಂ ಕೈಕೊಂಡಂ**

**ನಿಂತೆಸೆವ ಮನ್ನೆಯಂಗುಪದೇಶಮಂ ಮಾಡಿ**

**ಸಂತಸ ಸುಖದಿಂದಲ್ಲಿ ಜಿನಸಮಯಮಂ ಕೂಡಿ”**... ಎಂದು ಕವಿ ಈತನ ವಿಕ್ರಮವನ್ನು ವರ್ಣಿಸುತ್ತಾನೆ. ಹೀಗೆ ಆತನು ಎಲ್ಲರನ್ನೂ ಎಲ್ಲವನ್ನೂ ಜಿನವನ್ನಾಗಿ ಮತಾಂತರಿಸಿ ಬಿಡುತ್ತಾನೆ. ಆ ಊರ ರಾಜನೇ ಇಡೀ ತನ್ನ ಸೈನ್ಯ ಪರಿವಾರ ಸಮೇತವಾಗಿ ಬಂದು ಈತನಲ್ಲಿ ಜಿನಧೀಕ್ಷೆಯನ್ನು ಕೈಕೊಳ್ಳುತ್ತಾನೆ ಎಂದಮೇಲೆ ಉಳಿದವರ ವಿಚಾರವೇನು.

ಹೀಗಿರಲು ವಿಚಿತ್ರ ತಿರುವೊಂದು ನಡೆಯುತ್ತದೆ.ಈತನ ಹೆಂಡತಿಯಾದ ತಿಲ್ಲೆವಲ್ಲೆನಾಚಿಯು ಅಪೂರ್ವ ಶಿವಭಕ್ತೆ. ಈತನ ಜಿನವಿಜಯವನ್ನು ನೋಡಲಾರದೆ ಆಕೆ ಶಿವನಲ್ಲಿ ಕೊರಗಿಕೊಳ್ಳುತ್ತಾಳೆ.

ಈಕೆಯ ಕೂಗಿಗೋ ಎಂಬಂತೆ ಧರ್ಮಸೇನ ಪಂಡಿತನಿಗೆ ಶೂಲೆರೋಗವು ಅಂಟುತ್ತದೆ. ಅದು ಎಲ್ಲಿಯೆಂದರೆ ಎಲ್ಲಿಯೂ ವಾಸಿಯಾಗುವುದಿಲ್ಲ. ಕೊನೆಗೆ ಹೆಂಡತಿಯ ಒತ್ತಾಯಕ್ಕೆ ಶಿವಮಂದಿರಕ್ಕೆ ನಡೆದುಕೊಳ್ಳಲು, ಅಲ್ಲಿ ಪವಾಡವೆಂಬಂತೆ ವಾಸಿಯಾಗುತ್ತದೆ. ಆಗವನು ಶಿವಭಕ್ತನಾಗಿ ಬದಲಾಗುತ್ತಾನೆ. ಈತನ ಜೈನ ಅನುಯಾಯಿಗಳು ಇದರಿಂದ ಕಂಗಾಲಾಗುತ್ತಾರೆ. ಈತನ ಬಳಿಬಂದು **'ನೀವೀಗಳ್ ಕೈಕೊಂಡಿಪ್ಪ ಸಮಯವೇಷಮಂ ಬಿಟ್ಟು ಮುನ್ನಿನಂತೆ ಆರುಹತ ವೇಷಮಂ ಕೈಕೊಂಡು ರಕ್ಷಿಪುದೆಂದು'** ಅವರಲ್ಲಿ ಬೇಡಿಕೊಳ್ಳುತ್ತಾರೆ. ಇಲ್ಲಿ ಆಶ್ಚರ್ಯಕರವೆನ್ನುವಂತೆ ಆ ವಾಗೀಶನು ತನ್ನ ಮುನ್ನಿನ ಧರ್ಮವನ್ನು, ಧರ್ಮೀಯರನ್ನು ವಾಚಾಮಗೋಚರವಾಗಿ ಬೈಯ್ಯುತ್ತಾನೆ.

**"ಪತಿಯನರಿಯದ ಪಾತಕರಿರಾ**

**ಸಮಯವರಿಯದ ತಮಿಗಳಿರಾ......**

ಎಂದು ಇನ್ನೂ ಮುಂತಾಗಿ ಅವರನ್ನು ಬೈಯ್ದು ವಾಪಾಸ್ಸು ಕಳಿಸುತ್ತಾನೆ. ಇದರಿಂದ ಸಿಟ್ಟಾದ ಅವರೆಲ್ಲರೂ ಹೇಗಾದರೂ ಮಾಡಿ ಈತನನ್ನು ಜೈನನನ್ನಾಗಿ ಮಾಡಬೇಕೆಂದು ಛಲತೊಡುತ್ತಾರೆ. ಅರಸನ ಮೊರೆ ಹೋಗಿ ಅವರಿಂದ ಪಂಡಿತನ ಊರಿನ ಮೇಲೆ ದಾಳಿ ಮಾಡಿಸುತ್ತಾರೆ. ಅವನನ್ನು ಪುನಹ ಕರೆತಂದು ಬಸದಿಯಲ್ಲಿ ಕೂರಿಸುತ್ತಾರೆ. ಆಗಲೂ ಅವನು ಜೈನ ಮತಕ್ಕೆ ಬರಲು ಒಪ್ಪುವುದಿಲ್ಲ. ಕೊನೆಗೆ ಜೈನರೇ ಸೋತು ಅವನನ್ನು ಬಿಟ್ಟುಬಿಡುತ್ತಾರೆ.

ಪೂರ್ವಜನ್ಮದಲ್ಲಿ ಜೈನನಾಗಿಯೇ ಸತ್ತವನು ಈಗಿನ ಜನ್ಮದಲ್ಲಿ ಶೈವನಾಗಿ ಮತಾಂತರವಾಗುತ್ತಾನೆ. ಅವನ ಪೂರ್ವಜನ್ಮದ ಕಾಲದಲ್ಲಿ, ಅಂದರೆ ಈ ಜನ್ಮಕ್ಕೂ ತುಸು ಹಿಂದಿನ ಕಾಲದಲ್ಲಿ ಅಲ್ಲಿ ಜೈನವೇ ಪ್ರಮುಖವಿರಬೇಕು. ಈಗ ಶೈವರು ಪ್ರಬಲರಾಗುತ್ತಿರಬೇಕು. ಹೀಗೆ ಆತನು ತನ್ನ ರೋಗ ವಾಸಿಯಾದ ಕಾರಣಕ್ಕೆ ಜಿನನ ಮೇಲೆ ನಂಬಿಕೆಯನ್ನು ಬಿಟ್ಟು ಶಿವನ ಮೇಲೆ ನಂಬಿಕೆಯನ್ನು ತಾಳುತ್ತಾನೆ. ಬಹುಶ ಅವನು ಬದುಕನ್ನು ಆಯ್ಕೆ ಮಾಡಿಕೊಂಡ ರೀತಿಯದು. ಮತ್ತು ಮತಾಂತರಕ್ಕೆ ಸ್ಫೂರ್ತಿ ನೀಡುತ್ತಿದ್ದ ಕಾರಣಗಳಿಗೆ ಇದನ್ನು ನಾವೀಗ ಸೇರಿಸಬಹುದು. ಇಲ್ಲಿ ಈತನು ತನಗೆ ಬದುಕನ್ನು ನೀಡಿದ್ದಕ್ಕಾಗಿ ಧೀಕ್ಷೆ ಸ್ವೀಕರಿಸಿದರೆ, ಮತ್ತೊಬ್ಬನು ಮತ್ತೊಂದು ಘಟನೆಯಲ್ಲಿ ಸಾಯುವುದಕ್ಕಾಗಿ ಧೀಕ್ಷೆಯನ್ನು ಸ್ವೀಕರಿಸುವ ಪ್ರಸಂಗ ಬರುತ್ತದೆ.

ಇದು ಆದಿಪುರಾಣದಲ್ಲಿನ ಒಂದು ಘಟನೆ[45]. ಶ್ರೀಷೇಣ ಎನ್ನುವ ಅರಸನೊಬ್ಬನು ಮುಂದಿನ ಜೀವನಕ್ಕಾಗಿ ಸ್ವಯಂಬುದ್ದ ಆಚಾರ್ಯನ ನೇತೃತ್ವದಲ್ಲಿ ತನ್ನ ಹಿಂಬಾಲಕರೊಂದಿಗೆ ಜಿನಧರ್ಮವನ್ನು ಧೀಕ್ಷೆಕೊಳ್ಳುತ್ತಾನೆ. ಹೀಗೆ ಪಡೆಯುವ ಮುನ್ನ ಆತನು ತನ್ನ ಹಿರಿಯ ಮಗನಾದ ಜಯವರ್ಮನಿಗೆ ಪಟ್ಟಕಟ್ಟದೆ ಕಿರಿಯನಾದ ಶ್ರೀವರ್ಮನಿಗೆ ಕಟ್ಟುತ್ತಾನೆ. ಇದರಿಂದ ಸಿಟ್ಟಾದ ಜಯವರ್ಮನು ಮುಂದಿನ

ಜನ್ಮದಲ್ಲಾದರೂ ರಾಜ್ಯಲಕ್ಷ್ಮಿಯು ತನ್ನ ಕೈಸೇರಲೆಂದು ನಿಶ್ಚಯಿಸಿ ವ್ರತತೊಟ್ಟು, ಸ್ವಯಂಪ್ರಭೆಯೆಂಬ ಗುರುವಿನ ಪಾದಮೂಲದಲ್ಲಿ ಜಿನಧೀಕ್ಷೆಯನ್ನು ಅಪ್ಪುತ್ತಾನೆ. ತಂದೆಯ ಮೇಲೆ ಆತನ ಸಿಟ್ಟು ಎಷ್ಟಿತ್ತೆಂದರೆ, ರಾಜಗುರುವಾದ ಸ್ವಯಂಬುದ್ದ ಮುನಿಯನ್ನು ಬಿಟ್ಟು ಬೇರೊಬ್ಬರಲ್ಲಿ ಧೀಕ್ಷೆ ಕೊಳ್ಳುತ್ತಾನೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಅವನು ಸಾಯುವುದಕ್ಕೆಂದು ಜಿನ ಧರ್ಮವನ್ನು ಆಯ್ಕೆಮಾಡಿಕೊಂಡಿದ್ದು. ಇದಕ್ಕೆ ಕಾರಣವೆಂದರೆ ಸಾವನ್ನು ಧರ್ಮದ ಒಂದು ಅಂಗವನ್ನಾಗಿ ಮಾಡಿಕೊಂಡಿದ್ದು ಈ ಜಿನ ಧರ್ಮ.ಸಾವಿಗೆ ಮತ್ತು ಪುನರ್ಜನ್ಮಕ್ಕೆ ಈ ಧರ್ಮದಲ್ಲಿ ವಿಶೇಷವಾದ ಮಹತ್ವವಿದೆ. ಈ ಕಾರಣಕ್ಕಾಗಿಯೆ ಅವನು ಈ ಧರ್ಮವನ್ನು ಆಯ್ಕೆ ಮಾಡಿಕೊಂಡಿರಬೇಕು.

ಹೀಗೆ ನಾವು ಹೆಚ್ಚಾನುಹೆಚ್ಚು ಆಗಿನ ಕಾಲದಲ್ಲಿ ನೋಡುವ ಮತಾಂತರಗಳೆಲ್ಲವೂ ರಾಜರು, ಬ್ರಾಹ್ಮಣರು, ಇಲ್ಲವೇ ಮೇಲ್ವರ್ಗದವರನ್ನು ಮಾತ್ರವೇ ನೋಡುತ್ತೇವೆ. ಈ ಕುರಿತು ತರಿಕೆರೆಯವರು ಹೇಳುವಂತೆ **"ಈ ಜೈನಕೇಂದ್ರಿತ ಕತೆಗಳಲ್ಲಿ ಬ್ರಾಹ್ಮಣರ ಜೈನೀಕರಣವಿದೆಯೆ ಹೊರತು ದಲಿತರ ಮೇಲು ಚಲನೆಯಿಲ್ಲ"**[46]. ಇದನ್ನೇ ಅರವಿಂದ ಮಾಲಗತ್ತಿಯವರು ಹೀಗೆ ಹೇಳುತ್ತಾರೆ **"ಹೊಲೆಮಾದಿಗರಿಗೂ ಜೈನಧೀಕ್ಷೆ ಕೊಡುವುದು, ಅದರಲ್ಲೂ ಗಂಡು ಹೆಣ್ಣೆಂಬ ಭೇದ ಮಾಡದಿರುವುದು 10ನೇ ಶತಮಾನಕ್ಕೆ ಅತ್ಯಂತ ಕ್ರಾಂತಿಕಾರಿ ನಿಲುವು"[46]**. ಈ ಎರಡೂ ಮಾತುಗಳು ಹೇಳುತ್ತಿರುವುದು ಒಂದನ್ನೇ.ಆದರೆ ಇಬ್ಬರು ಕಂಡ ರೀತಿ ಮಾತ್ರ ಬೇರೆ.ಇದಕ್ಕೆ ಸಂವಾದಿಯಾಗಿ ಮತ್ತೊಂದು ಕಲಬುರ್ಗಿಯವರ ಮಾತನ್ನು ಸೇರಿಸಬಹುದು.**"ಅಂದಿನ ಜೈನಧರ್ಮವು ಬ್ರಾಹ್ಮಣರಿಗೆ ಮತಾಂತರ ಧೀಕ್ಷೆಯನ್ನೂ ಅಬ್ರಾಹ್ಮಣರಿಗೆ ಮಂತ್ರ ದೀಕ್ಷೆಯನ್ನೂ ನೀಡುತ್ತಿತ್ತು"[47]**.ಬಹುಸಂಖ್ಯಾತ ಒಂದು ವರ್ಗ ಜೈನಮಾರ್ಗದಿಂದ ವಿಮುಖವಾಗಲು ಇದೂ ಸಹ ಒಂದು ಪ್ರಮುಖ ಕಾರಣವಾಗಿರಬೇಕು. ಕೆಳವರ್ಗದವರು ಮತಾಂತರ ಹೊಂದಿ ಮೋಕ್ಷ ಪಡೆದಿದ್ದನ್ನು ನಾವು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ನೋಡುವುದು ಕಮ್ಮಿ. ಸುಮ್ಮನೆ ಗಮನಿಸುವುದಾದರೆ :–

ಒಂದು ದಿನ ರಾಜಪರಿವಾರವು ಬೇಟೆಗೆ ಹೋಗುತ್ತಾರೆ. ಅವರ ಸಂಖ್ಯೆ **"ಶ್ರೀವರ್ಧನ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತೀರ್ವರ್ ಕುಮಾರರುಂ ಸಾಮಂತ ಮಹಾಸಾಮಂತ ಮಕ್ಕಳುಮಂತೆಲ್ಲ ಮಯ್ನೂರ್ವರುಂ"**. ಅವರೆಲ್ಲರೂ ಅಲ್ಲಿ ಕಾಡಿನಲ್ಲಿದ್ದ ಭಟ್ಟಾರಕರನ್ನು ಪ್ರಾಣಿಯೆಂದು ಭಾವಿಸಿ ಬಾಣಹೊಡೆಯಲು ಅವು ಹೂವಾಗುತ್ತವೆ. ಅವರೆಲ್ಲರೂ ಶರಣಾಗಿ ಪಶ್ಚಾತಾಪ ಹೊಂದಿ ಜೈನಧೀಕ್ಷಿತರಾಗುತ್ತಾರೆ[48].

ಇನ್ನೊಂದು ಘಟನೆಯನ್ನು ನೋಡುವುದಾದರೆ **"ಗುರುದತ್ತ ಭಟ್ಟಾರಕರನ್ನು ಹಳಮುಖನೆಂಬ ಪಾರ್ವ ಸುಡುತ್ತಾನೆ. ನಂತರ ಪಶ್ಚಾತ್ತಾಪ ಹೊಂದಿ ಜೈನನಾಗಿ ಪರಿವರ್ತಿತನಾಗುತ್ತಾನೆ"**[49].

ಮತ್ತೊಂದು ಘಟನೆಯಲ್ಲಿ **"ವರ್ಧಮಾನ ಭಟ್ಟಾರಕರಿಗೆ ಕೇವಲ ಜ್ಞಾನೋದಯವಾಗುತ್ತದೆ.ಆ ಸಮಯದಲ್ಲಿ ಅವರಿಂದ ಧರ್ಮವನ್ನು ಕೇಳಿದ ಇಂದ್ರಭೂತಿ ಎನ್ನುವ ಬ್ರಾಹ್ಮಣನು, 500 ಬ್ರಾಹ್ಮಣ ಕುಮಾರರೊಡನೆ ಜಿನಧೀಕ್ಷೆಯನ್ನು ಹೊಂದುತ್ತಾನೆ"[50]**.

ಹೀಗೆ ನಮಗೆ ಸಿಗುವ ಬಹುಪಾಲು ಮತಾಂತರ ಪ್ರಸಂಗಗಳೆಲ್ಲವೂ ಮೇಲುವರ್ಗದವರೇ.ಮತ್ತೊಂದು ಪ್ರಮುಖ ಅಂಶವೆಂದರೆ ಈ ಮತಾಂತರದ ಜೊತೆ ಅವರನ್ನು ಧರ್ಮಪ್ರಚಾರಕರನ್ನಾಗಿ ಬಳಸಿಕೊಳ್ಳಲಾಗುತ್ತಿತ್ತು.ಈ ಹಿಂದೆ ಹೇಳಿದ ಇಂದ್ರಭೂತಿ ಬ್ರಾಹ್ಮಣ ಮತ್ತು 500 ಕುಮಾರರ ಕತೆಯಲ್ಲಿ, ಅದು ಮುಂದುವರೆದಂತೆ ಅವರನ್ನು ಮತಾಂತರ ಪ್ರಚಾರಕ ಶಕ್ತಿಯನ್ನಾಗಿ ಬಳಸಲಾಗುತ್ತದೆ.ಭದ್ರಬಾಹು ಭಟ್ಟಾರಕರ ಕತೆಯಲ್ಲಿಯೂ ಹೀಗೆ ಅನ್ಯಧರ್ಮದವರನ್ನು ಬಳಸಿ ಧರ್ಮಪ್ರಚಾರ ಮಾಡಿದುದನ್ನು ನೋಡಬಹುದು[51]. ಪಂಡಿತ ಸೋಮಶರ್ಮನ ಮಗನಾದ ಭದ್ರಬಾಹುವನ್ನು ಗೋವರ್ಧನ ಭಟ್ಟಾರರು ವಿದ್ಯೆ ಕಲಿಸುವ ಸಲುವಾಗಿ ಅವರಿಂದ ಪಡೆಯುತ್ತಾನೆ. ಸಕಲ ವಿದ್ಯೆಗಳನ್ನು ಕಲಿಸಿದ ಮೇಲೆ ಅವನು ಧೀಕ್ಷೆ ನೀಡಿರೆಂದು ಕೇಳಿದಾಗ **"ನಿನ್ನ ವಿದ್ಯೆಯಿಂದ ದಶದಿಶೆಯಲ್ಲಿಯೂ ಪಂಡಿತರನ್ನು ವಾದಮಾಡಿ ಗೆದ್ದು ಬಾ"** ಎಂದು ಆ ಗೋವರ್ಧನ ಭಟ್ಟಾರರು ಹೇಳುತ್ತಾರೆ. ಆತನು ಅದರಂತೆ ಮಾಡಲು ಕೊನೆಗೆ ಆತನಿಗೆ ಧೀಕ್ಷೆಯನ್ನು ನೀಡಲಾಗುತ್ತದೆ. ಮತ ಪ್ರಚಾರದ ಎರಡು ಬಗೆಗಳನ್ನು ನಾವಿಲ್ಲಿ ಗಮನಿಸಬಹುದು. ಅನ್ಯ ಮತೀಯರ ಮಕ್ಕಳನ್ನು ವಿದ್ಯೆಯ ನೆಪದಲ್ಲಿ ತಮ್ಮ ಧರ್ಮವನ್ನು ಅವರ ತಲೆಯಲ್ಲಿ ತುಂಬುವುದು ಒಂದು ಬಗೆಯಾದರೆ, ಅನ್ಯ ಮತೀಯರನ್ನು ಬಳಸಿಕೊಂಡು ಮತಪ್ರಚಾರ ಮಾಡುವುದು ಇನ್ನೊಂದು ಬಗೆ. ಮೊದಲ ಬಗೆಗೆ ಉದಾಹರಣೆಯನ್ನು ಭಾರತದಲ್ಲಿ ಬ್ರಿಟೀಷರ ಕಾಲದಲ್ಲಿದ್ದ ಮತ್ತು ಈಗಲೂ ಇರುವ ಕ್ರೈಸ್ತ ಮಿಷನರಿ ಶಾಲೆಗಳನ್ನು ನೋಡಬಹುದು. ಜೊತೆಗೆ ವೈದಿಕ ಶಿಕ್ಷಣ ಸಂಸ್ಥೆಗಳನ್ನು ಈ ಸಾಲಿನಲ್ಲಿ ಸೇರಿಸಬಹುದು.

ಅನ್ಯಧರ್ಮೀಯರ ಉಪದೇಶಕ್ಕೂ ಪ್ರಭಾವಕ್ಕೂ ಒಳಗಾಗದಿದ್ದರೂ ಸಹ, ವಾತಾವರಣದ ದೆಸೆಯಿಂದ ಅನ್ಯಮತಗಳಲ್ಲಿ ಆಸಕ್ತಿಹೊಂದುವ ಪ್ರಸಂಗಗಳನ್ನೂ ನಾವು ನೋಡಬಹುದು. ಈ ಕತೆ ಧರ್ಮಾಮೃತದ್ದು[52]. ಸಂತಪರಾಜನಿಗೆ ಪುರೋಹಿತ ಸೋಮದತ್ತ. ಈತನ ಹೆಂಡತಿ ಯಜ್ಞದತ್ತೆ.ಈಕೆ ಗರ್ಭವತಿಯಾದಾಗ ಜಿನಮಂದಿರಗಳಿಗೆ ಹೋಗಿ ಪೂಜೆ ಸಲ್ಲಿಸುವ ಆಸೆಯಾಯಿತು. ಆದರೆ ತನ್ನ ಕುಲವಾಗಲೀ ಗಂಡನ ಕುಲವಾಗಲೀ ಜಿನಮತವನ್ನು ಕನಸಿನಲ್ಲಿಯೂ ಕಂಡರಿಯರು ಎಂಬ ಯೋಚನೆ ಆಕೆಯದು.ಈನಪೂಜೆ, ಸವಣ, ಜಿನಾಲಯ, ಜೈನರೆಂದರೆ ಉತ್ಸಾಹಗೊಳ್ಳುತ್ತಿದ್ದಳು. ಮಿಕ್ಕೆಲ್ಲ ವಿಷಯಗಳಿಗೂ ನಿರುತ್ಸಾಹ ಇರುತ್ತಿದ್ದಳು. ಈ ಕಾರಣ ದಿನೇ ದಿನೇ ಸೊರಗ ಹತ್ತಿದಳು. ಕಾರಣ ತಿಳಿಯದೆ ಸೋಮದತ್ತನಿಗೂ ಇದು ಚಿಂತೆಯಾಯಿತು. ಈ ಕುರಿತು ಸೋಮದತ್ತೆಯನ್ನು ಪೀಡಿಸಿದಾಗ ಆಕೆ ಅಕಾಲದಲ್ಲಿ ಮಾವಿನಹಣ್ಣನ್ನು ಬೇಡುತ್ತಾಳೆ. ಇದನ್ನು ಹುಡುಕಿ ಹೊರಟ ಸೋಮದತ್ತನಿಗೆ ಸುಮತಿ

ಭಟ್ಟಾರಕರಿಂದ ತನ್ನ ಪೂರ್ವಜನ್ಮದ ಕತೆ ತಿಳಿಯುತ್ತದೆ. ಇದರಿಂದ ಜೀವ ಇಲ್ಲ ಎನ್ನುವ ಕುಮತವನ್ನು ಬಿಟ್ಟು, ಜೀವ ಇದೆ ಎನ್ನುವ ಜಿನಮತದಲ್ಲಿ ನಂಬಿಕೆ ನಾಟಿ ಜೈನನಾಗುತ್ತಾನೆ. ಇಲ್ಲಿ ಮತಾಂತರ ಪ್ರಕ್ರಿಯೆಯು ಬೇರೆಯದೇ ಒಂದು ಮಾರ್ಗದ ಮೂಲಕ ನಡೆಯುವುದನ್ನು ತೋರಿಸಲಾಗಿದೆ. ಆಗಿನ ಪರಿಸರದಲ್ಲಿ ಇವೆಲ್ಲವೂ ಜನರ ಮಾನಸಿಕತೆಯನ್ನು ನಿರ್ಧಾರ ಮಾಡುತ್ತಿದ್ದವು. ಇಲ್ಲಿ ಕುಮತ ಎನ್ನುವ ಮಾತೊಂದು ಬಂತು. **'ಕುಮತಾಗಮಾಚರಣತ್ವ'**ವನ್ನು ಪ್ರತಿಮತವು ನಿವಾರಿಸಲು ಬಯಸಿದೆ. ಪ್ರತಿ ಮತಕ್ಕೂ ಅನ್ಯಮತವು ಯಾವಾಗಲೂ ಕುಮತವೇ. ಇಂತಹ ಕುಮತವನ್ನು ಬಿಟ್ಟುಹೋದ ಸೋಮದತ್ತನನ್ನು ಇವನ ಬಂಧುಗಳು **'ಪಡೆಯಲು ದುಸ್ತರವಾದ ಬ್ರಾಹ್ಮಣಧರ್ಮವನ್ನು'** ಬಿಟ್ಟು ಹೋದುದಕ್ಕೆ ಹಂಗಿಸುತ್ತಾರೆ. ಇಲ್ಲಿ ಜಾತಿ ಶ್ರೇಷ್ಠತೆಯೆನ್ನುವುದು ಎಲ್ಲರಲ್ಲೂ ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನು ನೋಡಬಹುದು.

ಇಂತದ್ದೇ ಪರಿಸರದ ಇನ್ನೊಂದು ಕತೆಯಿದೆ[53]. ಮಾಣಿಕಶೆಟ್ಟಿ.ಈತನ ಹೆಂಡತಿ ಕರಿಕಾಲಮ್ಮ. ಈಕೆಗೆ ಶಿವಭಕ್ತಿಯಲ್ಲಿ ಒಲವು ಮೂಡುತ್ತದೆ.ಜೈನ ಮನೆತನದವಳಾದ ಈಕೆಯಲ್ಲಿ ಶಿವನ ಕುರಿತಾದ ಭಕ್ತಿ ಮೂಡಲಿಕ್ಕೆ ಶೈವ ಪರಿಸರವೇ ಕಾರಣವಾಗಿರಬೇಕು. ಈಕೆ ಊರವರಿಗೂ ಮನೆಯವರಿಗೂ ತಿಳಿಯದಂತೆ, ಅಡುಗೆಮನೆಯನ್ನು ಶಿವಾಲಯವನ್ನಾಗಿ ಮಾಡಿಕೊಂಡು ಶಿವನನ್ನು ಪೂಜಿಸುತ್ತಿರುತ್ತಾಳೆ. ಈಕೆಯ ಗುಪ್ತಭಕ್ತಿಯನ್ನು ಶಿವನಿಗೆ ತಿಳಿಸಲು ಶಿವನೇ ಬರುತ್ತಾನೆ. ಈಕೆಯ ಗಂಡನು ಈಕೆಗೆ ಕೊಟ್ಟುಹೋಗಿದ್ದ ಹಣ್ಣನ್ನು ಈಕೆಯು ಭಕ್ತರೂಪದ ಶಿವನಿಗೆ ಕೊಟ್ಟಿದರಿಂದ ಗಂಡ ಹೆಂಡತಿಯರಲ್ಲಿ ಕಲಹವಾಗುತ್ತದೆ. ಕೊನೆಗೆ ಈಕೆಯ ಶಿವಭಕ್ತಿ ಗಂಡನಿಗೆ ಅರ್ಥವಾಗಿ ಆತನೂ ಸಹ ಶಿವನಿಗೆ ತಲೆಬಾಗುತ್ತಾನೆ. ಕವಿ ಈಕೆಯನ್ನು **'ಗುಪ್ತಮಾಹೇಶ್ವರಿ'** ಎಂದು ಕರೆಯುತ್ತಾನೆ. ಅಂದಿನ ಕಾಲದಲ್ಲಿ ಇಂತಹ ಗುಪ್ತಮಾಹೇಶ್ವರಿಯರ ಸಂಖ್ಯೆ ಅಧಿಕವಾಗಿಯೇ ಇರಬೇಕು. ಹೆಂಡತಿಯು ಗಂಡನ ಮತ್ತು ಆತನ ಮನೆಯವರ ಧರ್ಮವನ್ನು ಅನಿವಾರ್ಯವಾಗಿ ಹಿಡಿಯಬೇಕಾದಂತಹ ಸಮಯಗಳಲ್ಲಿ ಇಂತಹ ಪರಿಸ್ಥಿತಿ ಮಹಿಳೆಯರಿಗೆ ಉಂಟಾಗುತ್ತದೆ. ಕೆಲವೊಮ್ಮೆ ಅಂತರ್ಜಾತಿ ವಿವಾಹವೂ ಸಹ ಇದಕ್ಕೆ ಕಾರಣ. ಮತ್ತು ಇಂತಹವರಿಂದ ಕೆಲವೊಮ್ಮೆ ಮತಪ್ರಚಾರದ ಕಾರ್ಯವೂ ಸಹ ನಡೆಯುತ್ತಿತ್ತು. ತತ್ವಾದರ್ಶಗಳಿಗಿಂತ ಹೆಚ್ಚಾಗಿ, ಗಂಡು ಹೆಣ್ಣಿನ ನಡುವಿನ ಆಕರ್ಷಣೆಯು ಇಲ್ಲಿ ಹೆಚ್ಚು ಕ್ರಿಯಾಶೀಲವಾಗಿರುತ್ತದೆ. ಅನ್ಯಮತೀಯರಾದ ಗಂಡ ಹೆಂಡತಿಯರ ನಡುವೆ ಈ ರೀತಿಯ ಪರಸ್ಪರ ಪ್ರಭಾವಳಿಯನ್ನು ಈ ಹಿಂದೆಯೆ ನೋಡಲಾಗಿದೆ. ಆದರೆ ಇಲ್ಲಿ ಪ್ರಭಾವದ ಪ್ರಯತ್ನ ಬೀರುವಿಕೆಗಿಂತ ಹೆಚ್ಚಾಗಿ ಪರಸ್ಪರ ಮತದ ಬಗೆಗಿನ ಅಸಹನೆಯು ಹೆಚ್ಚಿದೆ. ಇಂತಹ ಹಲವು ಅಸಹನೆಯ ಸಮಯಗಳಲ್ಲಿ ಸಮಯಗಳ ಮಧ್ಯೆ ನಿರ್ಧಾರಕವಾದ ಒಂದು ಅಂತ್ಯವು ಕೆಲವೊಮ್ಮೆ ಬೇಕಾಗುತ್ತದೆ. ಬಹುತೇಕ ಅಂತ್ಯಗಳು ಗಂಡ ಹೆಂಡತಿಯ ಧರ್ಮವನ್ನು ಸೇರುವಲ್ಲಿ ಇಲ್ಲವೇ ಹೆಂಡತಿ ಗಂಡನ ಧರ್ಮ ಸೇರುವಲ್ಲಿ ಕೊನೆಯಾಗುತ್ತವೆ.

ಇಂತಹ ಸಂಧರ್ಭವನ್ನು ಹೊಂದಿದ ಮತ್ತು ಇಂತಹ ಅಂತ್ಯವನ್ನು ಹೊಂದಿದ ಒಂದು ಕತೆಯಿದೆ.ಅದು ಹೇರೂರು ಹೆಣ್ಣಿನ ಕತೆ[54]. ಈಕೆಯ ಹೆಸರು ಹೇರೂರು ಹೆಂಗಸು. ಈಕೆಯ ತಂದೆಯ ಹೆಸರು ಶಿವಭಕ್ತ. ಈ ಕತೆಯಲ್ಲಿ ಎರಡು ಅಂತರ್ಜಾತಿ ವಿವಾಹಗಳು ದಾಖಲಾಗಿವೆ. ಈ ಶಿವಭಕ್ತನ ತಂಗಿಯನ್ನು ಜೈನನೊಬ್ಬನಿಗೆ ಮದುವೆ ಮಾಡಿ ಕೊಟ್ಟಿರಲಾಗಿರುತ್ತದೆ. ಆಕೆಯ ಪ್ರತಿರೋಧ ಕತೆಯಲ್ಲಿ ಎಲ್ಲಿಯೂ ದಾಖಲಾಗಿಲ್ಲ. ಬಹುಶ ಈ ರೀತಿಯ ಮದುವೆಗಳು ಅಂದು ಸಾಮಾನ್ಯವಾಗಿರಬೇಕು. ಮತ್ತು ತನ್ನ ಮತಾಚರಣೆಯಲ್ಲಿಯೂ ಸಹ ಈಕೆಯು ಯಾವುದೇ ತೊಂದರೆಯನ್ನು ಅನುಭವಿಸಿದ್ದು ಸಹ ಕತೆಯಲ್ಲಿ ದಾಖಲಾಗಿಲ್ಲ. ಇಷ್ಟೇ ಅಲ್ಲದೆ ಈಕೆಯು ತನ್ನ ಅಣ್ಣನ ಬಳಿಬಂದು ಹೇರೂರು ಹೆಂಗಸನ್ನು ತನ್ನ ಮಗನಿಗೆ ಕೊಡುವಂತೆ ಕೇಳುತ್ತಾಳೆ. ಹೀಗೆ ಈಕೆ ಕೇಳುವುದನ್ನು ನೋಡಿದರೆ ಮತಾಚರಣೆಯ ವಿಷಯದಲ್ಲಿ ಅವರ ಮನೆಯಲ್ಲಿ ಎಲ್ಲವೂ ಸರಿಯಿರಬೇಕೆಂದು ತೋರುತ್ತದೆ. ಇದಕ್ಕೆ ಶಿವಭಕ್ತನು ಒಪ್ಪುವುದಿಲ್ಲ. **'ಭವಿಗಳಿಗೆ'** ಮಗಳನ್ನು ಕೊಡುವುದಿಲ್ಲ ಎನ್ನುತ್ತಾನೆ. ತಂಗಿಯನ್ನು 'ಭವಿ'ಗಳಿಗೆ ಕೊಡುವಾಗ ಇಲ್ಲದ ಪ್ರತಿರೋಧವು ಮಗಳನ್ನು ಕೊಡುವಾಗ ಬರುತ್ತದೆ.ಕೊನೆಗೆ ತಂಗಿಯ ಒತ್ತಾಯಕ್ಕೆ ಮಣಿದು ಆ ಹೆಂಗೂಸನ್ನು **'ಜೈನನಾದ ಅಳಿಯ'**ನಿಗೆ ಕೊಡುತ್ತಾನೆ.

ಇಲ್ಲಿ 'ಜೈನನಾದ ಅಳಿಯ' ಎನ್ನುವಲ್ಲಿ, ಅವನಿಗೆ ಮನೆತನದಿಂದಾಗಿ ಜೈನಧರ್ಮ ಪ್ರಾಪ್ತವಾಯಿತೋ ಇಲ್ಲಾ ತಂದೆಯಿಂದಾಗಿ ಜೈನಧರ್ಮೀಯನಾದನೋ ಇಲ್ಲಾ ಅವನೇ ಜೈನನಾದನೋ ಎನ್ನುವುದನ್ನು ಕತೆ ಹೇಳುವುದಿಲ್ಲ. ಇನ್ನೊಂದು ಅಂಶವೆಂದರೆ ಈ ಮದುವೆ ಆ ಹೆಂಗೂಸಿಗೆ ಇಷ್ಟವಿಲ್ಲ. ಆಕೆ ಇವರನ್ನು 'ಭವಿ'ಗಳೆಂಬ ಕಾರಣಕ್ಕೆ ವಿರೋಧಿಸುತ್ತಾಳೆ. ತನ್ನ ತಂದೆಯ ತಂಗಿಯು ಅಂದರೆ ತನ್ನ ಅತ್ತೆಯು ಮಾಡದ ವಿರೋಧವನ್ನು ಈಕೆ ಮಾಡುತ್ತಾಳೆ. ಇಲ್ಲಿ ಗ್ರಹಿಸಬೇಕಾದ ಅಂಶವೆಂದರೆ ಆ 'ಭವಿ'ಗಳ ಮನೆಯಲ್ಲಿ ಎಲ್ಲವೂ ಸರಿಯಿದ್ದ ಪಕ್ಷದಲ್ಲೇ ಆಕೆಯು ತನ್ನ ಅಣ್ಣನಿಗೆ ಮಗಳನ್ನು ಕೊಡಲು ಕೇಳಿರುತ್ತಾಳೆ.ಒಟ್ಟಿನಲ್ಲಿ ಆ ಹೆಂಗೂಸು ಈ ಮದುವೆಯನ್ನು ವಿರೋಧಿಸುತ್ತಾಳೆ. ಮನೆಯವರು ಈ ವಿರೋಧಕ್ಕೆ ಮಣಿಯದಿದ್ದಾಗ ಆಕೆ ಶಿವನಲ್ಲಿ ಬಂದು ಹೀಗೆ ಬೇಡುತ್ತಾಳೆ

**"ದೇವ ಬವಿಗುರುದೆನ್ನನೊಯ್ದು ಕೊಟ್ಟಪರಯ್ಯ**

**ದೇವ ಸವಣಂಗೆ ಹೆಂಡತಿ ಮಾಡಿಪರಯ್ಯ**

**ಬವಿಯ ನಾನೆಂತು ನೋಡುವೆನಯ್ಯಾ ಶಂಕರಾ**

**ಬವಿಯ ಕೂಟಂ ಕಾಳಕೂಟದಿಂ ಪಿರಿದೆನಗೆ**

**ಬವಿಯ ಸಂಸರ್ಗ ದಳ್ಳುರಿಯ ಸಂಗವದೆನಗೆ**

**ಬೆಳಗಿನೊಳಗಿರ್ದು ಕತ್ತಲೆಯೊಳಿರಲಾರ್ಪೆನೆ**

**ತಿಳಿವಿನೊಳಗಿರ್ದುದಜ್ಞಾನಕೊಳಗಪ್ಪನೇ**

**ಅಮೃತದೊಳಗಿರ್ದು ವಿಷದೊಳಗೆ ಪುಗಲಾರ್ಪೆನೆ**

**ಬವಿಗೆ ಹೆಂಡತಿಯಪ್ಪ ಹೆಣ್ಣಿಂದವೇಕೆನೆಗೆ**

**ಬವಿಯೊಡನೆ ಬೆರಸುವ ಶರೀರವಿಂತೇಕೆನಗೆ...."** ಎಂದು ಇನ್ನೂ ಮುಂತಾಗಿ ಆಕೆ ಶಿವನಲ್ಲಿ ಪರಿತಪಿಸುತ್ತಾಳೆ. ಆದರೆ ಈಕೆ ತಿಳಿದಂತೆ ಅವರು ಭವಿಗಳಾಗಿರಬಹುದು. ಆದರೆ ಅನ್ಯಸಮಯ ದ್ವೇಷಿಗಳಾಗಿರಲಿಲ್ಲ. ಇದನ್ನು ಸಾಬೀತುಪಡಿಸುವ ಅನೇಕ ಪ್ರಸಂಗಗಳು ಇಲ್ಲಿಯವರೆಗಿನ ಕತೆಗಿಂತ ಹಿಂದೆಯೂ ನಡೆದಿವೆ. ಮತ್ತು ಈಕೆಯ ವಿಷಯದಲ್ಲು ನಡೆದವು. ಮದುವೆಯ ನಂತರ ಗಂಡನ ಮನೆಗೆ ಅರಣ್ಯದ ಹಾದಿಯಲ್ಲಿರುವಾಗ ಈಕೆಯ ನೇಮವನ್ನು ಮುರಿಯಬಾರದೆಂದು ಅವರು ಕಷ್ಟಪಟ್ಟು ಆ ಕಾಡಿನಲ್ಲಿ ಶಿವಾಲಯವನ್ನು ಹುಡುಕುತ್ತಾರೆ. ಆದರೂ ಈ ಮದುವೆ ಸಂಬಂಧವನ್ನು ಆ ಯುವತಿ ಉಳಿಸಿಕೊಳ್ಳುವುದಿಲ್ಲ. **'ಸವಣರ ನಿಬ್ಬಣವನು ವಾಪಾಸ್ಸು ಕಳಿಸಲಾಯಿತು'** ಎನ್ನುವಲ್ಲಿಗೆ ಕತೆಯು ಮುಗಿಯುತ್ತದೆ.

ಹೀಗೆ ಈ ಮತಾಂತರ ಪ್ರಕ್ರಿಯೆಗಳು ಪ್ರಾಚೀನ ಕಾಲದಿಂದಲೂ ಹಿಡಿದು ಇಂದಿನವರೆಗೂ ನಡೆದುಬಂದಿರುವುದನ್ನು ನಾವು ನೋಡುತ್ತೇವೆ. ಹೀಗೆ ದೇಶೀಯವಾಗಿ ಉದಿಸಿದ ಧರ್ಮಗಳಷ್ಟೇ ಅಲ್ಲದೆ ಹೊರಗಡೆಯಿಂದ ಬಂದ ಕ್ರೈಸ್ತ, ಇಸ್ಲಾಂ ಮುಂತಾದ ಧರ್ಮಗಳೂ ಸಹ ಆ ನಂತರದಲ್ಲಿ ಇಲ್ಲಿ ಮತಾಂತರದಲ್ಲಿ ತೊಡಗಿಕೊಂಡವು.ಸುಮ್ಮನೆ ನೋಡುವುದಾದರೆ ಇಸ್ಲಾಮ್ ಗೆ ಸಂಬಂಧಿಸಿದ ಕ್ರಿಶ 1664ರ ಬೀದರ್‌ನ ಶಾಸನವೊಂದು ಹೇಳುವಂತೆ[55]

**"ನಮ್ಮ ಜೊತೆಯಲ್ಲಿರುವಾಗ ನೀನು ಇಮ್ಮನ ಮುಮ್ಮನವಾಗಿರದೆ ಏಕಮನಸ್ಕನಾಗಿರು. ದೇವರಲ್ಲದ ಅದರಿಂದ ಹೃದಯವನ್ನು ಹಗುರಗೊಳಿಸು. ನಿನ್ನ ಉತ್ಕಟೇಚ್ಚೆಯು ಫಲಪ್ರದವಾಗದಿದ್ದಾಗ ನೀನು ದೂರಬೇಡ. ಒಂದು ಮುಂಜಾನೆ ನಮ್ರಮನಸ್ಕನಾಗಿ ನನ್ನ ಬಾಗಿಲ ಬಳಿಬಾ"** ಎಂದು ಅದು ಕರೆಕೊಡುತ್ತದೆ.ಸೋಲಾಕಂಬ ಮಸೀದಿಯ ಗೋಡೆಯ ಕಲ್ಲಿಗೆ ಕೆತ್ತಲ್ಪಟ್ಟಿದೆ.

ಸರಿಸುಮಾರು ಇದೇ ಸಮಯದ ಇನ್ನೊಂದು ಶಾಸನವು ಹೇಳುವಂತೆ[56] ಶಿವಪ್ಪನಾಯಕನು ತನ್ನ ರಾಜ್ಯದಲ್ಲಿ ಕ್ರೈಸ್ತರಿಗೆ ಉಪದೇಶ ಮಾಡುವ ಮತ್ತು ಮತಾಂತರಗೊಳಿಸುವ ಅವಕಾಶವನ್ನೂ ನೀಡಿದ್ದ. ಇದು ಪರಮತ ಸಹಿಷ್ಣುತೆಗೆ ಒಂದು ಉತ್ತಮ ಉದಾಹರಣೆ. ಮತ್ತವನ ಪ್ರಾದೇಶಿಕ ಪ್ರಜ್ಞೆಯು

ಸಹ ಹೇಗಿತ್ತೆಂದರೆ ಅವರ ಚರ್ಚುಗಳಿಗೆ ಭಾರತೀಯರು ಮಾತ್ರವೇ ಅಧಿಕಾರಿಗಳಾಗಿರಬೇಕೆಂಬ ಕಟ್ಟಳೆಯನ್ನು ವಿಧಿಸಿದ್ದನಂತೆ.

ಒಟ್ಟಿನಲ್ಲಿ ಈ ಮತಾಂತರ ಎನ್ನುವಂತಹ ಕ್ರಿಯೆಯು ಧರ್ಮಗಳು ಇರುವವರೆಗೂ ಮುಂದುವರೆಯುವಂತಹುದ್ದಾಗಿದೆ. ಪ್ರತಿ ಹೊಸಧರ್ಮದ ಹುಟ್ಟು ಮತಾಂತರದಿಂದಲೇ ಮತ್ತು ಪ್ರತಿಧರ್ಮದ ಅಳಿವೂ ಸಹ ಮತಾಂತರದಿಂದಲೇ. ಕಾಲ ಬದಲಾದಂತೆ ಮತಾಂತರದಲ್ಲಿಯ ಸ್ವರೂಪಗಳು ಬದಲಾಗುತ್ತವೆ ಅಷ್ಟೆ. ಧರ್ಮವಲ್ಲದ ಧರ್ಮವೊಂದರಿಂದಷ್ಟೇ ಈ ಮತಾಂತರವು ನಿಲ್ಲಬಹುದೇನೋ.

**ಅಡಿಟಿಪ್ಪಣಿಗಳು**

1. ಭಗವದ್ಗೀತೆ ಶ್ಲೋಕ
2. ಋ.ಎಥ.ಎ.117– ಕ್ರಿಶ 1055
3. ಕನ್ನಡ ಸಾಹಿತ್ಯ ಪರಿಷತ್ ನಿಘಂಟು
4. ಸಮಯಪರೀಕ್ಷೆ, ಪ್ರಥಮ ಆಶ್ವಾಸ, 59
5. ಮಾರ್ಗ 1, ಎಂ ಎಂ ಕಲಬುರಗಿ
6. ವಡ್ಡಾರಾಧನೆ , ಸುಕುಮಾರಸ್ವಾಮಿಯ ಕತೆ
7. ಅದೇ
8. ಅದೇ
9. ಅಂಬೇಡ್ಕರ್ ಸಮಗ್ರ ಸಂಪುಟ–3, ಪು 345
10. ಅದೇ ಪು 448
11. ಜಿ ಎಸ್ ಗಾಯಿ ಅವರ ಸಂಶೋಧನಾ ಲೇಖನಗಳು, ಸಂ– ಟಿ ವಿ ವೆಂಕಟಾಚಲ ಶಾಸ್ತ್ರಿ
12. ಕಬ್ಬಿಣ ಮತ್ತು ಧಾರ್ಮಿಕ ಕ್ರಾಂತಿ
13. ನೇಗಿನಹಾಳು ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿವಿ
14. ರಾಮಕಟ್ಟಿದ ಬಸದಿಗಳು *******
15. ಮಾರ್ಗ 1, ಎಂ ಎಂ ಕಲಬುರಗಿ
16. ಅಂಬೇಡ್ಕರ್ ಸಮಗ್ರ ಸಂಪುಟ–, ಪು 259
17. ಸ್ವಾಮಿ ವಿವೇಕಾನಂದ ಕೃತಿಶ್ರೇಣಿ 1
18. ಸ್ಥಿತೀಕರಣ, ಧರ್ಮಾಮೃತ
19. ಅದೇ
20. ಇರಿಭಕ್ತಯ್ಯನ ರಗಳೆ – ಹರಿಹರನ ರಗಳೆಗಳು, ಸಂ– ಎಂ ಎಂ ಕಲಬುರಗಿ
21. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ï ಚಿದಾನಂದಮೂರ್ತಿ
22. ಆದಿಪುರಾಣ, 9–81
23. ಪೃಥ್ವಿಯೊಳಡಗಿದ ಘಟವು ï ಮನು ವಿ ದೇವದೇವನ್
24. ನವಮಾಧಿಕಾರ, ರಾಜಾವಳೀ ಕಥಾಸಾರ , ದೇವಚಂದ್ರ

25. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಪು 152, (ಸೋಮನಾಥ ಚರಿತ್ರೆ ರಾಘವಾಂಕ)
26. ಅಷ್ಟಧ್ಯಾಯ, ರಾಜಾವಳೀ ಕಥಾಸಾರ , ದೇವಚಂದ್ರ
27. ನವಮಾಧಿಕಾರ, ರಾಜಾವಳೀ ಕಥಾಸಾರ , ದೇವಚಂದ್ರ
28. ಬ, ಚಿದಾನಂದ ಮೂರ್ತಿ , ಪು 105
29. ನಾರಾಯಣಪುರ, ಬೀದರ್, ಕ್ರಿಶ 1129, ಪು 57
30. ನೇಗಿನಹಾಳು ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿವಿ
31. ಕೊಪ್ಪಳ ಜಿಲ್ಲೆಯ ಶಾಸನಗಳು
32. ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಸಂಶೋಧಕ–ಬಾಬುರಾಯ ದೊರೆ
33. ರಾಜಾವಳೀ ಕತಾಸಾರ, ನವಮೋಧ್ಯಾಯ
34. ಸಮಯಪರೀಕ್ಷೆ, ಬ್ರಹ್ಮಶಿವ, ಸಂ– ಬಿ ಎಸ್ ಕುಲಕರ್ಣಿ, 1958, ಡಾ
35. ಸಂ–ಕಲಬುರ್ಗಿ ಎಂ ಎಂ, 2001, ಪು 104
36. ಹರಿಹರನ ಕಾವ್ಯದಲ್ಲಿ ಸ್ತ್ರೀ ಪಾತ್ರ ದರ್ಶನ, (ಪುರಾತನರ ರಗಳೆಗಳು–ಪು 598–99)
37. ಸತ್ಯ, ಧರ್ಮಾಮೃತ
38. ವಾತ್ಸಲ್ಯ, ಧರ್ಮಾಮೃತ
39. ಸಮ್ಯಕ್‌ದರ್ಶನ, ಧಮಾಮೃತ
40. ಈ ಟಿಪ್ಪಣಿಯನ್ನು ತೆಗೆದುಕೊಂಡಿಲ್ಲ
41. ಸಮಯಪರೀಕ್ಷೆ, 1–60
42. ಸ ಪ ಮತ್ತು ಧ ಪ, ಸಾಂಸ್ಕೃತಿಕ ಅಧ್ಯಯನ ಪೀಠಿಕೆ, ಎ ಮುರಿಗೆಪ್ಪ
43. ನವಮಾಧಿಕಾರಂ, ರಾಜಾವಳೀ ಕಥಾಸಾರ , ದೇವಚಂದ್ರ
44. ವಾಗೀಶ್ವರ ದೇವರ ರಗಳೆ, ಹರಿಹರ
45. ಆದಿಪುರಾಣ ಪು 88
46. ಪ್ರಾಚೀನ ಕನ್ನಡ ಗದ್ಯ ಕೃತಿಗಳ ಸಾಂಸ್ಕೃತಿಕ ಅಧ್ಯಯನ ಪು 178
47. ಮಾರ್ಗ ಸಂಪುಟ ಮೂರು, ಯಮ್ ಯಮ್ ಕಲಬುರಗಿ
48. ಲಲಿತಘಟೆಯ ಕತೆ, ವಡ್ಡಾರಾಧನೆ
49. ಗುರುದತ್ತ ಭಟಾರರ ಕತೆ, ವಡ್ಡಾರಾಧನೆ
50. ವರ್ಧಮಾನ ಭಟ್ಟಾರಕರ ಕತೆ, ವಡ್ಡಾರಾಧನೆ

51. ಭದ್ರಬಾಹು ಭಟ್ಟಾರರ ಕತೆ, ವಡ್ಡಾರಾಧನೆ

52. ವಾತ್ಸಲ್ಯ, ಧರ್ಮಾಮೃತ

53. ಮಹಾಪುರುಷೆ ಕರಿಕಾಲಮ್ಮೆ, ಪುರಾತನರ ರಗಳೆಗಳು, ಸುಂಕಾಪುರ, ಖ10

54. ಹೆರೂರು ಹೆಣ್ಣಿನ ರಗಳೆ, ನೂತನ ಪುರಾತನರ ರಗಳೆ, ಸುಂಕಾಪುರ, ಖ10

55. ಬೀದರ್, ಬೀದರ್, 1664, ಪು 143

56. ಮಧ್ಯಕಾಲೀನ ಕರ್ನಾಟಕ, ಸಂ–ಶ್ರೀನಿವಾಸ ಹಾವನೂರು, ಪು 132

57. ದಲಿತರು ಮತ್ತು ಮತಾಂತರ ಒಂದು ಚಿಂತನೆ, ಚಿನ್ನಸ್ವಾಮಿ ಸೋಸಲೆ

58. ಅದೇ

### ಆ) ಧಾರ್ಮಿಕ ವಾಗ್ವಾದಗಳು :–

ಎರಡು ಇದ್ದಲ್ಲಿ ಈ 'ಸಂಘರ್ಷ' ಎಂತೋ, ಅಂತೆಯೇ ಎರಡು ಇದ್ದಲ್ಲಿ ಈ ವಾದ–ವಿವಾದ. ಇಲ್ಲಿ ಭಾಗವಹಿಸುವವರು ತಮ್ಮದೇ ಒಂದು ನಿಲುವನ್ನು ಹೊಂದಿರುತ್ತಾರೆ. ಆ ನಿಲುವನ್ನು ಗೆಲ್ಲಿಸಲು ಸತತ ಪ್ರಯತ್ನ ಮಾಡುತ್ತಾರೆ. ಸೋಲು–ಗೆಲುವಿನ ಲೆಕ್ಕವು ಇಲ್ಲಿ ಅಂತಿಮ. ಈ ವಾದವು ಶುರುವಾಗುವುದಕ್ಕಿಂತ ಮುಂಚೆ ಅದಕ್ಕೊಂದು ಪಣವನ್ನು ಕಟ್ಟಿರುತ್ತಾರೆ. ಸೋತವರು ಮತ್ತು ಗೆದ್ದವರು ಆ ಪಣದ ಕರಾರಿನಂತೆ ನಡೆಯಬೇಕು. ಮನುಷ್ಯನು ಆಲೋಚಿಸಲು ಶುರುಮಾಡಿದಾಗಿನಿಂದ ಈ 'ವಾದ'ಗಳು ಇವೆ. ಭಾರತೀಯ ಜ್ಞಾನ ಪರಂಪರೆಯ ಬೇರು ಮತ್ತು ಶಿಖರ ಎಂದು ಕರೆಯುವ ಯಾವ ಉಪನಿಷತ್ತುಗಳಿವೆಯೋ, ಅವುಗಳು ಸಂಪೂರ್ಣವಾಗಿ ಈ ರೀತಿಯ ಎದುರು ಬದಿರಿನ ಸಂಭಾಷಣೆಗಳಿಂದಲೇ ಕೂಡಿದಂಥವು. ಉಪನಿಷತ್ತುಗಳ ಪ್ರತೀಕವಾದ ಭಗವದ್ಗೀತೆಯಲ್ಲಿಯೂ ಈ ವಾದದ ಸ್ವರೂಪವಿದೆ. ಯುದ್ಧ ಮಾಡಲಾರೆ ಎನ್ನುವ ಅರ್ಜುನನ ಅಭಿಪ್ರಾಯವು, ಮಾಡಲೇಬೇಕು ಎನ್ನುವ ಕೃಷ್ಣನ ಅಭಿಪ್ರಾಯವು ಸೇರಿ ಕೊನೆಯವರೆಗೂ ಭಗವದ್ಗೀತೆಯು ಸಂವಾದ ರೂಪದಲ್ಲಿ ಮುಂದುವರೆಯುತ್ತದೆ. ಯುದ್ಧ ಮಾಡುವುದಕ್ಕೆ ಸಮರ್ಥ ಕಾರಣಗಳನ್ನು ನೀಡಿದ ಕೃಷ್ಣನು ಇದರಲ್ಲಿ ಜಯಶಾಲಿಯಾಗುತ್ತಾನೆ. ಇದರಲ್ಲಿ ಪಣವನ್ನೇನು ಕಟ್ಟಿರಲಿಲ್ಲವಾದರೂ, ವಾದದಲ್ಲಿ ಸೋತ ಅರ್ಜುನನು, ಗೆದ್ದ ಕೃಷ್ಣನ ಸೂಚನೆಯಂತೆ ಯುದ್ಧದಲ್ಲಿ ತೊಡಗುತ್ತಾನೆ.

ಪ್ರತಿಯೊಂದು ವಿಚಾರದಲ್ಲಿಯೂ ವಾದ–ವಿವಾದವು ಇದ್ದೇ ಇರುತ್ತದೆ. ಧರ್ಮದಲ್ಲೂ ಕೂಡ. ಧರ್ಮದಲ್ಲಿ ಈ ವಾದ ವಿಚಾರಗಳು ತುಂಬಾ ಪ್ರಮುಖವಾದುದಾಗಿವೆ. ಒಂದು ಧರ್ಮಕ್ಕೆ ಜನಪ್ರಿಯತೆಯನ್ನು ತಂದುಕೊಡುವಲ್ಲಿ ಇದರ ಪಾತ್ರ ಮಹತ್ವದ್ದು. ಸಾಮಾನ್ಯವಾಗಿ ವಾದ–ವಿವಾದದ ಕಾರ್ಯಕ್ರಮಗಳು ನಡೆಯುವ ಜಾಗಗಳೆಂದರೆ ಜನರಿಂದ ಕೂಡಿರುತ್ತವೆ. ಅವರ ಸಾಕ್ಷಿಯಾಗಿ ನಡೆಯುವ ಇವುಗಳು ಗೆದ್ದ ಪಕ್ಷಕ್ಕೆ ಆ ಜನರನ್ನು ಆಕರ್ಷಿಸಲು ಸಹಾಯಕವಾಗುತ್ತವೆ. ಪ್ರಾಚೀನ ಕರ್ನಾಟಕದಲ್ಲಿ ಹೀಗೆ ವಾದ ಮಾಡುವ ಪಂಡಿತರ ಬಹುದೊಡ್ಡ ತಂಡವೇ ಇತ್ತು. ಇತರಧರ್ಮಗಳಿಗಿಂತಲೂ ಜೈನಧರ್ಮವು ವಾದದ ವಿಷಯದಲ್ಲಿ ಅದರ ಜಯದಲ್ಲಿ ಕೊಂಚ ಮುಂದೆಯೇ ನಿಲ್ಲುತ್ತದೆ. ಸಾಹಿತ್ಯ ಮತ್ತು ಶಾಸನದಲ್ಲಿ ದಾಖಲಾಗಿರುವ ಒಟ್ಟು ವಾದಿಗಳ ಸಂಖ್ಯೆಯಲ್ಲಿ ಇವರದೇ ಮೇಲಗೈ. ನಂತರದ್ದು ಶೈವರು. ಇತರ ಧರ್ಮಿಯರು ಸಹ ತಕ್ಕಮಟ್ಟದಲ್ಲಿದ್ದರು. ಆಯಾ ಧರ್ಮಗಳು ತಮ್ಮ ಧರ್ಮದ ಪರ ವಾದಮಾಡಿ ಗೆದ್ದವರನ್ನು ಹೇರಳವಾಗಿ ಅಭಿನಂದಿಸಿವೆ.

ಜೈನಧರ್ಮವನ್ನು ಪ್ರಸಾರ ಮಾಡಿ ಅದನ್ನು ಪ್ರಭಾವಗೊಳಿಸಿದವರಲ್ಲಿ ಗೋಪನಂದಿ ಒಬ್ಬನು. ಅವನನ್ನು ಶ್ರವಣಬೆಳಗೊಳದ ಶಾಸನವೊಂದು ಹೊಗಳಿದೆ. ಅದು ಹೀಗೆ ಹೇಳುತ್ತದೆ "ಸಾಂಖ್ಯ ಬಾಯಿ ಮುಚ್ಚು, ಭೌತಿಕವಾದಿ ಹಿಗ್ಗಿ ಹೆಮ್ಮೆ ಪಡಬೇಡ, ಬುದ್ಧಿವಂತ ಬೌದ್ಧ ತಲೆ ಮರೆಸಿಕೊ, ವೈಷ್ಣವ ಅಡಗು ಅಡಗು, ವಾಚಾಳಿಯಾದ ಚಾರ್ವಾಕ ನಿನ್ನ ಮದವನ್ನಳಿಸುವೆನು"[1]ಎಂದು ಮುಂತಾಗಿ ಹೇಳಲಾಗಿದೆ. ಇಲ್ಲಿ ಪಂಡಿತ ಗೋಪನಂದಿಯ ಸಾಮರ್ಥ್ಯವನ್ನು ಹೇಳಲಾಗಿದೆ. ಈತನು ಹೇಗೆ ತನ್ನ ವಾದ ಸಾಮರ್ಥ್ಯದಿಂದ ಇತರ ಧರ್ಮೀಯರನ್ನು ಪರಾಭವಗೊಳಿಸುವ ಪರಿಯನ್ನು ಉಲ್ಲೇಖಿಸಲಾಗಿದೆ. ಇಲ್ಲಿ ಹೆಸರಿಸುವ ಅನೇಕ ಮತಗಳನ್ನು ಗಮನಿಸಿದಾಗ ಒಂದು ವಿಷಯವು ನಮಗೆ ಸ್ಪಷ್ಟವಾಗುತ್ತದೆ. ಒಂದು ಧರ್ಮವು ತನ್ನ ಅಸ್ತಿತ್ವಕ್ಕಾಗಿ, ತನ್ನ ಸುತ್ತಲೂ ಅಸ್ತಿತ್ವದಲ್ಲಿದ್ದ ಎಲ್ಲಾ ಧರ್ಮಗಳೊಂದಿಗೂ ಅದು ಹೋರಾಡಬೇಕಿತ್ತು. ಪ್ರತೀಧರ್ಮವೂ ಪ್ರತೀಧರ್ಮದ ವಿರುದ್ಧವು ವಾದಿಸುತ್ತಿದ್ದವು ಮತ್ತು ಜಯವನ್ನು ಹಂಬಲಿಸುತ್ತಿದ್ದವು. ಹೀಗೆ ಜಯಗೊಳಿಸಿದ ತಮ್ಮವರನ್ನು ದಾಖಲಿಸುತ್ತಿದ್ದವು. ಅಂತಹ ಒಂದು ಪಟ್ಟಿಯನ್ನು ಹೀಗೆ ನೋಡಬಹುದು. ಒಬ್ಬಾತನನ್ನು ಒಂದು ಶಾಸನವು 'ಬೌದ್ಧವಾದಿ ತಿಮಿರ ಪತಂಗರುಂ ಸಾಂಖ್ಯವಾದಿ ಕುಳಾದ್ರಿ ವಜ್ರಧರರುಂ' ಎನ್ನುತ್ತದೆ[2]. ನಂದಿ ಪಂಡಿತ ದೇವರು ಎನ್ನುವವರನ್ನು 'ಪರವಾದಿ ಶರಭಬೇರುಂಡ' ಎಂದು ಕರೆಯಲಾಗುತ್ತಿತ್ತು[3]. ಶುಭಕೀರ್ತಿ ಗುರುಗಳು 'ವಾದಿ ವಜ್ರಾಂಕುಶ' ಎಂದೇ ಪ್ರಸಿದ್ಧರಾಗಿದ್ದರು[4]. ಇವರು ಬೌದ್ಧರನ್ನು, ಮೀಮಾಂಸಕರನ್ನು ತಮ್ಮ ವಾದದ ಬಲದಿಂದ ಸೋಲಿಸಿದ್ದರಂತೆ. ಕನಕನಂದಿ ಎಂಬುವವರು 'ವಾದಿ ವಿಷೋರಗ ತಾರ್ಕ್ಷ್ಯಕರ್' ಆಗಿದ್ದರು[5]. ತನ್ನ ವಾಕ್‌ಚಾತುರ್ಯದಿಂದ ಇತರೆ ಸರ್ವ ಮತಗಳನ್ನು ಸೋಲಿಸಿದ ಪಂಡಿತನೊಬ್ಬನನ್ನು ಹಲವು ರೀತಿಯಲ್ಲಿ ಶಾಸನವೊಂದು ಹೊಗಳುತ್ತದೆ[6]. ಅಲ್ಲದೆ ಜಿನಮತವನ್ನು ಉದ್ಧರಿಸಿದ ಸೋಮದೇವ ಪಂಡಿತನನ್ನು ಕುರಿತು 'ಸಮಯ ಪರೀಕ್ಷೆ'ಯು ಹೀಗೆ ವರ್ಣಿಸುತ್ತದೆ.

ಜಿನ ಸಮಯಾಂಬರ ಸೋಮಂ
ವಿನೇಯಜನಕುಮುದಸೋಮನಖಿಳಧರಿತ್ರೀ
ಜಿನನಯನೋತ್ಸವಸೋಮಂ
ಜನಸ್ತುತಂ ಸೋಮದೇವ ಪಂಡಿತದೇವಂ"[7]

"ವಾದಿಗಳೊಳಗತ್ಯುತ್ತವ
ವಾದಿಗಳಯ್ವತ್ತ ನಾಲ್ವರಂ ಗೆಲ್ದ ವಚಃ
ಶ್ರೀದಯಿತನಮಳಿನ ಸ್ಯಾ
ದ್ವಾದಾಚಳ ಸಿಂಹನ ಖಿಳತಾರ್ಕಿಕ ಭೂಪಂ"[8]

ಎಂದು ಮುಂತಾಗಿ ಹೊಗಳಲಾಗಿದೆ. ವಾದಿಗಳಲ್ಲಿ ಉತ್ತಮರು ಎನ್ನುವವರನ್ನೇ ಈತ ಸೋಲಿಸಿದ್ದನಂತೆ. ಈತನ ವಾದಕ್ಕೆ ಜನರು ತಲೆದೂಗಿದ್ದರಂತೆ. ಜಿನಮತವನ್ನು ಈತ ತನ್ನ ವಾದದ ಬಲದಿಂದ ವಿಶೇಷವಾಗಿ ಬೆಳೆಸಿರುವುದನ್ನು ಇದು ಹೇಳುತ್ತಿದೆ. ಇಷ್ಟೇ ಅಲ್ಲದೇ ಈತನ ಬಗ್ಗೆ ಹೇಳುತ್ತಾ ವಾದದ ಕುರಿತಾಗಿಯೂ ಒಂದು ಮಾತನ್ನು ಈ ಕೃತಿಯು ಹೇಳುತ್ತದೆ "ವಾದದೊಳೇಂ ಪೆರತು ದೈವದೊಳ್ ಪುರುಳುಂಟೇ"(ಅರ್ಥ?)ಎಂದು.

ವಾದವನ್ನು ಸಾಮಾನ್ಯವಾಗಿ ಎರಡು ವಿಧಗಳಾಗಿ ಗುರುತಿಸಬಹುದು. ವ್ಯವಸ್ಥಿತ ಮತ್ತು ಅವ್ಯವಸ್ಥಿತ ಎಂದು. ಒಂದು ಗೊತ್ತಾದ ಸಮಯದಲ್ಲಿ, ಗೊತ್ತಾದ ಸ್ಥಳದಲ್ಲಿ ಯೋಜನಾ ಬದ್ಧವಾಗಿ ನಡೆಯುವಂತಹದ್ದು ವ್ಯವಸ್ಥಿತ ವಾದ. ಇನ್ನೊಂದು ರೀತಿಯದು ಯಾವುದೇ ರೀತಿಯಲ್ಲಿ ಯೋಜಿತಗೊಂಡಿರುವುದಿಲ್ಲ. ಇದರಲ್ಲಿ ಬಹುತೇಕವು ತತ್‌ಕ್ಷಣದ ಪರಿಣಾಮಗಳಾಗಿರುತ್ತವೆ. ಈ ಎರಡೂ ರೀತಿಯ ವಾದಗಳನ್ನು ನಾವು ಪ್ರಾಚೀನ ಕರ್ನಾಟಕದ ಚರಿತ್ರೆಯಲ್ಲಿ ಕಾಣುತ್ತೇವೆ. ಒಂದು ಸುಂದರ ಘಟನೆಯ ಮೂಲಕ ಈ ವಾದದ ಸ್ವರೂಪವನ್ನು ಹೀಗೆ ಅರಿಯಬಹುದು.

ಈ ಘಟನೆಯು ಆದಿಪುರಾಣದಲ್ಲಿ ಬರುತ್ತದೆ[9]. ಇದು ಮಹಾಬಲ ರಾಜನ ಆಸ್ಥಾನದಲ್ಲಿ ನಡೆಯುತ್ತದೆ. ಈ ಪ್ರಸಂಗವನ್ನು ಸ್ವಲ್ಪ ವಿವರವಾಗಿಯೇ ನೋಡಬೇಕಿದೆ. ಸಾಮಾನ್ಯವಾಗಿ ರಾಜನ ಆಸ್ಥಾನದಲ್ಲಿ ಪ್ರತಿದಿನವೂ ವಿವಿಧ ಕ್ಷೇತ್ರಗಳ ಪ್ರತಿನಿಧಿಗಳು ಸೇರಿರುತ್ತಾರೆ. ಧರ್ಮಕ್ಕೆ ಸಂಬಂಧಿಸಿದಂತೆ ಅವರ ರಾಜಗುರುಗಳು ಮೇಲು ಜಾಗದಲ್ಲಿರುತ್ತಾರೆ. ನಿಯತಿಯಂತೆ ರಾಜನು ಆಸ್ಥಾನಕ್ಕೆ ಬಂದಾಗ ರಾಜಗುರುವಾದ 'ಸ್ವಯಂಬುದ್ಧ'ನು ಧರ್ಮೋಪದೇಶವನ್ನು ಮಾಡುತ್ತಾನೆ. ಈ ಸಂಸಾರ ಸಾಗರವನ್ನು ದಾಟಿ ಮುಕ್ತಿಯನ್ನು ಪಡೆಯಲು ತಪಸ್ಸೇ ಮುಂತಾದ ಮಾರ್ಗಗಳ ಕುರಿತು ಹೇಳುತ್ತಾನೆ. ಇದಕ್ಕೆ ಲೋಕಾಯತಿಕ, ಯೋಗಾಚಾರ, ಮಾಧ್ಯಮಿಕ ಮತಗಳಿಗೆ ಸೇರಿದ (ಅನ್ಯಮತೀಯರಾದ) ಕ್ರಮವಾಗಿ ಮಹಾಮತಿ, ಸಂಭಿನ್ನಮತಿ ಮತ್ತು ಶತಮತಿಗಳೆಂಬ ವಿದ್ವಾಂಸರು ಇದಕ್ಕೆ ವಿರೋದ ವ್ಯಕ್ತಪಡಿಸುತ್ತಾರೆ. ಸ್ವಯಂಬುದ್ಧರ 'ಮುಕ್ತಿ'ಗೆ ಪರ್ಯಾಯವಾಗಿ 'ಜೀವ'ವಿಲ್ಲ ಎಂಬ ವಾದವನ್ನು ಮುಂದಿಡುತ್ತಾರೆ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ, ರಾಜನ ಆಸ್ಥಾನದಲ್ಲಿ ಎಲ್ಲಾ ಮತದ ಮುಖಂಡರಿಗೂ ಆಶ್ರಯವನ್ನು ನೀಡಿರುವುದು ಮತ್ತು ತಮ್ಮ ತಮ್ಮ ಧರ್ಮಕ್ಕನುಸಾರವಾಗಿ ತಮ್ಮ ತತ್ವಗಳನ್ನು ಪ್ರತಿಪಾದಿಸುವ ವಾಕ್ ಸ್ವಾತಂತ್ರ್ಯವಿತ್ತು ಎನ್ನುವುದು. ಮತ್ತು ಈ ಘಟನೆಯಲ್ಲಿ ರಾಜನು ಆ ಎಲ್ಲಾ ಮತೀಯರಿಗೂ ವಾದ ಮಾಡಲಿಕ್ಕೆ ಮುಕ್ತ ಸ್ವಾತಂತ್ರ್ಯವನ್ನು ಕೊಟ್ಟಿದ್ದ.

ಸ್ವಯಂಬುದ್ಧನ ಮಾತಿಗೆ ವಿರೋಧವಾಗಿ ಮೊದಲು ಬೃಹಸ್ಪತಿ ಮತಾನುಚಾರಿಯಾದ ಮಹಾಬಲಿಯು ತನ್ನ ವಾದವನ್ನು ಮಂಡಿಸುತ್ತಾನೆ. ಅವನು ಹೇಳುತ್ತಾನೆ "ಸತ್ತವನು ಮತ್ತೆ

ಹುಟ್ಟುವುದು, ಧರ್ಮಕರ್ಮಫಲಗಳು ಇವೆಲ್ಲಾ ಹುಸಿಮಾತು. ಢಾಂಭಿಕಾಚಾರಗಳು. ದೇಹಕ್ಕೆ ಕಷ್ಟ ಕೊಡುವುದರಿಂದ ಯಾವ ಲಾಭವೂ ಇಲ್ಲ. ಇರುವವರೆಗೆ ಇಂದ್ರಿಯ ವರ್ಗದಲ್ಲಿ ಇಚ್ಛೆಯನ್ನು ಸಲ್ಲಿಸು. ವಸಂತದಲ್ಲಿ ಚಿಗುರನ್ನು ಕಚ್ಚುವ ಕೋಗಿಲೆಯಂತೆ ವಿಶೇಷವಾಗಿ ನಲಿ" ಎಂದು ಇನ್ನು ಮುಂತಾಗಿ ಹೇಳುತ್ತಾನೆ.

ಬಳಿಕ ಸಂಭಿನ್ನಮತಿಯು ವಿಜ್ಞಾನವಾದವನ್ನು ಅವಲಂಬಿಸಿ ಹೀಗೆಂದನು "ಹಿಂದು ಹಿಂದಿನ ವಿಜ್ಞಾನ ವಿಶೇಷಗಳಿಂದ ಮುಂದು ಮುಂದಿನ ವಿಜ್ಞಾನಗಳು ಹುಟ್ಟುತ್ತವೆ. ಈ ಕಾರಣ ಪರಲೋಕದ ಅಪೇಕ್ಷೆಯಿಂದ ತನುಧನಗಳನ್ನು ಸವೆಸಿ ಬಳಲಬೇಡ" ಎಂದು ಹೇಳಿ ಸುಮ್ಮನಾದನು.

ನಂತರ ಶತಮತಿಯು ಶೂನ್ಯವಾದವನ್ನು ಮುಂದಿಕ್ಕಿದನು "ಯಾವುವು ಒಳಗೂ ಹೊರಗೂ ಇರುವಂತೆ ಸ್ಪಷ್ಟವಾಗಿ ತೋರುವವೊ ಅವೆಲ್ಲವೂ ಅಸತ್ಯ. ಜೀವವಿಲ್ಲ, ಪರಲೋಕವಿಲ್ಲ, ಪುಣ್ಯಪಾಪವಿಲ್ಲ" ಎಂದು ಹೇಳಿ ಮಾತು ಮುಗಿಸಿದನು.

ಆ ನಂತರ ಇವರೆಲ್ಲರ ವಿರುದ್ಧ ಸ್ವಯಂಬುದ್ಧನು ಪ್ರತಿವಾದ ಹೂಡುತ್ತಾನೆ. ಆತ್ಮ ಇದ್ದಾನೆಂದು ತನ್ನದೇ ವಾದಗಳಿಂದ ಸಾಧಿಸುತ್ತಾನೆ. ಮಹಾಬಲ ರಾಜನ ಅಂದಿನವರೆಗಿನ ಭವಗಳನ್ನು ಸಾಕ್ಷ್ಯವಾಗಿ ನೀಡಿ ವಾದದಲ್ಲಿ ಗೆಲ್ಲುತ್ತಾನೆ. ಇಲ್ಲಿ ಈತ ಗೆಲ್ಲುವುದು ಪೂರ್ವಸಿದ್ಧವೇ ಆಗಿದೆ. ತನ್ನದೇ ಧಾರ್ಮಿಕ ಸಾಧನೆಯ ಕಾರಣಕ್ಕಾಗಿ ಈ ಕೃತಿಯನ್ನು ಬರೆದಂತಹ ಕವಿ ತನ್ನ ಮತವನ್ನು ಇಲ್ಲಿ ಗೆಲ್ಲಿಸಬೇಕಾಗುತ್ತದೆ. ಇದೇ ಪ್ರಸಂಗದಲ್ಲಿ ಮತ್ತೊಂದು ಮತದವನು ಕವಿಯಾಗಿದ್ದರೆ ತನ್ನ ಮತವನ್ನು ಗೆಲ್ಲಿಸಿರುತ್ತಿದ್ದ. ತನ್ನ ಮತದ ಬಗ್ಗೆ ಬರೆದುಕೊಳ್ಳುವ ಕವಿಗಳು ಎರಡರಲ್ಲಿ ಒಂದನ್ನು ಮಾಡಬಲ್ಲರು. ಒಂದು ಇತರ ಧರ್ಮಿಯರನ್ನು ಪೂರ್ಣವಾಗಿ ಸೋಲಿಸುವುದು. ಇಲ್ಲವೇ ತಾನು ಸೋಲಬೇಕಾದ ಪ್ರಸಂಗ ಬಂದಲ್ಲಿ ಎದುರು ಧರ್ಮದ ಬಗ್ಗೆ ಕ್ರೌರ್ಯವನ್ನೂ, ತನ್ನ ಧರ್ಮದ ಬಗ್ಗೆ ಕರುಣೆಯನ್ನೂ ಮೂಡಿಸಿ ಪ್ರಸಂಗವನ್ನು ಮುಗಿಸುತ್ತಾನೆ. ಈ ಆತ್ಮ ಇದ್ದಾನೆಂದು ಸಾಧಿಸುವುದು ಮತ್ತು ಅಲ್ಲಿಯವರೆಗಿನ ಜನ್ಮಗಳನ್ನು ಕುರಿತು ಹೇಳುವುದು ನಮ್ಮ ಕಾಲೀನಕ್ಕೆ ಅಸಂಗತವಾಗಿ ತೋರುತ್ತವೆ. ಆದರೂ ಬಹುಸಂಖ್ಯೆಯ ಜನರು ಈಗಲೂ ಇದರ ಬಗ್ಗೆ ನಂಬಿಕೆಯನ್ನು ಹೊಂದಿದ್ದಾರೆ. ಆದರೆ ಆ ಕಾಲದಲ್ಲಿ ಒಂದು ಧರ್ಮಕ್ಕೆ ಸಂಬಂಧಿಸಿದಂತೆ ಆತ್ಮ ಮುಂತಾದುವು ಪ್ರಮುಖವಾದ ಸಾಧನಗಳಾಗಿದ್ದವು. ಪ್ರಮುಖವಾಗಿ ಜೈನರಿಗೆ.

ಹೀಗೆ ಗೆದ್ದ ಆ ಸ್ವಯಂಬುದ್ಧನು "ಪರಪಕ್ಷ ದೂಷಣಪುರಸ್ಸರ ಮನೇಕೋಪಪತ್ತಿಗಳಿಂ ಸ್ವಪಕ್ಷ ಸ್ಥಾಪನಂಗೆಯ್ದು ಸನ್ಮಾರ್ಗ ಪ್ರಕಾಶದಿಂ ಮಾರ್ಗ ಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧ ಪ್ರಶಂಸನಾಗಿ" ಹೊರಹೊಮ್ಮುತ್ತಾನೆ. ಹೀಗೆ ಪರಪಕ್ಷಗಳನ್ನು ದೂಷಣೆಗೆಯ್ದು, ಅನೇಕ ದೃಷ್ಟಾಂತಗಳಿಂದ ತನ್ನ ಮತವನ್ನು ಸಮರ್ಥನೆ ಮಾಡಿಕೊಂಡು, ಅಲ್ಲಿದ್ದ ಸಭಾಸದರಿಂದ ಆ ಸ್ವಯಂಬುದ್ದನು ಪ್ರಶಂಸೆಗೆ ಒಳಗಾದನು. ನಂತರದಲ್ಲಿ.

"ಪರವಾದಿಗಳ ಮೊಗಂಗಳ್
ಕರಿಂ ಕುವರಿದಂತೆ ಕಂದಿಕುಂದಿರೆ ಖಚರೇ
ಶ್ವರನೀಯೆ ಪಡೆದನತಾನ
ದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ[10].

ಹೀಗೆ ಕೊನೆಗೆ ಆ ಸ್ವಯಂಬುದ್ಧನು ರಾಜನಿಂದ ಜಯಪತ್ರವನ್ನು ಪಡೆಯುತ್ತಾನೆ. ಅಂದರೆ ಕೊನೆಗೆ ಹೀಗೆ ಗೆದ್ದವರಿಗೆ ಜಯಪತ್ರವನ್ನು ಕೊಡುವ ಪದ್ಧತಿಯು ಆಗ ರೂಢಿಯಲ್ಲಿತ್ತು ಎಂದಾಯಿತು.

ಇದೇ ರೀತಿಯಾಗಿ ರಾಜನ ಆಸ್ಥಾನದಲ್ಲಿ ನಡೆದ ವಾದದ ಕತೆಯೊಂದು ಹೀಗಿದೆ[11]. ವೆಲನಾಡ ಚೋಳರು ಗುಂಟೂರಿನಲ್ಲಿ ಆಳುತ್ತಿದ್ದರು. ಆಗ 2ನೇ ಚೊಳನು ಅಧಿಕಾರದಲ್ಲಿದ್ದ. ಅವರ ಅಸ್ಥಾನಕ್ಕೆ ಪಂಡಿತರಾದ್ಯರು ಬೇಟಿ ಇತ್ತ ಸಮಯದಲ್ಲಿ ಅಲ್ಲಿ ಬೌದ್ದನೆಂಬ ಬೌದ್ದಮತೀಯ ಮುಖಂಡನು ರಾಜಾಶ್ರಯವನ್ನು ಪಡೆದಿದ್ದ. ಪಂಡಿತರಿಗೂ ಬೌದ್ಧನಿಗೂ ಮತೀಯ ಸಂಬಂಧದಲ್ಲಿ ವಾದವಾಗಿ ಅದರಲ್ಲಿ ಪಂಡಿತರು ವಿಜಯಿಯಾದರು. ಇದರಿಂದ ಸಿಟ್ಟಾದ ಆ ಬೌದ್ಧನು ಪಂಡಿತರ ಪೂಜೆಗೆ ಭಂಗ ತರುವ ಉದ್ದೇಶದಿಂದ ಅವರ ಪೂಜಾ ಸಾಮಾಗ್ರಿಗಳನ್ನು ಕಳವು ಮಾಡಿಸಿದ. ಇದರಿಂದ ಆ ಪಂಡಿತನ ಶಿಷ್ಯರು ರೊಚ್ಚಿಗೆದ್ದು ಆ ಬೌದ್ಧನನ್ನು ಕೊಲ್ಲುತ್ತಾರೆ. ಆಗ ಬಸವಣ್ಣನ ಅನುಯಾಯಿಗಳು ಬಿಜ್ಜಳನನ್ನು ಕೊಂದಂತೆ ಬೌದ್ಧನನ್ನು ಕೊಂದೆವು ಎಂದು ರಾಜನಲ್ಲಿ ಅವರು ವಾದ ಹೂಡುತ್ತಾರೆ (ಈ ಘಟನೆಯ ಐತಿಹಾಸಿಕೆಯನ್ನು ಸಾಹಿತ್ಯ ಕೃತಿಯೊಂದರಿಂದ ಧೃಡೀಕರಿಸಲು ಕಷ್ಟವಾದರೂ, ಸಾಹಿತ್ಯಿಕ ಘಟನೆಯಾಗಿಯೇ ಸ್ವೀಕರಿಸಿಬಹುದು). ಇದರಿಂದ ಸಿಟ್ಟಾದ ಚೋಳನು ಪಂಡಿತರನ್ನು ಕುರುಡಾಗಿಸುತ್ತಾನೆ. ಆ ಪಂಡಿತನು ಇದಕ್ಕೆ ಪ್ರತಿಯಾಗಿ ಚೋಳನ ವಂಶ ನಾಶವಾಗಲಿ ಎಂದು ಶಾಪ ಹಾಕುತ್ತಾನೆ. ಮತೀಯ ಸಂಘರ್ಷಗಳು ಹೇಗೆಲ್ಲಾ ಉಂಟಾಗುತ್ತಿದ್ದವು ಎನ್ನುವುದಕ್ಕೆ ಇದು ಸಾಕ್ಷಿಯಂತಿದೆ. ಒಂದು ವಾದವು ಏನೆಲ್ಲಾ ಪರಿಣಾಮಗಳನ್ನು ಬೀರಬಲ್ಲದು ಎಂಬುದಕ್ಕೂ ಸಹ ಇದು ಸಾಕ್ಷಿಯಾಗುತ್ತದೆ. ಬಹುಶಃ ಬೌದ್ಧರು ಅಲ್ಪಸಂಖ್ಯಾತರಿದ್ದ ಕಾರಣಕ್ಕೊ ಏನೋ ಅವರ ಸಹಾಯಕ್ಕೆ

ರಾಜನೇ ಬರಬೇಕಾಯಿತು. ಇಲ್ಲವೇ ಆ ಬೌದ್ಧನು ರಾಜನ ರಾಜಗುರುವಾಗಿದ್ದಿರಬಹುದು. ಇಲ್ಲಿ ರಾಜನ ಮತವನ್ನು ಸರಿಯಾಗಿ ಹೇಳಿಲ್ಲವಾದರೂ ಅವನ ಧಾರ್ಮಿಕತೆಯ ವಿಷಯದಲ್ಲಿ ಈ ಘಟನೆಯನ್ನು ಅವನ ಉದಾರತೆಯ ಹಿನ್ನಲೆಯಿಂದ ಕಾಣಲು ಯಾವ ಅಡ್ಡಿಯೂ ಇಲ್ಲ. ಕಾರಣ ಆ ಬೌದ್ದನ ಕೊಲೆಯು ಅವನು ಮಾಡಿದ ಅಘರಾದಕ್ಕೆ ಯಾವ ರೀತಿಯಿಂದಲೂ ಸಮವಾಗುವುದೇ ಇಲ್ಲ. ರಾಜನು ಆರೋಪ ಪ್ರತ್ಯಾರೋಪಗಳನ್ನು ಆಲಿಸಿಯೇ ತನ್ನ ನಿರ್ಧಾರವನ್ನು ಹೇಳಿದಂತಿದೆ.

ಇಂತಹ ಬಹುತೇಕ ಘಟನೆಗಳಲ್ಲಿ ನಾವು ನೋಡುವುದು ಈ ರೀತಿಯಾಗಿ ವಿವಾದ ನಡೆಯಿತು ಎಂದು ಮಾತ್ರವೇ. ಯಾವ ಕಾರಣಕ್ಕಾಗಿ ಎಂದು ಹೇಳುವ ಘಟನೆಗಳು ತೀರಾ ವಿರಳ ಎನ್ನಬಹುದು. ಇಲ್ಲೊಂದು ಘಟನೆಯಿದೆ[12]. ಈ ವಿವಾದದ ಘಟನೆಯು ರಾಜನ ಮುಂದೆಯೇ ನಡೆಯುತ್ತೆ. ಅದರ ವಿಷಯ ವಸ್ತು ಹಿಂಸೆ. ಅಹಿಂಸೆಯನ್ನು ಅಖಂಡವಾಗಿ ಆಚರಿಸಿದ ಜೈನರು ಇಲ್ಲಿ ಹಿಂಸೆಯ ವಿರುದ್ಧವಾಗಿ ವಾದ ಮಂಡಿಸಿ ಗೆಲ್ಲುತ್ತಾರೆ. ಒಮ್ಮೆ ಹೊಯಿಸಳ ವಿಷಯದ ಶಾಲಿ ಗ್ರಾಮದಲ್ಲಿ ಬ್ರಾಹ್ಮಣರು ಯಜ್ಞ ಮಾಡಲೆಂದು 21 ಮೇಕೆ ತರಿಸುತ್ತಾರೆ. ಆ ಮೇಕೆಗಳು ಒಂದು ದಿನ ಮೇಯುತ್ತಾ ಬಂದು ಜಿನಾಲಯವನ್ನು ಹೊಕ್ಕುತ್ತವೆ. ಅಲ್ಲಿಯ ಕುಂಭಕಾರ ಅವುಗಳನ್ನು ಹೊಡೆದರೂ ಅವು ಗೋಳಿಟ್ಟು ಶರಣಾದವೇ ಹೊರತು ಅಲ್ಲಿಂದ ಹೊರಬರಲಿಲ್ಲ. ಕಾರಣವನ್ನು ವಿಚಾರಿಸಲಾಗಿ ಹೊರಗೆ ಹೋದರೆ ಆ ಯಜ್ಞಿಗಳು ತಮ್ಮನ್ನು ಕೊಲ್ಲುವರೆಂಬುದು ಆ ಮೇಕೆಗಳ ಗೋಳಾಗಿತ್ತು. ಇದನ್ನು ಕಂಡ ಅಲ್ಲಿದ್ದ ಧರ್ಮಾಚಾರ್ಯ ಋಷಿಗಳು ಕರುಣೆಗೊಳ್ಳುತ್ತಾರೆ. ಮೇಕೆ ಒಯ್ಯಲು ಬಂದ ಬ್ರಾಹ್ಮಣರೊಂದಿಗೆ ವಾಗ್ವಾದ ಮಾಡಿ, ಅವರ ಹಿಂಸಾ ವೃತ್ತಿಯನ್ನು ಖಂಡಿಸಿ ವಾಪಸ್ಸು ಕಳಿಸುತ್ತಾರೆ.

ಅವಮಾನಿತರಾದ ಬ್ರಾಹ್ಮಣರು ರಾಜನಾದ ರಾಜಾಧಿತ್ಯನಿಗೆ ದೂರು ನೀಡುತ್ತಾರೆ. ನಂತರ ರಾಜಾಜ್ಞೆಯಂತೆ ಉದ್ಯಾನವನವೊಂದರಲ್ಲಿ ಧರ್ಮಾಧಿಕರಣರ ಮಧ್ಯೆ ಸ್ಮಾರ್ತರಿಗೂ ಜೈನರಿಗೂ ವಾದ ಕಾರ್ಯಕ್ರಮವನ್ನು ನಡೆಸಲಾಗುತ್ತದೆ. ಉಭಯ ಪಕ್ಷಗಳು ಜೋರಾಗಿಯೇ ವಾದ ಮಾಡುತ್ತವೆ. ಕೊನೆಗೆ "ಪ್ರಾಣಿವಧೆಯಿಂ ಧರ್ಮಮುಂಟೆಂದು ಮಾಡಿರ್ದ ಶಾಸ್ತ್ರಮಂ ನಿರಾಕರಿಸಿ, ಜೀವಹಿಂಸೆಯಂ ಪುಣ್ಯ ಮುಂಟೆಂಬ ಪಾಪಸೂತ್ರಧಾರಿಗಳುಂ... ಇವರ ಗರ್ವ ಪರ್ವತಮಂ ವಾಗ್ವಜ್ರದಿಂ ಚೂರ್ಣಿಕೃತಂ ಮಾಳ್ಪಲ್..."ಕೊನೆಗೆ ಜೈನರು ಜಯವಾದಿಗಳಾದರು. ಆಗ ಅಲ್ಲಿ ನೆರೆದಿದ್ದವರು ಅಹಿಂಸೆಯ ಮಹತ್ವವನ್ನು ಅರಿತು ಜೈನಮಾರ್ಗವನ್ನು ಹಿಡಿದರು. ಈ ಘಟನೆಯಲ್ಲಿ ಪ್ರಮುಖವಾಗಿ ಎರಡು ವಿಷಯಗಳನ್ನು ಗುರುತಿಸಬಹುದು. ಒಂದು ಹಿಂಸೆಯ ವಿರುದ್ಧವಾಗಿ ಅಹಿಂಸೆಯು ಗೆದ್ದುದು. ಮತ್ತೊಂದು ಈ ಅಹಿಂಸೆಯ ಕಾರಣದಿಂದಾಗಿ ಅಲ್ಲಿ ನೆರೆದಿದ್ದ ಜನರು ಜೈನಮಾರ್ಗವನ್ನು ಹಿಡಿದುದು.

ಇಂತಹ ಪ್ರಕರಣಗಳು ಮತ್ತು ಅದರಲ್ಲಿಯ ವಿಜಯಗಳು ಹೇಗೆ ಜನರ ಮನಸ್ಸಿನ ಮೇಲೆ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ಕಾಣಬಹುದು.

ಈ ಪ್ರಸಂಗವು ನೋಡಲಿಕ್ಕೆ ಒಂದು ಘಟನೆಯಂತೆ ಕಂಡರೂ, ಹಲವು ಶತಮಾನಗಳ ಸಂಘರ್ಷ ಇದರಲ್ಲಿ ಅಡಗಿದೆ. ವೈದಿಕರ ಯಜ್ಞವಿಧಿಗಳ ಕಾರಣವಾಗಿ ಭಾರತದಲ್ಲಿ ಜೀವಬಲಿಯು ಅವ್ಯಾಹತವಾಗಿ ನಡೆಯುತ್ತಿತ್ತು. ಕ್ರಿ.ಪೂ 6ರ ವರೆಗೆ ನಮಗೆ ಅಧೀಕೃತ ಮಾಹಿತಿಗಳು ಸಿಗುವುದಿಲ್ಲವಾದರೂ, ಆ ನಂತರದಲ್ಲಿ ವೈದಿಕರ ಯಜ್ಞ ಹಿಂಸೆಯ ವಿರುದ್ಧ ಒಂದು ಹೋರಾಟವು ಶುರುವಾಗಿರುವುದನ್ನು ನಾವು ಕಾಣುತ್ತೇವೆ. ಪ್ರಮುಖವಾಗಿ ಆಗಿನಿಂದಲೇ ಅಹಿಂಸೆ ಎನ್ನುವ ಪರಿಕಲ್ಪನೆ ಮುನ್ನೆಲೆಗೆ ಬಂದಿತು. ಈ ಅಹಿಂಸೆ ಎನ್ನುವುದು ಎಷ್ಟರ ಮಟ್ಟಿಗೆ ಜನಪ್ರಿಯವಾಯಿತೆಂದರೆ, ಮಾಂಸಹಾರಿಗಳಾಗಿದ್ದ ಬ್ರಾಹ್ಮಣರು ಶುದ್ಧ ಶಾಕಾಹಾರಿಗಳಾಗಿ ಬದಲಾದರು. ಇದನ್ನು ಬದಲಾವಣೆ ಎನ್ನುವುದಕ್ಕಿಂತ ಧರ್ಮರಾಜಕಾರಣದ ಹೋರಾಟಕ್ಕೆ ಒಗ್ಗಿಕೊಂಡ ಪರಿಸ್ಥಿತಿ ಎನ್ನುವುದು ಉಚಿತ. ಕೊನೆಗೆ ಅಹಿಂಸೆಯೇ ಈ ಸದ್ಯದ ಪ್ರಸಂಗದಲ್ಲಿ ಗೆದ್ದಿತು. ಮತ್ತು ಈ ಪ್ರಸಂಗದಲ್ಲಿ ಜೈನರು ಜನರನ್ನು ಮತಾಂತರಿಸಿಕೊಳ್ಳಲು ಸಹ ಯಶಸ್ವಿಯಾಗುತ್ತಾರೆ. ಹೀಗೆ ಸಂವಾದಕ್ಕೆ ಮನಸೋತೋ, ಇಲ್ಲವೇ ಸಂವಾದದಲ್ಲಿ ಸೋತೋ ಮತಾಂತರಗೊಂಡ ಹಲವು ಉದಾಹಣೆಗಳಿವೆ. ಇಲ್ಲವೇ ಈ ರೀತಿಯ ಸಂವಾದ ಸ್ಪರ್ದೆಯಲ್ಲಿ ವಿಜಯಿಯಾಗಿ ಮತಾಂತರಿಸಿದವರ ಉದಾಹರಣೆಗಳೂ ತುಂಬಾ ಇವೆ. ಅವನ್ನು ಮತ್ತೊಂದು ಅಧ್ಯಾಯದಲ್ಲಿ ವಿವರವಾಗಿ ನೋಡಲಾಗಿದೆ.

ವೃತ್ತ ವಿಲಾಸನ ಧರ್ಮ ಪರೀಕ್ಷೆ ಕತೆಯಲ್ಲಿ ಒಂದು ಕತಾ ಸೂತ್ರವಿದೆ[13]. ಅದರಲ್ಲಿ ಈ ರೀತಿಯ ವಾದಗಳ ದಂಡಯಾತ್ರೆಯಿದೆ. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗುವುದು. ಅಲ್ಲಿಯ ಪಂಡಿತರನ್ನು, ಪರಧರ್ಮ ವಾದಿಗಳನ್ನು ಸೋಲಿಸುವುದು ಒಂದು ಸರಣಿಯಂತೆ ಇಲ್ಲಿ ಮುಂದುವರೆಯುತ್ತದೆ. ಈ ಕತೆಯ ಮುಖ್ಯ ಸೂತ್ರಧಾರ ಮನೋವೇಗ. ಈತನು ತನ್ನ ಬಾಲ್ಯ ಸ್ನೇಹಿತನಾದ ಪವನವೇಗನನ್ನು ಪಾಟಲೀಪುತ್ರಕ್ಕೆ ಕರೆದುಕೊಂಡು ಬರುತ್ತಾನೆ. ಅವನಿಂದ ಅಲ್ಲಿಯ ಬ್ರಹ್ಮ ಸಭೆಯಲ್ಲಿರುವ ವಿದ್ಯಾರ್ಥಿಗಳ ಜೊತೆ ಎಂಟು ದಿನ ಪರಿಯಂತ ತರ್ಕಬದ್ಧವಾಗಿ ವಾದಮಂಡಿಸಿ ಗೆದ್ದು ಜಯಪತ್ರವನ್ನು ಪಡೆಯುತ್ತಾನೆ. ಕೊನೆಗೆ ವಾದದಲ್ಲಿ ಸೋತ ವಿಪ್ರರೆಲ್ಲರಿಗೂ ವಾಸುಪೂಜ್ಯರಿಂದ ವ್ರತ ದೀಕ್ಷೆಗಳನ್ನು ಕೊಡಿಸುತ್ತಾನೆ. ಪವನವೇಗನು ಬುದ್ಧಿವಂತ ಪಂಡಿತನಿರಬೇಕು. ಈ ಕಾರಣಕ್ಕೆ ಮನೋವೇಗನು ಪಾಟಲೀಪುತ್ರಕ್ಕೆ ಅವನನ್ನು ಕರೆದುಕೊಂಡು ಧರ್ಮಯಾತ್ರೆ ಮಾಡಿಸುತ್ತಾನೆ. ಕೊನೆಯಲ್ಲಿ ಸೋತವರಿಗೆ ವ್ರತಗಳನ್ನು ಕೊಡಿಸುವುದರೊಂದಿಗೆ ಈ ಕ್ರಿಯೆಯು ಮುಗಿಯುತ್ತದೆ. ಹೀಗೆ ಸೋತವರು ವ್ರತಗಳನ್ನು ತೆಗೆದುಕೊಳ್ಳಬೇಕೆಂಬ ಬಗ್ಗೆ ಮುಂಚೆಯೆ ಒಪ್ಪಂದವಿರುವ ಬಗ್ಗೆ ಕತೆಯಲ್ಲಿ

ಸುಳಿವಿಲ್ಲ. ಬಹುಶಃ ಅವರು ಸೋತದ್ದರಿಂದ, ಅವರ ಮೇಲೆ ಹೇರಿರಬಹುದು. ಇಲ್ಲವೇ ಅವರೇ ಸ್ವೀಕರಿಸಿರಬಹುದು. ಇಂತದ್ದೇ ದೇಶ ಪ್ರಯಾಣದ ಕತೆ ಇನ್ನೊಂದು ಬರುತ್ತದೆ[14]. ಶಿವಭಕ್ತನೋರ್ವನು ಪಡಿಪತಿ ದೇಶಕ್ಕೆ ಪ್ರಯಾಣಮಾಡಿ, ಸರ್ಪದಷ್ಟನಾಗಿದ್ದ ರಾಜನ ಮಗನನ್ನು ಬದುಕಿಸುತ್ತಾನೆ. ಅಲ್ಲಿಯೆ ರಾಜಸಭೆಯಲ್ಲಿ ನಡೆದ ಮತಸಂವಾದದಲ್ಲಿ ಗೆದ್ದು, ಅವನ ನಾಮವನ್ನು ತೆಗೆಸಿ, ಭಸ್ಮವನ್ನು ಇಡಿಸಿ, ಲಿಂಗಧಾರಣೆಯನ್ನು ಮಾಡಿಸುತ್ತಾನೆ. ಆ ರಾಜಕುಮಾರನು ವೈಷ್ಣವನೇ ಇರಬೇಕು. 'ನಾಮವನ್ನು ತೆಗೆಸಿ' ಎನ್ನುವಲ್ಲಿ ಇದನ್ನು ಅರ್ಥಮಾಡಿಕೊಳ್ಳಬಹುದು. ಹೀಗೆ ಮತಪ್ರಚಾರವನ್ನೂ ಮತಶ್ರೇಷ್ಠತೆಯನ್ನೂ ಇಟ್ಟುಕೊಂಡೆ ಅಂದಿನ ಬಹುತೇಕ ವಾದ ವಿಷಯಗಳು ನಡೆಯುತ್ತಿದ್ದವು.

ವಾಗೀಶ್ವರದೇವರ ರಗಳೆಯಲ್ಲೂ ಸಹ ಇಂತದ್ದೇ ವಾದಿಯೊಬ್ಬನ ಕತೆಯಿದೆ[15]. ಈತನ ಹೆಸರೇ ವಾಗೀಶ. ಅಂದರೆ ವಾಕ್+ಈಶ. ಮಾತಿನಲ್ಲಿ ಮೇಲಾದವನು ಅಥವಾ ಮಾತುಬಲ್ಲವನು. ಇಂತಹ ಈತನು

"ಎಂಟುಮಡಿ ತರ್ಕಶಾಸ್ತ್ರಂಗಳಂ ನೆರೆಕೊಡಿ ।
ಎಂತಪ್ಪ ಸಮಯಮಂ ತರ್ಕದಿಂದೆಂ ಗೆಲುತೆ ।
ಎಂತಪ್ಪ ವಿದ್ವಾಂಸರಂ ವಾದದಿಂ ಗೆಲುತೆ ।
ಭುವನದೊಳಗಾವನುಂ ವಾದದಿಂ ಪುಗದಿರಲು ।

ಎನ್ನುವಂತೆ ತನ್ನ ವಾಕ್‌ಯುದ್ಧವನ್ನು ನಡೆಸಿರುತ್ತಾನೆ. ಈತನನ್ನು ವಾದದಲ್ಲಿ ಎದಿರುಗೊಳ್ಳುವವರು ಯಾರೂ ಇಲ್ಲದೇ, ಇವನಿಂದ ಸೋತು ಇಲ್ಲವೇ ಇವನ ಪ್ರಭಾವಕ್ಕೆ ಒಳಗಾಗಿ ಎಲ್ಲರೂ ಇವನ ಮತವನ್ನು ಅನುಸರಿಸಲು ತೊಡಗುತ್ತಾರೆ. ಬಹುಶಃ ಇದು ಆ ಕಾಲದಲ್ಲಿ ವಾದದ ಮಹತ್ವವನ್ನು, ತರ್ಕದ ಮಹಿಮೆಯನ್ನು ಹೇಳುತ್ತದೆ. ಇವನ ವಾದಕ್ಕೆ ಇದಿರು ಇರಲಾರದೇ ಊರ ರಾಜನೇ ತನ್ನ ಸಪರಿವಾರ ಸಮೇತವಾಗಿ ಈತನ ಮತವನ್ನು ಹೊಂದುತ್ತಾನೆ. ಇದು ಈತನ ವಾಕ್ ಕಲೆಯ ಶಕ್ತಿ. ಇಷ್ಟಲ್ಲದೇ ಈತನನ್ನು ಕವಿಯು "ಪರಸಮಯ ಪರಿಚ್ಛೇದಿ" ಎಂದು ವರ್ಣಿಸುತ್ತಾನೆ. ಅಂದರೆ ಮತ್ತೊಂದು ಮತವನ್ನು ಹೊಡೆಯಬಲ್ಲವನು ಅರ್ಥಾತ್ ಗೆಲ್ಲಬಲ್ಲವನು. ಮತ್ತು ಗೆದ್ದವನು. ಈ ವಾದಕ್ಕಾಗಿಯೆ ತಮ್ಮ ಜೀವನವನ್ನು ಮುಡಿಪಿಟ್ಟವರು ಅನೇಕರು ಇದ್ದರು. ತಮ್ಮ ತಮ್ಮ ಮತಗಳನ್ನು ಗೆಲ್ಲಿಸಲು ವಾದವನ್ನು ಅಸ್ತ್ರವಾಗಿ ಪ್ರಯೋಗಿಸುತ್ತಿದ್ದರು. ಇಂತಹವರ ನೆರಳುಗಳನ್ನು ಈಗಲೂ ಕಾಣಬಹುದು.

ಸಾಹಿತ್ಯ ಮತ್ತು ಶಾಸನಗಳಲ್ಲಿ ದಾಖಲಾಗಿರುವ ಈ ವಾದ–ವಿವಾದದ ಪ್ರಸಂಗಗಳನ್ನು ಇಟ್ಟುಕೊಂಡು, ಇದರ ಒಂದು ಚರಿತ್ರೆಯನ್ನು ಹೀಗೆ ಕಟ್ಟಿಕೊಳ್ಳಬಹುದು. ಆರಂಭದ ಕಾಲಘಟ್ಟದಲ್ಲಿ

ಬೌದ್ಧರು ಇತರ ಧರ್ಮಗಳ ಮೇಲೆ ಈ ವಾದ-ವಿವಾದದಲ್ಲಿ ವಿಜಯವನ್ನು ಸಾಧಿಸುತ್ತಿದ್ದರು. ಆ ನಂತರ ಅವರ ಮೇಲೆ ಜೈನರು ವಿಜಯವನ್ನು ಸಾಧಿಸಿದರು. ಅವರ ಮೇಲೆ ಎನ್ನವುದಕ್ಕಿಂಥ ಸಮಕಾಲೀನ ಮತಗಳ ಮೇಲೆ ಎನ್ನುವುದು ಸೂಕ್ತ . ಆ ನಂತರದ ಕಾಲಘಟ್ಟದಲ್ಲಿ ಅಂದರೆ ಶೈವರು ಪ್ರಭಾವಿಗಳಾದಾಗ ಅವರು ಇತರ ಧರ್ಮಗಳ ಮೇಲೆ ವಿಜಯ ಸಾಧಿಸಿದರು. ಇದಕ್ಕೆ ಸಮಕಾಲೀನವಾಗಿ ಸ್ವಲ್ಪ ನಂತರದಲ್ಲಿ ಎನ್ನುವಂತೆ ವೈಷ್ಣವರು ಈ ವಿವಾದಗಳಲ್ಲಿ ಸೇರಿಕೊಂಡರು. ಆ ನಂತರ ಬಂದ ಇಸ್ಲಾಂ ಈ ಎಲ್ಲಾವನ್ನು ವಾದದಲ್ಲಿ ಸೋಲಿಸಿತು. ಸೋಲಿಸಿತು ಎಂದರೆ ಸೋಲಿಸಿದ ದಾಖಲೆಗಳು ಸಿಗುತ್ತವೆ ಎಂದು. ಈ ಇತಿಹಾಸವನ್ನು ಗಮನಿಸಿದಾಗ ಸ್ಪಷ್ಟವಾಗುವ ವಿಷಯವೆಂದರೆ, ಆ ಸಮಯದಲ್ಲಿ ಯಾರು ಪ್ರಬಲರಾಗಿದ್ದರೋ ಅವರೇ ವಾದಗಳಲ್ಲಿ ಜಯಿಸುತ್ತಿದ್ದರು. ಇಲ್ಲಿ ವಾದದ ತೂಕಕ್ಕಿಂತ ಬೇರೆಯದೇನೋ ರಾಜಕೀಯವಿರುವಂತೆ ಕಾಣುತ್ತದೆ. ಈ ವಿಷಯವನ್ನು ಘಟನೆಗಳ ಮೂಲಕ ಹೀಗೆ ನೋಡಬಹುದು.

ಹೀಗೊಂದು ಘಟನೆ ನಡೆಯುತ್ತದೆ[16]. "ಬೌದ್ಧರ್ ರಾಜ್ಯದೊಳೆಲ್ಲಾ ವಿದ್ಯಮಗಳೀಂದತ್ಯಂತ ಪ್ರಾಬಲ್ಯದಿಂ ಸಾಂಖ್ಯಾದಿ ಮತಂಗಳ ವಾದದಿಂ ಗೆಲ್ದು ವೀರಶೈವರ ಪ್ರಕರಮಂ ಪಿಡಿದು ನೀವು ಕಟ್ಟಿಪ್ಪ ಲಿಂಗಮೇನಿದನೇಕೆ ಕಟ್ಟಿದಿರುವ ಕಾರ್ಯವಿದರಂದಮೆನಾ ಮೂಲಂ ತಿಳಿವಂತು ಪೇಳಿಮಲ್ಲದೊಡೀ ಲಿಂಗಮಂ ಕಳೆವುದೆಂದು ಆಧಾಹಾರದಿಂ ಚರ್ಚಿಸೆ"...ಎಂದು ಇನ್ನು ಮುಂತಾಗಿ ಕೃತಿಯಲ್ಲಿ ದಾಖಲಾಗಿದೆ. ಇಲ್ಲಿ ಬೌದ್ದರು ಶೈವರ ಲಿಂಗದ ಮೂಲವನ್ನು ಕೆದಕಿದ್ದಾರೆ. ಈ ಲಿಂಗವನ್ನು ಕಟ್ಟಿರುವ ಉದ್ದೇಶವೇನು?ಇದರ ಮೂಲವೇನು?ಎಂದು ಅವರು ಶೈವರನ್ನು ಪ್ರಶ್ನಿಸಿದ್ದಾರೆ. ಮುಂದುವರೆದು ಈ ಪ್ರಶ್ನೆಗಳಿಗೆ ನೀವು ಸರಿಯಾದ ಉತ್ತರವನ್ನು ನೀಡುವಲ್ಲಿ ವಿಫಲವಾದರೆ ನೀವು ಕಟ್ಟಿರುವ ಲಿಂಗವನ್ನು ತೆಗೆಯಬೇಕೆಂದು ಸವಾಲು ಹಾಕಿದ್ದಾರೆ. ಬಹುಶಃ ಇದು ಬೌದ್ಧರು ಪ್ರಬಲವಿದ್ದ ಸಮಯವಿರಬೇಕು. ಶೈವರದು ಇನ್ನೂ ಆರಂಭ ಕಾಲದ ಘಟ್ಟವಿರಬೇಕು. ಹೀಗೆ ಬೌದ್ಧರು ಲಿಂಗದ ವಿಚಾರವಾಗಿ ಶೈವರ ಮೇಲೆ ಸವಾಲನ್ನು ಎಸೆಯಲು, ಶೈವರು ಈ ಸವಾಲನ್ನು ಸ್ವೀಕರಿಸುವಲ್ಲಿ ಸೋಲುತ್ತಾರೆ. ಕುತೂಹಲದ ವಿಷಯವೆಂದರೆ ಇವರು ಜೈನರಲ್ಲಿ ಸಹಾಯಕ್ಕಾಗಿ ಯಾಚಿಸುತ್ತಾರೆ. ಆಗ ಬೌದ್ಧರು ಮತ್ತು ಜೈನರು ಪ್ರಬಲವಾದ ಮತಗಳಾಗಿ ಗುರುತಿಸಿಕೊಂಡಿರಬೇಕು. ಈ ಕಾರಣಕ್ಕೆ ಇವರು ಜೈನರ ಸಹಾಯವನ್ನು ಯಾಚಿಸುತ್ತಾರೆ. ಇವರ ಈ ಕರೆಗೆ ತಕ್ಷಣವೇ ಸ್ಪಂದಿಸುವ ಜೈನ ಪಂಡಿತ ಭಟ್ಟಾಕಳಂಕನು ಸಹಾಯಕ್ಕೆ ಧಾವಿಸುತ್ತಾನೆ. ಈತನು ಬೌದ್ಧ ಸಭೆಯನ್ನು ಹೊಕ್ಕು, ಸುಗತಶಾಸ್ತ್ರವನ್ನು ಪೂರ್ವಪಕ್ಷಕ್ಕೆ ತಂದು, ಲಿಂಗದ ಮಹತ್ವ ಕುರಿತಂತೆ ತನ್ನ ವಾದ ಸರಣಿಯನ್ನು ಮುಂದುವರೆಸಿ ವಾದದಲ್ಲಿ ಗೆಲ್ಲುತ್ತಾನೆ. ಇಲ್ಲಿ ನಾವು ಗುರುತಿಸಬೇಕಾದ ಎರಡು ಪ್ರಮುಖ ವಿಷಯಗಳಿವೆ. ಮೊದಲನೆಯದು ತನ್ನದಲ್ಲದ ಧರ್ಮದ ಮಹತ್ವವನ್ನು ಕುರಿತಂತೆ ಪಂಡಿತನೊಬ್ಬನು ವಾದಿಸುವುದು. ಇದು ಆ ಕಾಲದಲ್ಲಿ ಎಷ್ಟರ ಮಟ್ಟಿನ

ವಾಸ್ತವ. ಇದು ವಿಚಾರಿಸಲೇಬೇಕಾದ ಅಂಶ. ಪಂಡಿತರಾದವರು ಎಲ್ಲಾ ಮತಗಳ ಕೃತಿಗಳನ್ನು ಅಧ್ಯಯನ ಮಾಡಿರುತ್ತಿದ್ದರು ಎಂಬುದಕ್ಕೆ ಇದು ಸಾಕ್ಷಿಯೂ ಆಗಿದೆ. ಇಲ್ಲವಾದರೆ ಲಿಂಗದ ವಿಷಯದಲ್ಲಿ ಬೌದ್ಧರನ್ನು ಸೋಲಿಸಲು ಸಾದ್ಯವಾಗುತ್ತಿರಲಿಲ್ಲ. ಈ ವಾದದ ಮುಖಾಂತರವಾದರೂ ಕವಿಯು ಲಿಂಗದ ಮೂಲವನ್ನು ಕಟ್ಟಿಕೊಟ್ಟಿದ್ದರೆ ಚನ್ನಾಗಿತ್ತು. ಅಲ್ಲಿ ಲಿಂಗದ ಪರವಾಗಿ ಆ ಜೈನ ಪಂಡಿತನು ಮಾಡಿದ ವಾದವನ್ನು ಪೂರ್ಣವಾಗಿ ಕವಿಯು ಕಟ್ಟಿಕೊಟ್ಟಿಲ್ಲ. ಜೈನ ಕವಿಯೋರ್ವನಿಗೆ ಶೈವ ಮೂಲವನ್ನು ಕಟ್ಟಿಕೊಡಲು ಅಂತಹ ಅಗತ್ಯವೇನೂ ಇರಬೇಕಿಂದಿಲ್ಲ. ಇಲ್ಲಿ ಆತನಿಗೆ ಪ್ರಮುಖವಾಗಿದ್ದು ಎರಡೇ ವಿಚಾರ. ತಮ್ಮ ಎದುರಾಳಿಯಾದ ಬೌದ್ಧರೊಡನೆ ಸೆಣೆಸಲು ಕಾರಣ ಸಿಕ್ಕಿದ್ದು ಮತ್ತು ಸುಲಭವಾಗಿ ಶೈವರು ತಮಗೆ ಅಧೀನವಾಗಿದ್ದು. ಇನ್ನೊಂದು ಅಂಶವೆಂದರೆ ಜೈನರು ಒಂದೇ ಏಟಿಗೆ ಎರಡು ಗುರಿಗಳನ್ನು ಹೊಡೆದದ್ದು. ಶೈವರ ಮೇಲೆ ಜಯ ಸಾಧಿಸಿದ ಬೌದ್ಧರನ್ನು ಗೆಲ್ಲುವ ಮೂಲಕ ಎರಡೂ ಮತಗಳ ಮೇಲೆ ವಿಜಯ ಸಾಧಿಸಿದಂತೆ ಆಯಿತು.

ನಮಗೆ ಹೆಚ್ಚಾಗಿ ಬುದ್ಧಧರ್ಮದ ಕುರಿತು ಉಲ್ಲೇಖ ಸಿಗುವುದು 7–8ನೇ ಶತಮಾನಕ್ಕಿಂತ ಮುಂಚೆಯೇ. ಆ ನಂತರ ವಿರಳ. ಅಲ್ಲಿಯವರೆಗೂ ಅವರು ಇತರ ಧರ್ಮಗಳ ವಿರುದ್ಧ ನಡೆಸಿದ ಸಂಘರ್ಷಗಳು ತಿಳಿಯುತ್ತವೆ. ಮತ್ತು ಅದರಲ್ಲಿ ವಿಜಯಿಯಾದ ಪ್ರಸಂಗಗಳು ದೊರೆಯುತ್ತವೆ. ಆದರೆ ಆ ನಂತರದ ದಾಖಲೆಗಳಲಿ ಸಿಗುವುದು ಬರೀ ಬೌದ್ಧರ ಸೋಲು ಮಾತ್ರ. ಅದಕ್ಕೆ ಹೆಚ್ಚಾನೆಚ್ಚು ಸೋಲುಗಳು ಜೈನ ಧರ್ಮದಿಂದಲೇ ಆಗಿವೆ.

ಕ್ರಿ.ಶ. 1129ರ ಶಾಸನವೊಂದು ಜೈನ ವಿದ್ವಾಂಸ ಅಕಳಂಕ ಎನ್ನುವವನನ್ನು ಕುರಿತು ಪ್ರಸ್ತಾಪಿಸುತ್ತದೆ[17]. ಈತನು ಬೌದ್ಧ ಪಂಡಿತನೋರ್ವನನ್ನು ವಾದದಲ್ಲಿ ಸೋಲಿಸಿ, ಜೈನಧರ್ಮದ ಮಹತ್ವವನ್ನು ಹೆಚ್ಚಿಸುತ್ತಾನೆ. ಆ ಸೋತ ಬೌದ್ಧನು ತನ್ನ ಪಾಪಗಳನ್ನು ಪರಿಹರಿಸಿಕೊಳ್ಳುವ ಸಲುವಾಗಿ ಅಕಳಂಕನ ಪಾದದೂಳಿನಲ್ಲಿ ಸ್ನಾನ ಮಾಡಿದನಂತೆ. ಆ ಬೌದ್ಧ ಪಂಡಿತನ ಹೆಸರನ್ನು ಇಲ್ಲಿ ದಾಖಲಿಸಿಲ್ಲ. ಇದರ ನಂತರದ ಕಾಲದ ಇನ್ನೊಂದು ಶಾಸನವೂ ಇದೇ ಅಕಲಂಕನು ಬೌದ್ಧರನ್ನು ಸೋಲಿಸಿದ್ದನ್ನು ಹೇಳುತ್ತದೆ[18]. **"ತಸ್ಯಾಕಳಂಕ ದೇವಸ್ಯಾಮಹಿಮಾಕೇನ ವರ್ಣ ಲೇಯದ್ವಾಕ್ಯಖಡ್ಗಪಾತೇನ ಹತೋ ಬುದ್ಧೋ ವಿಬುದ್ದಿಸ"** ಎನ್ನುತ್ತದೆ. ತನ್ನ ವಾಕ್‌ಚಾತುರ್ಯವೆಂಬ ಖಡ್ಗದಿಂದ ಅಜ್ಞಾನಿಗಳಾದ ಬೌದ್ಧರನ್ನು ಅಕಳಂಕದೇವನು ಸೋಲಿಸಿದನು ಎಂದು ಇದರ ಅರ್ಥ. ಇದೇ ಅಕಳಂಕನನ್ನು ಕುರಿತು ಜನ್ನನು ಸಹ ತನ್ನ ಕೃತಿಯಲ್ಲಿ ಪ್ರಸ್ತಾಪಿಸುತ್ತಾನೆ[19].

**"ವಿಕಳ ಸ್ವಪಕ್ಷಮೆನಿಸಿದುದಕಳಂಕುನ**

**ವಾಕ್ಯ ವಾಕ್ಯ ವಜ್ರಹತಿಯಿಂನೈಯಾ ।**

ಯಿಕ ಪಾರಮರ್ಷ ಮೀಮಾರಿ

ಸಕಬಾರ್ಹಸ್ವತ ಬೌದ್ಧಕಯಳಕುದರ ಕುಸ್ಯಂ"

ಎನ್ನುತ್ತಾನೆ. ಇಲ್ಲಿ ಜನ್ನನು ಕೆಲವು ಮತಗಳ ಹೆಸರನ್ನು ದಾಖಲಿಸಿ, ಅವುಗಳು ಅಕಳಂಕನ ಮಾತುಗಳಿಗೆ ಎದುರಿಸಲಾರದೆ ಸೋತ ವಿಷಯವನ್ನು ಹೇಳಿದ್ದಾನೆ. ಇದಕ್ಕೂ ಮೇಲಿನ ಘಟನೆಗೆ ಸಂಬಂಧಿಸಿದಂತೆ, ಅಜ್ಞಾನಿಗಳಾದ ಬೌದ್ಧರನ್ನು ಅಕಳಂಕನು ಸೋಲಿಸುತ್ತಾನೆ. ಹೀಗೆ ಬೌದ್ಧರನ್ನು ಸೋಲಿಸಿ ಸಿಂಹಳ ದ್ವೀಪಕ್ಕೆ ಓಡಿಸಲಾಯಿತಂತೆ. ಇಲ್ಲಿಯೂ ಸಹ ಆ ಬೌದ್ಧ ವಿದ್ವಾಂಸನ ಹೆಸರು ದೊರೆಯುವುದಿಲ್ಲ. ಈ ಅಕಳಂಕ ದೇವನ ಪ್ರಸ್ತಾಪ ಬಂದಲೆಲ್ಲ ಬೌದ್ಧರನ್ನು ಸೋಲಿಸಿದುದಾಗಿಯೇ ಹೇಳಲಾಗಿದೆ. ಅವನು ಬೌದ್ಧರನ್ನು ಅಷ್ಟು ಗಂಭೀರವಾಗಿ ಪರಿಗಣಿಸಿದ್ದನೇ?. ಈಗಾಗಲೇ ಅವನತಿಯ ಅಂಚಿನಲ್ಲಿದ್ದ ಅವರನ್ನು ಸಂಪೂರ್ಣವಾಗಿ ಇಲ್ಲಿಂದ ತೊಲಗಿಸುವ ಇರಾದೆ ಆ ಸಮಯದಲ್ಲಿತ್ತೆ ಎನ್ನುವುದನ್ನು ನಾವು ಯೋಚಿಸಬೇಕಿದೆ. ಏನಿದ್ದರೂ ಇವು ಬೌದ್ಧರ ಕೊನೆಯ ದಿನಗಳು. ಬೌದ್ಧರು ಕರ್ನಾಟಕದಿಂದ ದೂರ ಸರಿಯಲು ಈ ಕಾರಣಗಳನ್ನು ನಾವು ಇಟ್ಟುಕೊಳ್ಳಬಹುದು. ದೇವಚಂದ್ರನ ರಾಜಾವಳೀ ಕತಾಸಾರದಲ್ಲಿಯೂ ಇಂತದ್ದೇ ವಾದದ ಕಾರಣದಿಂದಾಗಿ ಸೋತ ಬೌದ್ಧರನ್ನು ಸಿಂಹಳ ದ್ವೀಪಕ್ಕೆ ಓಡಿಸಲಾಯಿತು ಎಂದು ಹೇಳಲಾಗಿದೆ. ಅಂದರೆ ಈಗ ಸಿಂಹಳದಲ್ಲಿ ಬೌದ್ಧರು ಪ್ರಬಲರಾಗಿರುವುದಕ್ಕೆ ಈ ಕಾರಣವನ್ನು ನಾವು ಊಹಿಸಬಹುದು. ಆಶೋಕನು ಸಿಂಹಳದಲ್ಲಿ ಅದಾಗಲೇ ಬೌದ್ಧವನ್ನು ಅಲ್ಲಿ ನೆಲೆಗೊಳಿಸಿದ್ದರಿಂದ ಮತ್ತು ಅಲ್ಲಿ ತಮಗೆ ಆಶ್ರಯ ಸಿಗಬಹುದಾದ ನಿರೀಕ್ಷೆಯಿಂದ ಬಹುತೇಕ ದಕ್ಷಿಣ ಭಾರತದಿಂದ ಓಡಿಸಲ್ಪಡುತ್ತಿದ್ದ ಬೌದ್ಧರೆಲ್ಲರೂ ಸಿಂಹಳದಲ್ಲಿಯೇ ತಮ್ಮ ನೆಲೆಯನ್ನು ಕಂಡುಕೊಳ್ಳುತ್ತಿದ್ದರು.

ಈ ಅಕಳಂಕದೇವನ ಸಮಕಾಲೀನನಾದ ದೇವಕೀರ್ತಿ ಪಂಡಿತರ ಬಗ್ಗೆ ಹೇಳುವಾಗಲೂ ಬೌದ್ಧರ ಪ್ರಸ್ತಾಪ ಬರುತ್ತದೆ. "ದೇವಕೀರ್ತಿ ಪಂಡಿತನು ಚಾರ್ವಾಕ, ಬೌದ್ಧ, ನೈಯಾಯಿಕ, ಕಾಪಾಲಿಕ ಮತ್ತು ವೈಶೇಷಿಕರನ್ನು ಪರಾಭವಗೊಳಿಸಿದ" ಎಂದು ಶಾಸನದಲ್ಲಿ ಹೇಳಲಾಗಿದೆ[20]. ಇಲ್ಲಿ ಹೇಳಿರುವ ಹೆಸರುಗಳಲ್ಲಿ ಆ ಕಾಲದಲ್ಲಿ ಪ್ರಭಾವ ಶಾಲಿಯಾಗಿದ್ದ ಶೈವ ಮತ್ತು ವೈಷ್ಣವರ ಹೆಸರು ಪ್ರಸ್ತಾಪವಾಗಿಲ್ಲ. ಸಣ್ಣ ಸಂಖ್ಯೆಯವರನ್ನು ಅವರು ಸೋಲಿಸುತ್ತಿದ್ದರು ಎಂದು ಹೇಳಬಹುದು. ಅಥವಾ ಶೈವ ಮತ್ತು ವೈಷ್ಣವರನ್ನು ಸೋಲಿಸುವಷ್ಟು ಪ್ರಭಾವವನ್ನು ಅವರಾಗಲೇ ಕಳೆದುಕೊಂಡಿರಬಹುದು. ಅಂದರೆ ಅಷ್ಟೊತ್ತಿಗಾಗಲೇ ಬೌದ್ಧರು ತೀರಾ ಸಣ್ಣ ಪ್ರಮಾಣದಲ್ಲಿದ್ದರು ಎಂದು ಅರ್ಥವಾಗುತ್ತದೆ.

ಜೈನರ ಪ್ರಾಬಲ್ಯವಿದ್ದುದು 12ನೇ ಶತಮಾನದ ವರೆಗೆ ಮಾತ್ರವೇ. ಅಷ್ಟೊತ್ತಿಗಾಗಲೇ ವೀರಶೈವರು ಪ್ರಬಲವಾಗಿ ಬೆಳೆಯಲು ಶುರುಮಾಡಿದ್ದರು. ಈ ಸಮಯದಿಂದ ಶುರುವಾಗಿ ಮುಂದೆ

ಬರುವ ಬಹುತೇಕ ದಾಖಲೆಗಳಲ್ಲಿ ವೀರಶೈವವೇ ವಿಜಯದ ಸಮೂಹವಾಗಿ ಕಾಣಿಸಿಕೊಂಡಿದೆ. ಅದು ವಾದ–ವಿವಾದವೇ ಇರಲಿ, ಧರ್ಮಸಂಘರ್ಷವೇ ಇರಲಿ, ಅಥವಾ ಇನ್ಯಾವುದೇ ಧರ್ಮಕ್ಕೆ ಸಂಬಂಧಿಸಿದ ವಿಷಯವಾಗಿದ್ದರೂ ಸಹ. ಮತ್ತು ಬಹುತೇಕ ಸೋಲುವುದು ಜೈನರು. ಒಂದು ಸಮುದಾಯವು ಪ್ರಬಲವಾಗಿ ಬೆಳೆಯಬೇಕಾದರೆ, ಮತ್ತೊಂದು ಪ್ರಬಲವಾಗಿದ್ದ ಸಮುದಾಯವೊಂದನ್ನು ಸೋಲಿಸುವ ಮೂಲಕವೇ ಆಗಬೇಕು. ಶೈವರ ವಿಷಯದಲ್ಲಿ ಆಗಿದ್ದು ಇದೆಯೆ. ಇದಕ್ಕೆ ಪ್ರಾಸಂಗಿಕವಾಗಿ ಉದಾಹರಣೆಗಳನ್ನು ನೋಡುವುದಾದರೆ ಅವು ಹೀಗಿವೆ.

ರಾಮೇಶ್ವರ ದೇವಾಲಯದ ಪಾಶುಪತ ಗುರುಗಳಿಂದ ಚಂದ್ರಾಭರಣ ಪಂಡಿತರು ತಮ್ಮ ವಾಕ್ ವೈಭವದಿಂದ ಅನೇಕ ಜೈನ ಯತಿ–ಪಂಡಿತರುಗಳನ್ನು ಸೋಲಿಸಿದವರು. ಇವರನ್ನು ಶಾಸನವೊಂದು 'ಪ್ರತಿವಾದೀ ಬೌಘಸಿಂಹಂ, ಕಂದರ್ಪೋಗ್ರಚಾಪಂ, ಸ್ಖಳಿತ ವಿಷಯ ಲೇಪಂ, ವೇಪಿತ ಕ್ರೂರರೂಪಂ ಮುಂತಾಗಿ ಹೊಗಳುತ್ತದೆ[21]. ಈ ಹೊಗಳಿಕೆಯಲ್ಲಿ ಬಂದಿರುವ ಬೌಘಸಿಂಹಂ, ಉಗ್ರಚಾಪಂ, ಕ್ರೂರರೂಪಂ ಮುಂತಾದ ಪದಗಳೇ ಭಯವನ್ನುಂಟು ಮಾಡುವಂತಿವೆ. ಇವುಗಳ ಉಗ್ರತೆಯ ಆಧಾರದ ಮೇಲೆಯು ಆ ಕಾಲದ ಧಾರ್ಮಿಕ ಪರಿಸ್ಥಿತಿಯನ್ನು ಅರಿಯಬೇಕಿದೆ. ಇಷ್ಟಲ್ಲದೆ. 'ಜೈನ ಬಂಧುರ ಚಂದ್ರಾಭರಣ ವ್ರತೀಶನಿದಿರೊಳು ನೀನೆಂಬವೋಲೊಪ್ಪುಗುಂ ಸಕಳಾಸ್ತಾನ ಹೊಳೆಯ್ದೆ . . . ಇನ್ನು ಮುಂತಾಗಿ ಅಲ್ಲಿ ಹೇಳಲಾಗಿದೆ. ಆ ಜೈನಯತಿ ಯಾರೆಂಬುದು ಉಲ್ಲೇಖವಿಲ್ಲ. ಈ ಕಾಲಘಟ್ಟದ ಶೈವ ಸಂಬಂಧಿತ ಶಾಸನಗಳಲ್ಲಿ ಪ್ರತಿವಾದಿಯಾಗಿ ಪ್ರಮುಖವಾಗಿ ಗುರುತಿಸಿಕೊಳ್ಳುವುದು ಜೈನರೇ. ಬೌದ್ಧರಾಗಲೀ, ಚಾರ್ವಾಕರಾಗಲಿ ಇನ್ನಿತರರಾಗಲಿ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆ ದಾಖಲೆಗಳನ್ನು ಹೊಂದಿದ್ದಾರೆ.

ಇನ್ನೊಂದು ಶಾಸನವಿದೆ[22]. ಇದು 'ಮಹೇಶ್ವರ ಮುನಿ' ಎಂಬುವವನ ಕುರಿತಾದದ್ದು. ಈತನು ಸುಮಾರು 70 ಮಹಾ ಸಭೆಗಳಲ್ಲಿ ವಾದಮಾಡಿ ವಿಜಯಶಾಲಿಯಾದನೆಂದು, ದಿಗಂಬರ ವಿಮಲಚಂದ್ರನು ಶೈವ, ಪಾಶುಪತ, ಬೌದ್ಧ, ಕಾಪಾಲಿಕ ಮತ್ತು ಕಾಪಿಲರನ್ನು ಉದ್ಧೇಶಿಸಿದ ಎಚ್ಚರಿಕೆ ಪತ್ರವನ್ನು ಶತ್ರುಭಯಂಕರನೆಂಬ ಅರಸನ ವಿಶಾಲವಾದ ಅರಮನೆ ದ್ವಾರದಲ್ಲಿ ಹಾಕಿಸಿ, ಅದರಿಂದ ವಾದಿಗಳ ಹೃದಯದಲ್ಲಿ ಭಯವನ್ನುಂಟು ಮಾಡಿದನೆಂದು ಶಾಸನದಲ್ಲಿ ಹೇಳಲಾಗಿದೆ. ಇಲ್ಲಿ 'ಮಹೇಶ್ವರ ಮುನಿ' ಯಾರೆಂಬುದೇ ಸ್ಪಷ್ಟವಾಗುವುದಿಲ್ಲ. ಶೈವದ ಹಿನ್ನೆಲೆಯ ಹೆಸರು ಕಾಣಿಸಿದರೂ ಸಹ ಈತನು ಎಚ್ಚರಿಕೆ ನೀಡುವ ಪಂತಗಳಲ್ಲಿ ಶೈವ, ಪಾಶುಪತ, ಕಾಪಾಲಿಕಗಳು ಸೇರಿವೆ. ಹಾಗಾದರೆ ಈತನನ್ನು ಜೈನರೆಂದೇ ಭಾವಿಸಬೇಕಾಗುತ್ತದೆ. ಜೈನರೂ ಸಹ ವಾದವಿವಾದದ ಜಗಳದಲ್ಲಿ ಹಿಂದೆ

ಬಿದ್ದಿರಲಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅರಸನ ಅರಮನೆಯ ದ್ವಾರದಲ್ಲಿ ಹಾಕಿಸಿದ್ದರೆಂದರೆ ಅರಸನೂ ಸಹ ಜೈನನಿರಬೇಕು ಮತ್ತು ಜೈನ ಪಕ್ಷಪಾತಿಯಿರಬೇಕು.

ಇದೇ ಸಮಯಕ್ಕೆ ಸಲ್ಲುವ ಶಿವಭಕ್ತನ ರಗಳೆಯೊಂದು ಹೀಗಿದೆ[23]. ಬಾಹೂರ ಬೊಮ್ಮಿ ತಂದೆ ಎನ್ನುವವನು ಕಲ್ಯಾಣಪುರದಲ್ಲಿ ಬಿಳಿಯ ಜೋಳವನ್ನು ಮಾರುತ್ತಿದ್ದನು. 'ಎಲೆಲೆ ಶಂಕರಗಂಡನಂ ಕೊಳ್ಳಿರೇ' ಎಂದು ಕೂಗುತ್ತಿದ್ದನು. ಬಹುಶಃ ಎಲ್ಲಾ ವಸ್ತುಗಳಲ್ಲೂ ಶಿವನನ್ನು ಕಾಣುವಂತಹ ನಿಷ್ಠ ಭಕ್ತನಿದ್ದಿರಬೇಕು ಈತ. ಈ ಕಾರಣಕ್ಕಾಗಿ ಜೋಳವನ್ನೂ ಶಿವನೆಂದೇ ಭಾವಿಸಿದ್ದಾನೆ. ಇದನ್ನು ಕಂಡ ಸವಣನೊಬ್ಬನು ಕಟಕಿಯಾಡುತ್ತಾ

**'ಜೋಳದ ಪೆಸರು ಶಂಕರನ ನಾಮವೆಂತಾಯ್ತು**

**ಆಳಿಗೊಂಬರನರಿಯರಕಟ ಶಂಕರನಾಯ್ತು**

**ಇದಕ್ಕೆ ಪ್ರತ್ಯಕ್ಷವಂ ತೋರಬಲ್ಲವರುಂಟೇ'**

ಎಂದು ಸವಾಲು ಹಾಕುತ್ತಾನೆ. ಬೊಮ್ಮಿ ತಂದೆಯು ಇದನ್ನು ಸ್ವೀಕರಿಸಿ ಸಾಧಿಸಲು ನಿಲ್ಲುತ್ತಾನೆ. ಕವಿಯು ಈ ಸಮಯವನ್ನು ಹೀಗೆ ಉದ್ಗರಿಸುತ್ತಾನೆ.

**'ಪರಸಮಯಿಗಳು ಸರಿಯಲನು ಮಾಡುತಿರಲಲ್ಲಿ**

**ಪರಮ ಗುರುವೇ ಶಂಕರಾ ಶಂಕರಾ ಎಂದು**

**ಕರೆಯೆ ತ್ರಿಣಯನಂ ಭಕ್ತರೆಂದುದನುದ್ಧರಿಸುವಂತೆ**

**ಹರುಷದಿಂದೋ ಎಂಬ ದನಿ ಮೂವಡಿಸಿ'**

ಆ ಭಕ್ತನನ್ನು ಗೆಲ್ಲಿಸುತ್ತಾನೆ. ಇದು ಮಾತ್ರವೇ ಅಲ್ಲ, ಈ ಕಾಲದ ಎಲ್ಲಾ ರಗಳೆಗಳಲ್ಲಿಯೂ ಇಂತದ್ದೆ ರೀತಿಯ ಪರಸಮಯಿಗಳೊಡನೆ ಜಗಳವನ್ನು ನಿಲ್ಲಿಸಿ, ಅದರಲ್ಲಿ ಶಿವಭಕ್ತನನ್ನು ಗೆಲ್ಲಿಸುವ ಕತೆಗಳೇ ಬರುತ್ತವೆ. ವಿಶೇಷವಾಗಿ ಹರಿಹರನಲ್ಲಿ ಈ ಕತೆಗಳ ಸಂಖ್ಯೆ ಹೆಚ್ಚು. ಈ ಹಿಂದೆಯೇ ಹೇಳಿದಂತೆ ಬರೆದಾತನು ಯಾವ ಮತಕ್ಕೆ ಸೇರಿದವನಿರುತ್ತಾನೋ ಆ ಮತವೇ ವಾದದಲ್ಲಿ ವಿಜಯಿಯಾಗುವ ಮೆಚ್ಚಿನದೆಂದು. ಇಲ್ಲೂ ಹಾಗೆಯೆ. ಬರೆದಾತನು ಜೈನನಾಗಿದ್ದರೆ ಜೋಳದಲ್ಲಿ ಜಿನನು ಕಾಣಿಸುತ್ತಿದ್ದ. ಒಟ್ಟಿನಲ್ಲಿ ಇಂತಹ ಪ್ರಸಂಗಗಳ ಮೂಲಕ ಜನರಲ್ಲಿ ತಮ್ಮ ಮತದ ಕುರಿತಾಗಿ ಅಚ್ಚೊತ್ತುವುದು ಅವರ ಉದ್ದೇಶ ಅಷ್ಟೇ.

ಈ ರೀತಿಯ ನೇರ ವಾದ–ವಿವಾದಗಳು ಮಾತ್ರವೇ ಅಲ್ಲದೇ ಅನೇರವಾಗಿ ಅಂದರೆ ತಮ್ಮ ಕೃತಿಗಳ ಮೂಲಕ, ರಚನೆಗಳ ಮೂಲಕ ಅಥವಾ ಪ್ರಚಾರ ಸಭೆಗಳ ಒಬ್ಬರನ್ನೊಬ್ಬರು ನಿಂದಿಸುವುದು ಸಹ ಆ ಕಾಲದಲ್ಲಿ ನಡೆಯುತ್ತಿತ್ತು. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಬ್ರಹ್ಮಶಿವನ

ಸಮಯಪರೀಕ್ಷೆ. ಈ ಕೃತಿಯ ರಚನೆಯ ಕಾಲ ಕ್ರಿಶ 13–14ನೇ ಶತಮಾನ. ಬಹುತೇಕವಾಗಿ ಜೈನರು ಅಳಿವಿನ ಅಂಚಿನಲ್ಲಿದ್ದ ಕಾಲವದು. ಈ ಕಾಲದಲ್ಲಿ ಈ ಜೈನ ಕವಿಯು ತನ್ನ ಧರ್ಮದ ತಿರುಳನ್ನು ಶಕ್ತಗೊಳಿಸುವ ಪ್ರಯತ್ನವನ್ನು ಮಾಡಿದನು. ತನ್ನ ಧರ್ಮದ ಶ್ರೇಷ್ಠತೆಯನ್ನು, ಇತರೆ ಮತಗಳ ಕನಿಷ್ಟತೆಯನ್ನು ತೋರಿಸಲೇಂದೇ ಈ ಕೃತಿಯನ್ನು ಈತನು ರಚನೆ ಮಾಡಿದಂತಿದೆ. ಆ ಸಮಯದಲ್ಲಿ ಇದ್ದ ಎಲ್ಲಾ ಮತಗಳನ್ನು ಈತ ಅಂಕ–ಅಂಕವಾಗಿ ನಿಂದಿಸುತ್ತಾನೆ. ಇಡೀ ಕೃತಿಯು ಇತರ ಮತಗಳನ್ನು ಪ್ರತಿವಾದಿ ಸ್ಥಾನದಲ್ಲಿಟ್ಟು ಸಂವಾದ ರೂಪದಲ್ಲಿ ಮುಂದುವರೆಯುತ್ತಾ ಹೋಗುತ್ತದೆ.

**ನರಸಿಂಹನೆಂಬ ನಾಮಂ**
**ಪರಿಕಿಸುವೊಡೆ ಪುರುಷಸಿಂಹನೆಂಬಂದಮುದಂ ।**
**ನರರಜ್ಞಾನದೆ ಹರಿ ಕೇ**
**ಸರಿವದನನುಮಾದನೆಂಬರದು ಕೂಡುಗುಮೇ ॥**[25]

ಎಂದು ವೈಷ್ಣವರನ್ನು ನಿಂದಿಸುತ್ತಾನೆ. ಇದು ವಿಷ್ಣುವಿನ ಉಗ್ರನರಸಿಂಹ ಅವತಾರವನ್ನು ಅಣಕಿಸುತ್ತದೆ. ಮನುಷ್ಯನೂ ಪ್ರಾಣಿಯು ಸೇರಿ ಒಂದು ಜೀವವಾಗುವುದು ವಾಸ್ತವ ಅಲ್ಲವೇ ಅಲ್ಲ ಎಂದು ಕವಿವಾದಿಸುತ್ತಾನೆ.

**ಜನನಿಯ ಯೋನಿಯೊಳೊಗೆವುದು**
**ಕನಿಷ್ಠವೆನಗೆಂದು ತೇಳ ತೆರದಿಂದಂ ತಾಂ**
**ಜನನಿಯ ಬಸಿರಂ ಸೀಳ್ದೊಗೆ**
**ದನಾಪ್ತನಲ್ಲೆಂತುಮ ಪ್ರಬುದ್ಧಂ ಬುದ್ಧಂ**[26]

ಎಂದು ಬುದ್ಧನ ಜನನದ ಕತೆಯನ್ನು ಹಂಗಿಸುತ್ತಾನೆ.

**ಪೆಣನಂ ಪೆಸರ್ಗೊಳೆ ದೋಷಂ**
**ಪೆಣದೊಳ್ ಕುಳ್ಳಿರ್ದು ಮಾಸಮಂ ತಿಂಬಾ ಕ**
**ಳ್ಳುಣಿಯಂ ಭೈರವಿಯಂ ನಿ**
**ರ್ಗುಣಿಯಂ ಪೂಜಿಪನನಂಟಲಾಗದು**[27]ಎಂದು ಭೈರವಿಯನ್ನು ಹಂಗಿಸಿದ್ದಾನೆ.

**“ನರರಸ್ಥಿ ಹಸ್ತಿಚರ್ಮಂ**
**ಪರೇತವನದೊಳ(ಗೆ) ಪಾವುಶೂಲಂ ಭಸ್ಮಂ**

**ಮರುಳ ಪಡೆಯಂಬನಿತುಂ**

**ಪೊರಗಾಗಿರೆ ಬಣ್ಣಿಸರ್ ತದಾಪ್ತನನೆಂದುಂ"**

ಎಂದು ಶಿವನನ್ನೂ ಹಂಗಿಸುತ್ತಾನೆ. ಆ ಕಾಲದಲ್ಲಿ ಪ್ರಚಲಿತದಲ್ಲಿಂತಹ ಇಂತಹ ಅವತಾರದ, ಪವಾಡದ ಕತೆಗಳೆಲ್ಲವನ್ನು, ಆಚರಣೆಯಲ್ಲಿನ ಢಾಂಬಿಕ ಮತ್ತು ಮೂಡನಂಬಿಕೆಗಳಿಂದ ಕೂಡಿದ್ದ ಇತರೆ ಮತಗಳ ಕ್ರಿಯೆಗಳನ್ನು ಈತ ಹಂಗಿಸುತ್ತಾನೆ. ಆದರೆ ತನ್ನ ಧರ್ಮದ ಪ್ರತಿ ಆಚರಣೆಯೂ ಶ್ರೇಷ್ಠವೆಂದೇ ನಂಬಿರುವ ಈತ ಅವುಯಾವುದರ ಬಗ್ಗೆಯೂ ವಿಮರ್ಶಿಸುವ ಗೋಜಿಗೆ ಹೋಗುವುದಿಲ್ಲ. ಆದರೂ ಈತನ ಸಮಕಾಲೀನರಾದ ಇತರೆ ಮತೀಯರು ಇವರನ್ನು ಹಳಿಯದೇ ಬಿಟ್ಟಿಲ್ಲ.

ಜೈನರ ಪುನರ್ಜನ್ಮದ ಕತೆಗಳು, ಆತ್ಮದ ಇರುವಿಕೆ, ಕರ್ಮಸಿದ್ಧಾಂತ, ಜೈನಮುನಿಗಳ ಸ್ವಹಿಂಸೆ ಮುಂತಾದವು ಎಲ್ಲಾವನ್ನೂ ಇತರೆ ಮತೀಯರು ವಿಡಂಬನೆಯನ್ನು ಮಾಡಿದ್ದಾರೆ. ಪರಸ್ಪರರನ್ನು ಹೀಗೆ ನಿಂದಿಸುತ್ತಾ, ಕನಿಷ್ಠಗೊಳಿಸುತ್ತಾ ಬಂದಿರುವ ಈ ವಾದ ಸಂಪ್ರದಾಯವು ಈಗಲೂ ಪ್ರಚಲಿತದಲ್ಲಿರುವುದನ್ನು ನಾವು ಕಾಣಬಹುದಾಗಿದೆ.

ಕೃತಿಗಳ ಒಳಗೆ ಮಾತ್ರವೇ ಈ ರೀತಿಯ ವಾದಗಳು ಇರದೇ, ಕೃತಿಗಳ ಕುರಿತಾಗಿಯೂ ಈ ಸವಾಲುಗಳು ಮುಂದುವರೆಯುತ್ತಿದ್ದವು. ಇದಕ್ಕೆ ಪ್ರೌಢದೇವರಾಯನ ಕಾಲದ ಒಂದು ಘಟನೆಯನ್ನು ಹೇಳಬಹುದು[28]. ಈತನ ಆಸ್ಥಾನದಲ್ಲಿ ಮುಕುಂದಪೆದ್ದಿ ಮತ್ತು ವೃಂದಾಚಾರ್ಯ ಎಂಬ ಮಂತ್ರಿಗಳು ಇದ್ದರು. ಅವರು ವೈಷ್ಣವರಾಗಿದ್ದರು. ದಂಡನಾಯಕನಾದ ಕೇಶಿರಾಜನು ಶೈವನಾಗಿದ್ದನು. ಈತನು ಆ ವೈಷ್ಣವರನ್ನು ಸೋಲಿಸಿ, ತನ್ನ ಕೃತಿಯ ಮೆರವಣಿಗೆಯನ್ನು ಮಾಡಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಅವರು ವೈಷ್ಣವಧರ್ಮದ ಹಿರಿಮೆಯನ್ನು ಸಾರುವ ರಾಮಾಯಣ ಮತ್ತು ಭಾರತಗಳನ್ನು ಹದಿನೆಂಟು ಬಾರಿ ಮೆರವಣಿಗೆ ಮಾಡಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಮತ್ತೆ ಶೈವ ಮುಖಂಡರಾದ ನೂರೊಂದುಜನ ವಿರಕ್ತರು ಸಕಲಪುರಾತನ ವಚನಗಳ ಏಕೋತ್ತರ ಶತಸ್ಥಲವನ್ನು ರಾತ್ರಿಯಲ್ಲಿ ಮೆರವಣಿಗೆ ಮಾಡಿಸುತ್ತಾರೆ. ಹೀಗೆ ಕೃತಿಗಳನ್ನು ಇಟ್ಟುಕೊಂಡು ಒಂದು ಮತದವರು ಮತ್ತೊಂದು ಮತದವರ ಮೇಲೆ ಪೈಪೋಟಿ ಮಾಡುವ ಉದಾಹರಣೆಗಳು ನಮಗೆ ಸಿಗುತ್ತವೆ. ಈ ರೀತಿಯ ಸಂಘರ್ಷವನ್ನು ಕವಿಗಳ ವಿಚಾರದಲ್ಲಿಯೂ ಸಹ ಕಾಣಬಹುದು. ಈ ದಂತಕತೆಯು ಕುಮಾರವ್ಯಾಸ ಮತ್ತು ಚಾಮರಸನ ಕುರಿತಾದುದಾಗಿದೆ[29]. ಈ ಕತೆಯ ಪ್ರಕಾರ ಕುಮಾರವ್ಯಾಸ ಎಂದು ಕರೆಯಲ್ಪಡುವ ಗದುಗಿನ ನಾರಾಣಪ್ಪ ಮತ್ತು ನಾರಣಾಪುರದ ಚಾಮರಸರು ಭಾವ ಮೈದುನರು. ಈ ಇಬ್ಬರ ಕೃತಿಗಳ ಪರೀಕ್ಷೆಯ ಸಲುವಾಗಿ ರಾಜಸಭೆಯಲ್ಲಿ ನ್ಯಾಯವು ನಡೆಯುತ್ತದೆ. ಪಂಡಿತರು ಚಾಮರಸನ 'ಐದು ಪರ್ವ'ಗಳ ಕೃತಿಯನ್ನು ಕೈಯಲ್ಲಿ ಹಿಡಿದೊಡನೆ ಅದರಿಂದ ರಕ್ತವು ತೊಟ್ಟಿಕ್ಕುತ್ತದೆ. ಆ ಕಾರಣ

ಚಾಮರಸನು ಬಹುಮಾನಿತನಾಗುತ್ತಾನೆ. ಇದರಿಂದ ಅವಮಾನಗೊಂಡ ನಾರಾಣಪ್ಪನು ತನ್ನ ಹೆಂಡತಿಯಾದ ಚಾಮರಸನ ತಂಗಿಯ ಮೂಲಕ ಆ ಕೃತಿಯನ್ನು ಸುಡಿಸುತ್ತಾನೆ. ಈ ಕ್ರಿಯೆಯಿಂದ ಹೇಸಿದ ಚಾಮರಸನು ವೈಷ್ಣವರ ಕತೆ ಬರೆದ ತನ್ನ 'ಶಿವದ್ರೋಹ' ಪರಿಹಾರಕ್ಕಾಗಿ 'ಪ್ರಭುಲಿಂಗಲೀಲೆ'ಯನ್ನು ಬರೆಯುತ್ತಾನೆ. ಇದಿಷ್ಟು ಕತೆಯ ಸಾರ.

ಇವರಿಬ್ಬರ ಕಾಲಗಳು ನಿರ್ಧಾರವಾಗುವವರೆಗೆ ಈ ಕತೆಯಲ್ಲಿ ಸ್ವಲ್ಪವಾದರೂ ನಿಜಾಂಶವನ್ನು ಹುಡುಕಲಾಗದು. ಆ ಕಾಲದಲ್ಲಿ ಶೈವ ವೈಷ್ಣವರ ಮಧ್ಯ ಮದುವೆಸಂಬಂಧಗಳು ಅಪರೂಪವೇನೂ ಆಗಿರಲಿಲ್ಲ. ಇಲ್ಲೊಂದು ಊಹೆಯನ್ನು ಮಾಡಬಹುದು ಚಾಮರಸನು ಮೊದಲು ವೈಷ್ಣವನಿದ್ದು ಆ ಸಮಯದಲ್ಲಿ ಐದು ಪರ್ವಗಳ ಭಾರತವನ್ನು ಬರೆದಿರಬೇಕು. ನಂತರ ಶೈವನಾಗಿ ಬದಲಾದ ಮೇಲೆ ತನ್ನ ಪ್ರಖ್ಯಾತ ಕೃತಿಯಾದ 'ಪ್ರಭುಲಿಂಗಲೀಲೆ'ಯನ್ನು ಬರೆದಿರಬೇಕು. ಆದರೂ ಶಿವದ್ರೋಹ ಪರಿಹಾರಕ್ಕಾಗಿ ಎನ್ನುವ ಮಾತು ಅವನು ಮುಂಚಿನಿಂದಲೂ ಶೈವನೇ ಆಗಿದ್ದನು ಎಂಬುದನ್ನು ಧ್ವನಿಸುತ್ತದೆ. ಈಗ ಕೃತಿಗಳ ತೂಕದಲ್ಲಿ ಕುಮಾರವ್ಯಾಸ ಹಿಂದೆ ಬಿದ್ದ ಸಂಗತಿಯನ್ನು ನೋಡುವುದಾದರೆ ಅದು ತೀರ ಕಟ್ಟುಕತೆಯೆಂದು ತೋರುತ್ತದೆ. ಕಾರಣ ಕುಮಾರವ್ಯಾಸನ ಭಾರತ ಕೃತಿ ಈಗಲೂ ಸಹ ಕನ್ನಡದ ಯಾವತ್ತೂ ಕೃತಿಗಳ ಸ್ಥಾನದಲ್ಲಿ ಅಗ್ರದಲ್ಲಿ ನಿಲ್ಲುವಂತದ್ದಾಗಿದೆ. ಒಂದು ವೇಳೆ ಸುಟ್ಟುಹೋದ ಚಾಮರಸನ ಐದುಪರ್ವಗಳ ಭಾರತ ಕತೆಯು ಇವನಿದಕ್ಕಿಂತಲೂ ಉತ್ತಮವಿದ್ದಿತೇನೋ ಎಂದು ಭಾವಿಸುವುದಾದರೂ ಸಹ ಪ್ರಭುಲಿಂಗಲೀಲೆಯಲ್ಲಿನ ಕವಿಯ ಬರವಣಿಗೆಯ ಆಧಾರದ ಮೇಲೆ ಅದೂ ಕಷ್ಟ.

ರಾಘವಾಂಕ ಕವಿಯ ಕುರಿತಾಗಿಯೂ ಇಂತಹ ವಾದದ ಕತೆಯೊಂದು ಅಸ್ತಿತ್ವದಲ್ಲಿದೆ[30]. ಈತನು ಓರಂಗಲ್ಲಿನ ಪಟ್ಟಣಕ್ಕೆ ಹೋಗಿ ಅಲ್ಲಿ ಪರವಾದಿಗಳನ್ನು ಗೆದ್ದು, ವೀರೇಶನಿಂದ ಪದಕ ಪಡೆದು, ವೇಲಾಪುರಕ್ಕೆ ಮರಳಿ ಬಂದು ಅಲ್ಲಿ ಸಮಾಧಿ ಹೊಂದುತ್ತಾನೆ. ಮತ್ತೊಬ್ಬ ಕವಿಯಾದ ಪಾಲ್ಕುರಿಕೆ ಸೋಮನಾಥನೊಂದಿಗೂ ಸಹ ಇಂತಹ ಕತೆಯೊಂದನ್ನು ನೋಡಬಹುದು[31]. ಈತನು ಗಣಪುರದ ಅರಸನಾದ ಜಗದೇಕಮಲ್ಲನ ಆಸ್ಥಾನಕ್ಕೆ ಹೋಗಿ, ವೈಷ್ಣವನಾದ ಚಕ್ರಪಾಣಿ ರಂಗನಾಥನನ್ನು ಸೋಲಿಸಿ, ಶಿವಾದ್ವೈತ ಸಿದ್ಧಾಂತ ಸ್ಥಾಪನೆ ಮಾಡಿ, ಅವನನ್ನು ವೀರಶೈವಕ್ಕೆ ಮತಾಂತರಿಸುತ್ತಾನೆ. ಇಲ್ಲಿ ವಾದದ ಕತೆಯೊಂದಿಗೆ ಮತಾಂತರದ ಕತೆಯೂ ಜೊತೆಯಾಗಿರುವುದನ್ನು ಕಾಣಬಹುದು. ಹೀಗೆ ಕವಿಗಳು ಮತ್ತು ಪಂಡಿತರು ಬೇರೆ ಬೇರೆ ಊರಿಗಳಿಗೆ ಪಯಣಿಸಿ ಅಲ್ಲಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುತ್ತಿದ್ದುದನ್ನು ಜೊತೆಗೆ ತಮ್ಮ ಮತಸ್ಥಾಪನೆ ಮಾಡುತ್ತಿದ್ದುದನ್ನು ಕಾಣಬಹುದು.

ಹೀಗೊಂದು ಸ್ವಾರಸ್ಯಕರ ಘಟನೆಯೊಂದಿಗೆ ಈ ಸಂವಾದಗಳ ಇತಿಹಾಸಕ್ಕೊಂದು ವಿರಾಮ ನೀಡಬಹುದು[24]. ಖಾದಿರ್ ಎನ್ನುವವನು ತನ್ನ 500 ಜನ ಫಕೀರರೊಂದಿಗೆ ಇಸ್ಲಾಂ ಅನ್ನು

ಪಸರಿಸಲು ದಕ್ಷಿಣ ಭಾರತಕ್ಕೆ ಬರುತ್ತಾನೆ. ಈತನು ತನ್ನ ಮೈಮೇಲೆಲ್ಲಾ ಭಾರತದ ಸ್ಥಳೀಯ ಪಂತಗಳ ವಸ್ತುಗಳನ್ನು ಹಾಕಿಕೊಂಡಿರುತ್ತಾನೆ. ಇದರ ಅರ್ಥ ಅವೆಲ್ಲವನ್ನು ಆತ ಸೋಲಿಸಬೇಕು ಎಂಬುದು. ದಾರಿಯುದ್ದಕ್ಕೂ ದೇವಾಲಯಗಳನ್ನು ಕೆಡವುತ್ತಾ, ಮಸೀದಿಗಳನ್ನು ಮಾಡುತ್ತಾ ಬರುತ್ತಾನೆ. ಹಂಪೆಯಲ್ಲಿ ಆತನಿಗೆ ಶೈವರು ಎದುರಾಗುತ್ತಾರೆ. ಆತನು ಕಾಲಿಗೆ ಕಟ್ಟಿದ್ದ ಲಿಂಗವನ್ನು ತೆಗೆಯಬೇಕೆಂದು ಆಗ್ರಹಿಸುತ್ತಾರೆ. ಈ ಸಮಯದಲ್ಲಿ ಇಬ್ಬರ ಮಧ್ಯೆಯು ಸಹ ತೀವ್ರ ವಾಗ್ವಾದವಾಗಿ ಅದರಲ್ಲಿ ಖಾದಿರ್‌ನು ಗೆಲ್ಲುತ್ತಾನೆ. ನಂತರ ತಾನೇ ಕೊಂದು ತಿಂದಂತ ಗೂಳಿಯನ್ನು ಮತ್ತೆ ಬದುಕಿ ಬಂದಂತೆ ತೋರಿಸುತ್ತಾನೆ. ಈ ರೀತಿಯ ಅನೇಕ ಪವಾಡಗಳನ್ನು ಮಾಡಿ ಹಲವು ಪಣಗಳಲ್ಲಿ ಗೆದ್ದು ಮುಸಲ್ಮಾನರ ಮತವನ್ನು ಗೆಲ್ಲಿಸುತ್ತಾನೆ. ಆ ನಂತರದ್ದು ಅವರ ಮತಾಂತರ ಕಾರ್ಯ. ಪಣದಲ್ಲಿ ಪವಾಡಗಳ ಸಂಖ್ಯೆಗೇನೂ ಕಡಿಮೆಯಿಲ್ಲ. ಉಗ್ರ ಶಿವಭಕ್ತ ಎಂದು ಹೆಸರು ಮಾಡಿರುವ ಏಕಾಂತರಾಮಯ್ಯನು ತನ್ನ ಶಿರವನ್ನು ಕಡಿದುಕೊಂಡು ಮತ್ತೆ ಅದನ್ನು ಜೋಡಿಸಿಕೊಂಡ ಪವಾಡದ ಮೂಲಕವೇ ಹೆಸರುವಾಸಿಯಾಗಿದ್ದು.

ಖಾದರ್‌ನ ಘಟನೆಯದು ದಕ್ಷಿಣದಲ್ಲಿ ಮುಸ್ಲಿಮರು ಪ್ರಬಲರಾಗುತ್ತಿದ್ದ ಕಾಲ.ಸಾಮಾನ್ಯವಾಗಿ ವಾದಗಳಲ್ಲಿ ಅವರೇ ಗೆಲ್ಲುತ್ತಾರೆ.ಇಲ್ಲಿ ಪವಾಡಗಳ ವಿಷಯವಾಗಿಯೂ ಈ ಮಾತನ್ನು ಹೇಳಬಹುದು.ಪವಾಡಗಳು ನಿಜವಾಗಿ ನಡೆಯುತ್ತವೋ ಇಲ್ಲವೋ ಅದು ಬೇರೆಯದೇ ಮಾತು.ಆದರೆ ಈ ಪವಾಡಗಳು ಎಲ್ಲಾ ಕಾಲಕ್ಕೂ ಎಲ್ಲಾ ಮತಗಳಿಂದಲೂ ಸಾಧ್ಯವಾಗುವುದಿಲ್ಲ. ಯಾವ ಕಾಲಕ್ಕೆ ಯಾರು ಪ್ರಬಲರಾಗಿರುತ್ತಾರೋ ಅವರಿಂದ ಮಾತ್ರವೇ ಸಾಧ್ಯ. ಒಟ್ಟಿನಲ್ಲಿ ಈ ಪವಾಡಗಳ ಮೂಲಕ ಗೆಲ್ಲುವುದು, ವಾದಗಳ ಮೂಲಕ ಗೆಲ್ಲುವುದು ಈ ಎಲ್ಲದರ ಉದ್ದೇಶ ತಮ್ಮ ತಮ್ಮ ಮತಗಳನ್ನು ಶ್ರೇಷ್ಠವೆಂದು ತೋರಿಸಿಕೊಳ್ಳುವುದೇ ಆಗಿದೆ. ಈ ಮೂಲಕ ಮತ ವಿಸ್ತರಣೆ ಅವರ ಧ್ಯೇಯ.

## ಅಡಿ ಟಿಪ್ಪಣಿ

1. ಎ.ಕ. 2 ಶ್ರವಣ ಶ. 79, ಸುಮಾರು ಕ್ರಿಶ 1100
2. ಒಚಿಡಿ. 1923. ಕ114 ಛಿ 990 ಚಿಜ ?
3. ಖಂ.ಫಿಗಿಖಖಖ ಮ 38 – ಕ್ರಿ.ಶ. 1076. ?
4. ಎ.ಕ ಸಂಪುಟ 2, 69, 1100 ಕ್ರಿ.ಶ
5. ಖಂ.ಫಿಖಗಿ ಪು 14 ಕ್ರಿ.ಶ. ï 1123 ï 24. ?
6. ಎ.ಕ ಸಂಪುಟ 4, ಪು 100, ಕ್ರಿ.ಶ. ï 1145.
7. ಸಮಯ ಪರೀಕ್ಷೆ, 1–14
8. ಸಮಯ ಪರೀಕ್ಷೆ, 1–13
9. ದ್ವಿತಿಯಾಶ್ವಾಸï ಆದಿಪುರಾಣ 2–23
10. ದ್ವಿತಿಯಾಶ್ವಾಸï ಆದಿಪುರಾಣ 2–23.
11. ಸೋಮನಾಥನ ಪಂಡಿತರಾಧ್ಯ ಚರಿತ್ರೆ. (ಮಧ್ಯಕಾಲೀನ ಕರ್ನಾಟಕ, ಮುಕ್ತ ವಿವಿ)
12. ರಾಜಾವಳೀ ಕತಾಸಾರ, ನವಮಾಧಿಕಾರಂ ï 195
13. ವೃತ್ತವಿಲಾಸನ ಧರ್ಮಪರೀಕ್ಷೆ ï ಪೀಠಿಕೆ.
14. ಶಾಸನಗಳಲ್ಲಿ ಶಿವಶರಣರು ï ಮ ï 15.
15. ವಾಗೀಶ್ವರ ದೇವರ ರಗಳೆ, ಹರಿಹರನ ರಗಳೆಗಳು
16. ರಾಜಾವಳೀ ಕತಾಸಾರ, ಅಷ್ಟಮಾಧಿಕಾರ ï ಪುï 136.
17. ಎ.ಕ. ಸಂ–2, ಪು ï 22, ಕ್ರಿ.ಶ 1129.(ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನದಲ್ಲಿ ಶಿಕ್ಷಣದ ಸ್ವರೂಪ)
18. ಎ.ಕ. ಸಂ–3, ಪು ï 105, ಕ್ರಿ.ಶ 1183.
19. ಬಿ.ಬಿ.ಮಹಿಷವಾಡಿ (ಸಂ), ಅನಂತನಾತ ಪುರಾಣ ಪುಟ.ಸಂ–06. .(ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನದಲ್ಲಿ ಶಿಕ್ಷಣದ ಸ್ವರೂಪ)
20. ಎ.ಕ. ಸಂ–2, ಪು ï 70, ಕ್ರಿ.ಶ. 1167. .(ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನದಲ್ಲಿ ಶಿಕ್ಷಣದ ಸ್ವರೂಪ)

21. ಮ.ಕ.ಶಾ ಪು– 167 ï ಉಮ್ರಾಣಿ, ಕ್ರಿಶ. 1152 6ನೇ ವಿಕ್ರ.

22. ಕ್ರಿ.ಶ> 1129 – ಪು ï 83. .(ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನದಲ್ಲಿ ಶಿಕ್ಷಣದ ಸ್ವರೂಪ)

23. ಬಾಹೂ ಬೊಮ್ಮಿತಂದೆಯ ರಗಳೆ (ಹರಿಹರನ ರಗಳೆಗಳು, ಸಂ ಯಮ್ ಯಮ್ ಕಲಬುರಗಿ)

24. ರಾಜಾವಳಿ ಕತಾಸಾರ ï ದಶಮಾಧಿಕಾರ ï ಮ ï 195.

25. ಬೃಹ್ಮಶಿವನ ಸಮಯಪರೀಕ್ಷೆ ï 8 ï 158.

26. ಬೃಹ್ಮಶಿವನ ಸಮಯಪರೀಕ್ಷೆ ï 8 ï 176.

27. ಬೃಹ್ಮಶಿವನ ಸಮಯಪರೀಕ್ಷೆ ï 8 ï 190

28. ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಡಾ ಪಂಡಿತ ಕೆ ರಾಠೋಡ

29. ಅದೇ

30. ಅದೇ

31. ಅದೇ

## ಇ) ದೇವಾಲಯ ಮತ್ತು ಸಂಘರ್ಷ

ವಚನಕಾರರಲ್ಲಿ ಒಂದು ಮಾತು ಬರುತ್ತದೆ **'ಸ್ಥಾವರಕ್ಕಳಿವುಂಟು-ಜಂಗಮಕ್ಕಳಿವಿಲ್ಲ'** ಎಂದು. ಇಲ್ಲಿ ಸ್ಥಾವರ ಎಂಬುದು ಪ್ರಮುಖವಾಗಿ ದೇವಾಲಯವನ್ನು ಕುರಿತಾಗಿ ಹೇಳಿದುದಂತಾಗಿದೆ. ಇದು ದೇವಾಲಯ ನಿರ್ಮಾಣಕ್ಕೆ ಒಪ್ಪಿಕೊಳ್ಳದ ಮನಸ್ಥಿತಿಯದ್ದು. ಇದರಿಂದ ಅವರಲ್ಲಿ ದೇವಾಲಯಗಳು ನಿರ್ಮಾಣವಾಗಲಿಲ್ಲ ಎಂದಲ್ಲ. ಆದರೆ ವಚನಕಾರರು ದೇವಾಲಯ ನಿರ್ಮಾಣವನ್ನು ಮನ್ನಣೆ ಮಾಡಲಿಲ್ಲ. ಇವರು ಇಷ್ಟಲಿಂಗವನ್ನು ಮನ್ನಿಸಿದ್ದರಿಂದ ದೇವಾಲಯದ ನಿರ್ಮಾಣವು ಅವರಿಂದ ನಿರಾಕರಣೆಗೊಳಪಟ್ಟಿತು. ಆದರೂ ಈ ಇಷ್ಟಲಿಂಗದ ವಿಚಾರವಾಗಿ ವಚನಕಾರರಲ್ಲಿಯೇ ಭಿನ್ನಾಭಿಪ್ರಾಯಗಳಿದ್ದವು.

**"ಉಳ್ಳವರು ಶಿವಾಲಯವ ಮಾಡುವರು**
**ನಾನೇನ ಮಾಡಲಿ ಬಡವನಯ್ಯಾ**
**ಎನ್ನಕಾಲೇ ಕಂಬ ದೇಹವೇ ದೇಗುಲ ಶಿರಹೊನ್ನ ಕಳಸ'**[1 ಅ]
**ಕೂಡಲಸಂಗಮದೇವ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ**
ಎಂಬುದು ಅವರ ನಿಲುವಾಗಿತ್ತು. ಇದಲ್ಲದೆ

**'ಕಲ್ಲಮನೆಯ ಮಾಡಿ**
**ಕಲ್ಲದೇವರ ಮಾಡಿ"**
**ಆ ಕಲ್ಲು ಕಲ್ಲಮೇಲೆ ಕಡೆದರೆ**
**ದೇವರೆತ್ತ ಹೋದರೋ**
**ಲಿಂಗ ಪ್ರತಿಷ್ಠೆ ಮಾಡಿದವರಿಗೆ ನಾಯಕ ನರಕ'**[1 ಆ]

ಎಂದು ದೇವಾಲಯಗಳಲ್ಲಿ ಲಿಂಗಪ್ರತಿಷ್ಠೆ ಮಾಡುವುದನ್ನು ಟೀಕಿಸಿದರು.

ಕ್ರಿ.ಶ 150ರ ಕದಂಬರ ಪ್ರಾಕೃತ ಶಾಸನವನ್ನು ದೇವಾಲಯಕ್ಕೆ ಸಂಬಂಧಿಸಿದಂತೆ ಮೊದಲ ಅಧಿಕೃತ ದಾಖಲೆಯೆಂದು ತಿಳಿಯಲಾಗಿದೆ[2]. ದೇವಸ್ಥಾನಗಳ ನಿರ್ಮಾಣ ಮಾಡುವುದರ ಮುಖಾಂತರ ಮತ್ತು ಅವುಗಳಿಗೆ ಉದಾರವಾಗಿ ದತ್ತಿ ನೀಡುವ ಮುಖಾಂತರ ದಕ್ಷಿಣ ಭಾರತದಲ್ಲಿ ದೇವಾಸ್ಥಾನ ಸಂಸ್ಕೃತಿಯೊಂದು ಹುಟ್ಟಿ ಬೆಳೆಯಲು ಪಲ್ಲವರು ಕಾರಣರಾದರು[3]. ಭಾರತಕ್ಕೆ ಸಂಬಂಧಿಸಿದಂತೆ

ಮೊದಲ ಹಂತದ ದೇವಾಲಯಗಳೆಂದರೆ ಬುದ್ಧರಿಗೆ ಸಂಬಂಧಿಸಿದವು. ಕ್ರಿ.ಪೂ 30 ಕಾಲಘಟ್ಟದಲ್ಲಿ ದೊರೆಯುವ ಸಾಂಚಿ, ಅಮರಾವತಿ, ಬುದ್ಧಗಯಾ, ಸಾರಾನಾಥ, ಮುಂತಾದ ಕಡೆಗಳಲ್ಲಿ ಇದರ ಅವಶೇಷಗಳನ್ನು ನೋಡಬಹುದು[4].

ಈ ದೇವಾಲಯಗಳು ದೇವರಿಗಾಗಿಯೇ ನಿರ್ಮಾಣವಾಗುತ್ತಿದ್ದವು ಎಂದು ಹೇಳುವುದು ಕಷ್ಟ. ಕೆಲವೊಮ್ಮೆ ಇವು ರಾಜನ ವಾಸಸ್ಥಾನಗಳಾಗಿರುತ್ತಿದ್ದವು. ಕೆಲವೊಮ್ಮೆ ಅವನ ಕೈಕೆಳಗಿನ ಅಧಿಕಾರಿಗಳಿಗೆ ಸಂಬಂಧಿತವಾಗುತ್ತಿದ್ದವು. ಶಿಕ್ಷಣ ಕೇಂದ್ರಗಳಾಗಿ, ವ್ಯಾಪಾರ ಕೇಂದ್ರಗಳಾಗಿ ಇನ್ನೂ ಹಲವು ರೀತಿಯಲ್ಲಿ ಇವು ಕಾರ್ಯನಿರ್ವಹಿಸುತ್ತಿದ್ದವು. ಪ್ರಾಚೀನ ಕಾಲದಲ್ಲಿ ಬಹುಮುಖ್ಯವಾಗಿ ಇವು ಸಂಪತ್ತಿನ ಕೇಂದ್ರ ಸ್ಥಾನಗಳಾಗಿದ್ದವು. ಕರ್ನಾಟಕದಲ್ಲಿ ಪ್ರಮುಖವಾಗಿ ಜೈನರನ್ನೂ ಶೈವರಾದ ಕಾಳಮುಖ ಮತ್ತು ವೀರಶೈವರನ್ನೂ ಈ ದೇವಾಲಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಗುರುತಿಸಬಹುದು. ಎಂ.ಚಿದಾನಂದಮೂರ್ತಿಯವರು ತಮ್ಮ 'ಹಿಂದೂ–ವೀರಶೈವ' ಕೃತಿಯಲ್ಲಿ ಹೇಳುವಂತೆ"ವೇದಗಳಂತೆ ಆಗಮಗಳೂ ಹಿಂದೂ ಧರ್ಮದ ಪ್ರಧಾನ ಗ್ರಂಥಗಳು. ವೇದಗಳು ಯಜ್ಞ ಸಂಸ್ಕೃತಿಯ ಕೃತಿಗಳಾದರೆ, ಆಗಮಗಳು ದೇವಾಲಯ ಸಂಸ್ಕೃತಿಯ ಪ್ರತಿಪಾದಕಗಳು. ದೇವಾಲಯ ನಿರ್ಮಾಣ, ಮೂರ್ತಿಲಕ್ಷಣ, ಮೂರ್ತಿ ಪ್ರತಿಷ್ಠಾಪನೆ, ಪೂಜಾ ವಿಧಾನಗಳು, ಭಕ್ತ ಸಂಥನೆ ಇವು ಆಗಮಗಳಲ್ಲಿ ಬಂದಿರುವ ವಿಶೇಷಾಂಶಗಳು. ಹಾಗೇ ನೋಡಿದರೆ ಕಳೆದ ಒಂದು ಸಾವಿರ ವರ್ಷಗಳ ಇತಿಹಾಸವೆಲ್ಲಾ ದೇವಾಲಯ ಕೇಂದ್ರಿತವೇ ಆಗಿದೆ" ಎಂದವರು ಹೇಳುತ್ತಾರೆ.

ಎಲ್ಲಾವಕ್ಕೂ ದೇವಾಲಯ–ದೇವಾಸ್ಥಾನ ಎನ್ನುವಂತಹ ಸರ್ವನಾಮ ಬಳಕೆಯು ಆಗ್ಗೆ ಹೆಚ್ಚಿನ ಪ್ರಮಾಣದಲ್ಲಿ ಇದ್ದಿಲ್ಲ. ಉದಾಹರಣೆಗೆ ಜೈನರು ತಮ್ಮ ಬಸದಿಗಳನ್ನು ಬಸದಿ, ಕೊಯಿಲ್ ಬಸದಿ, ಚೈತ್ಯಾಲಯ, ಜಿನಾಲಯ ಇನ್ನೂ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಶೈವರು ಶಿವಾಲಯ ಎನ್ನುತ್ತಿದ್ದರು. ಮತ್ತು ಬೌದ್ದರು ತಮ್ಮ ರಚನೆಗಳಿಗೆ ವಿಹಾರ ಎನ್ನುತ್ತಿದ್ದರು. ಈ ದೇವಾಲಯಗಳನ್ನು ಹಲವು ಕಾರಣಗಳಿಗಾಗಿ ನಿರ್ಮಿಸುತ್ತಿದ್ದರು. ಆ ಕಾರಣಗಳನ್ನು ಈ ಮುಂದಿನಂತೆ ನೋಡಬಹುದು.

ಪ್ರಾಚೀನ ಕಾಲದಲ್ಲಿ ತಮ್ಮ ಹೆಸರಿನ ದೇವರುಗಳನ್ನು ಪ್ರತಿಷ್ಠಾಪಿಸುವುದರಿಂದ ತಮಗೆ ದೇವತ್ವ ಪ್ರಾಪ್ತಿಯಾಗಬಹುದೆಂಬ ನಂಬಿಕೆಯಿತ್ತು. ಈ ಕಾರಣ ತಮ್ಮ ಹೆಸರಿನಲ್ಲಿಯೇ ದೇವಾಲಯ ಕಟ್ಟಿಸಿ ಅದರಲ್ಲಿ ದೇವರನ್ನು ಪ್ರತಿಷ್ಠಾಪಿಸುತ್ತಿದ್ದರು. ಸ್ವತಃ ಕೇಶಿರಾಜನೇ ಒಂದು ದೇವಾಲಯವನ್ನು ಕಟ್ಟಿಸಿ ತನ್ನ ಹೆಸರಿನಲ್ಲಿ ಲಿಂಗವನ್ನು ಸ್ಥಾಪಿಸಿದುದಾಗಿ ಎಂ.ಎಂ.ಕಲಬುರ್ಗಿಯವರು ಹೇಳುತ್ತಾರೆ[5].

ಭೈರವ ದೇವರಸ ಎನ್ನುವವನು ತನ್ನ ತಂದೆಯ ಹೆಸರಲ್ಲಿ ಹೆಮ್ಮೇಶ್ವರ ಎನ್ನುವ ಮತ್ತು ತಾಯಿಯ ಹೆಸರಲ್ಲಿ ಮೈಳಲೇಶ್ವರ ಎನ್ನುವ ದೇವಾಲಯಗಳನ್ನು ಅವರಿಗೆ ಒಳ್ಳೆಯದನ್ನು ಸ್ಥಾಪಿಸುವ ಸಲುವಾಗಿ ಕಟ್ಟುವ ವಿಷಯ ಶಾಸನದಲ್ಲಿದೆ[6]. ಹಾದರವಾಗಿಲು ಬೀಡಿನಲ್ಲಿ ಸತ್ತ ಸೋದರರನ ನೆನಪಿಗಾಗಿ ಬಸದಿಯನ್ನು ಕಟ್ಟುತ್ತಾರೆ[7]. ಆಯಿಕಜೀಯ ಎನ್ನುವವನು ಮಹಾ ಸಂಸಾರಕ್ಕೆ ಹೆದರಿ ಮೋಕ್ಷಾಪೇಕ್ಷಿಯಾಗಿ ದೇವಾಲಯ ಕಟ್ಟುತ್ತಾನೆ[8]. ಸಂಪತ್ತಿಗೆಲ್ಲಾ ಪುಣ್ಯವೇ ಮೊದಲು ಪುಣ್ಯಕ್ಕೆಲ್ಲಾ ಈಶ್ವರ ಪ್ರತಿಷ್ಠೆಯೇ ಮೊತ್ತಮೊದಲು ಎಂದರಿತು ಹೆಬ್ಬೆಯ ನಾಕರ ಎನ್ನುವವನು ಈಶ್ವರ ದೇವಾಲಯವನ್ನು ಕಟ್ಟುತ್ತಾನೆ[9]. ಉಚ್ಚಂಗಿಯನ್ನು ಆಳುತ್ತಿದ್ದ ಕೂಚಿರಾಜ ಎನ್ನುವವನು ಹೆಂಡತಿಯ ಜ್ಞಾಪಕಾರ್ಥ ಲಕ್ಷ್ಮಿ ಜಿನಾಲಯವನ್ನು ಕಟ್ಟಿಸುತ್ತಾನೆ[10]. ಇದೇ ರೀತಿಯಾಗಿ "ರಾಜರಸಂ ಮೊರಂಬದೊಳ್ ತಮ್ಮ ಅಬ್ಬೆಯ ಪೆಸರಿಂ ಸೂರಜಿನಾಲಯಮಂ ಮಾಡಿಸಿ" ಮತ್ತು "ಉಯ್ಯಲ ರಾಜರಸನರಸಿ ರೇಖಲದೇವಿ ತಮ್ಮ ಪೆಸರಿಂ ರೇಖ ಜಿನಾಲಯವಂಮಾಡಿಸಿ" ಎಂದು ಒಂದು ಶಾಸನದಲ್ಲಿ ದಾಖಲಾಗಿದೆ[11]. ಹೀಗೆ ತಮಗಾಗಿ, ತಮ್ಮವರಿಗಾಗಿ, ವೈಯಕ್ತಿಕವಾಗಿ ದೇವಾಲಯಗಳನ್ನು ಈ ರೀತಿಯಾಗಿ ನಿರ್ಮಿಸುತ್ತಿದ್ದರು.

ಇದಲ್ಲದೆ ಸಾಂಸ್ಥಿಕ ಕಾರಣಗಳಿಗಾಗಿಯೂ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಹೀಗೆ ನಿರ್ಮಿಸುವವರಲ್ಲಿ ರಾಜರೇ ಮೊದಲ ಸ್ಥಾನದಲ್ಲಿದ್ದರು. ಕ್ರಿ.ಶ. 980ರ ಶಾಸನವೊಂದರಲ್ಲಿ ಬಸದಿಯೊಂದನ್ನು 'ರಟ್ಟರ' ಪಟ್ಟ ಜಿನಾಲಯವೆಂದು ಕರೆದು, ರಾಷ್ಟ್ರಕೂಟರಿಂದ ಜಿನಧರ್ಮವು ಪಡೆದ ಪ್ರೋತ್ಸಾಹದ ವಿವರಗಳನ್ನು ಕೊಟ್ಟಿದೆ[12]. ಅಂದರೆ ಅರಸರಿಗೆ ಪಟ್ಟದ ರಾಣಿ, ಪಟ್ಟದ ಆನೆ ಮುಂತಾದವು ಇರುವಂತೆ ಪಟ್ಟದ ದೇವಾಲಯಗಳು ಸಹ ಇರುತ್ತಿದ್ದವು ಎನ್ನುವುದನ್ನು ಈ ಶಾಸನ ತಿಳಿಸುತ್ತದೆ. ಇನ್ನೂ ಕೆಲವು ದೇವಾಲಯಗಳನ್ನು ಈ ಧಾರ್ಮಿಕ ಮುಖಂಡರು ಎಂದು ಕರೆಯಿಸಿಕೊಳ್ಳುವವರು ಕಟ್ಟುತ್ತಿದ್ದರು. ಕೋಲಾರ ಜಿಲ್ಲೆಯ ಆವಣಿ ಕ್ಷೇತ್ರದ ಸ್ಥಾನಚಾರ್ಯರಿಂದ ತ್ರಿಭುವನ ಕರ್ತಾರದೇವರು ಐವತ್ತು ದೇಗುಲಗಳನ್ನು ಕಟ್ಟಿದ ವಿಷಯವು ಶಾಸನವೊಂದರಲ್ಲಿ ಬರುತ್ತದೆ[13]. ಅಷ್ಟೊಂದು ಸಂಖ್ಯೆಯ ದೇವಾಲಯಗಳನ್ನು ಅವರೊಬ್ಬರೇ ಕಟ್ಟಿರುವುದು ಕಷ್ಟ. ರಾಜರ ಸಹಾಯದಿಂದಲೋ ಇಲ್ಲವೆ ಮತ್ತಿನ್ನಾವುದಾದರು ಮೂಲದಿಂದಲೋ ಕಟ್ಟಿರಬೇಕು. ಇನ್ನೊಬ್ಬ ವ್ಯಕ್ತಿಯಿದ್ದಾನೆ. ಅವನ ಹೆಸರು ಲಿಂಗಸಿವಜೀಯ ಎಂದು. ಈತನು ಧಾರ್ಮಿಕ ಮುಖಂಡನೂ ಅಲ್ಲ ಉಳ್ಳವಂತವನೂ ಅಲ್ಲ. ಈತನು ಭಿಕ್ಷಾ ವೃತ್ತಿಯಿಂದ ಹಣವನ್ನು ಗಳಿಸಿ, ಇಟ್ಟಿಗೆಯಿಂದ ಕಟ್ಟಲಾಗಿದ್ದ ಜಟ್ಟಿಂಗ ರಾಮೇಶ್ವರದ ಗುಡಿಯನ್ನು ಕೆಡವಿಸಿ, ಶಿಲೆಯಲ್ಲಿ ಕಟ್ಟಿ ಕಳಸವಿಡುತ್ತಾನಂತೆ. ಇದೊಂದೇ ಅಲ್ಲದೇ ಇನ್ನೂ ಅನೇಕ ದೇವಾಲಯಗಳನ್ನು ಕಟ್ಟಿಸಿದುದಾಗಿ ಶಾಸನವು ಹೇಳುತ್ತದೆ[14]. ಇಲ್ಲಿ ವ್ಯಕ್ತಿಯ ವೈಯಕ್ತಿಯ ಭಕ್ತಿಯ ನಂಬಿಕೆಯ ಸ್ಥಿತಿಯನ್ನು ಇದರಿಂದ ಅರಿಯಬಹುದು. ಭಿಕ್ಷೆಯನ್ನು ಅದನ್ನು ತನ್ನ ವೈಯಕ್ತಿಕಕ್ಕೆ ಬಳಸಿಕೊಳ್ಳದೆ, ದೇವಾಲಯ ಕಟ್ಟಲು ಬಳಸಿದನೆಂದರೆ ಆತನದು ದಿವ್ಯಭಕ್ತಿಯೇ ಇರಬೇಕು.

ಕೆಲವೊಮ್ಮೆ ಹಲವಾರು ಜನರು ಸೇರಿಕೊಂಡು ದೇವಾಲಯ ನಿರ್ಮಾಣವನ್ನು ಮಾಡುತ್ತಿದ್ದರು. ಈ ಕುರಿತು ವಿಶೇಷ ಘಟನೆಯೊಂದು ನಮ್ಮ ಇತಿಹಾಸದಲ್ಲಿ ದಾಖಲಾಗಿದೆ[15]. ಶಾಸನದಲ್ಲಿ ಇದನ್ನು 'ಕಲ್ಯಾಣ ಗೋಷ್ಠಿ' ಎಂದು ಕರೆಯಲಾಗಿದೆ. ಆ ಶಾಸನದ ಸಾರವನ್ನು ಹೀಗೆ ಹೇಳಬಹುದು.

ಶ್ರೀ ಮಚ್ಚಂದ್ರಪ್ರಭ ಜನಾಲಯಮಂ ರಚಿಸಿದ ಕಲ್ಯಾಣದ ಗೋಷ್ಠಿಶ್ಚಿರಂ ಜಿಯಾತ್' ॥ ಎಂದು ಆರಂಭವಾಗುವ ಶಾಸನವು 'ಭರತೇಶಂಮಾಡಲಲ್ಲಿಂ ಬಳಿಕೆ ಪಲಬರುಂ ನಿರ್ಮ್ಮಿಸಲ್ಮತ್ತೆ ಕಾಳಾನ್ತರದೊಳ್– ಶ್ರೀ ದಾನಚಿನ್ತಾಮಣಿ ವಿರಚಿಸಲನ್ತೀಗಳೀ ರಚ್ಚಮಲ್ಲಂ ನಿರುತಂ'ï ಕಟ್ಟಿಸಿದರು. ಇಲ್ಲಿ ದಾಖಲಾಗಿರುವ ಇವರು ಮಾತ್ರವೇ ಅಲ್ಲದೇ ಇನ್ನೂ ಹಲವರು ಈ ಗೋಷ್ಠಿಯಲ್ಲಿ ಇದ್ದುದಾಗಿಯೂ ಜಕ್ಕಣಬ್ಬೆ ಎಂಬುವವಳು ಈ ಕಾರ್ಯದಲ್ಲಿ ಭಾಗವಹಿಸಿ ಮುನಿಗಣಕ್ಕೆ ಆಹಾರದ ವ್ಯವಸ್ಥೆಯನ್ನು ಮಾಡಿಸಿದಂತೆಯೂ ಈ ಶಾಸನದಲ್ಲಿ ಹೇಳಲಾಗಿದೆ. ಶಾಸನವು ಸುಳಿವು ನೀಡುವಂತೆ ದೇವಾಲಯವನ್ನು ನಂತರದಲ್ಲಿ ಎರಡು ಸಲ ಜೀರ್ಣೋದ್ಧಾರ ಮಾಡಲಾಗಿದೆ.ಯಾವುದೋ ಕಾರಣಕ್ಕಾಗಿ ದೇವಾಲಯವು ನಾಶದ ಸ್ಥಿತಿಯನ್ನು ತಲುಪಿರಬಹುದಾದ ಸಾಧ್ಯತೆಯಿದೆ.ಪ್ರತೀ ಬಾರಿಯೂ ಇದು ಪ್ರಾಕೃತಿಕ ಕಾರಣಗಳಿಂದಾಗಿಯೇ ನಾಶವಾಗಿದೆಯೆಂದು ಭಾವಿಸಲಿಕ್ಕೆ ಬಾರದು.ಅನ್ಯಮತೀಯರ ದಾಳಿಯೂ ಇದಕ್ಕೆ ಕಾರಣವಿರಬಹುದಾದರೂ ಅದಕ್ಕೆ ಸೂಕ್ತ ದಾಖಲೆಗಳು ಲಭ್ಯವಿಲ್ಲ.

ಇನ್ನೂ ಕೆಲವು ದೇವಾಲಯಗಳನ್ನು ಪುರಾಣಗಳ ಕಾಲಕ್ಕೆ ಅಂಟಿಸುತ್ತಿದ್ದರು. ಮತ್ತು ಈ ಕಾರಣಕ್ಕಾಗಿಯೇ ಕಟ್ಟುತ್ತಿದ್ದರು. ಚಿಕ್ಕಹನಸೋಗೆಯ ಶಾಸನವನ್ನು ಇಂತಹುದಕ್ಕೆ ಉದಾಹರಣೆಯಾಗಿ ನೀಡಬಹುದು[16]. ಈ ಶಾಸನವು ಚಿಕ್ಕಹನಸೋಗೆಯ ಶಾಂತೀಶ್ವರ ಸ್ವಾಮಿಯ ಬಸದಿಯ ಕುರಿತು ತಿಳಿಸುತ್ತದೆ. ಇದನ್ನು ಇಕ್ವಾಕು ವಂಶದವನಾದ ಶ್ರೀ ರಾಮನು ನಿರ್ಮಾಣ ಮಾಡಿದ್ದು ಎಂದು ಅದರ ಪೌರಾಣಿಕ ಇತಿಹಾಸವನ್ನು ಹೇಳಲಾಗಿದೆ. ನಂತರ ಇದು ಗಂಗರಾಜರಿಂದ ಪೋಷಿಸಲ್ಪಟ್ಟಿತ್ತು. ಈಗ ಇದು ನನ್ನಿ ಚಂಗಳ್ವ ರಾಜೇಂದ್ರ ಚೋಳನಿಂದ ಜೀರ್ಣೋದ್ಧಾರಗೊಳ್ಳುತ್ತಿದೆ ಎಂದು ಶಾಸನದಲ್ಲಿ ನಿರೂಪಿಸಲಾಗಿದೆ. ಇಂತದ್ದೆ ಪೌರಾಣಿಕ ಹಿನ್ನಲೆಯನ್ನುಳ್ಳ ತೀರ್ಥ ಬಸದಿಯನ್ನು ಕೀರ್ತಿ ಪಂಡಿತದೇವರು ಜೀರ್ಣೋದ್ಧಾರ ಮಾಡಿರುವುದಾಗಿ ಇನ್ನೊಂದು ಶಾಸನವು ದಾಖಲಿಸುತ್ತದೆ[17]. ಇಂತಹ ಹಲವು ಪೌರಾಣಿಕ ಹಿನ್ನಲೆಯನ್ನುಳ್ಳ ಹಲವು ದೇವಾಲಗಳನ್ನು ಆ ಕಾಲದಲ್ಲಿ ನಾವು ಕಾಣಬಹುದು.

ಪ್ರಭುತ್ವಕ್ಕೂ ಧರ್ಮಕ್ಕೂ ಒಂದು ಬಿಡಿಸಲಾರದ ನಂಟು ಇರುವಂತೆಯೇ ಧರ್ಮಕ್ಕೂ ದೇವಾಲಯಕ್ಕೂ ಇದೆ. ಇದನ್ನು ಎಲ್ಲಾ ಕಾಲದ ಅರಸರು ಪುರೋಹಿತರೂ ಉಪಯೋಗಿಸಿಕೊಳ್ಳುತ್ತಲೇ ಬಂದಿದ್ದಾರೆ. ದೇವಾಲಯಗಳ ನಿರ್ಮಾಣವು ಆಡಳಿತ ಭದ್ರತೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು. ಈ ಕಾರಣಕ್ಕಾಗಿಯೇ ಎಲ್ಲಾ ಪ್ರಮುಖ ಮತಗಳಿಗೆ ರಾಜರು ದೇವಾಲಯಗಳನ್ನು ಕಟ್ಟುವ, ಅವುಗಳಿಗೆ ದಾನ–ದತ್ತಿಗಳನ್ನು ನೀಡುವ ಕೆಲಸವನ್ನು ಮಾಡುತಿದ್ದರು. ಕಾಡಿಯೂರು ಎಂಬುದನ್ನು ಚತುಸ್ಸಮಯ ದೇವತಾನಿಲಯಗಳಿಂದ ಕೂಡಿದ ಊರು ಎಂದು ಒಂದು ಶಾಸನವು ಹೇಳುತ್ತದೆ[18]. ಶಾಸನಗಳಲ್ಲಿ ಇಂತಹ ಚತುಸ್ಸಮಯಗಳ ಅಸಂಖ್ಯ ಊರುಗಳ ಪಟ್ಟಿಯೇ ಸಿಗುತ್ತದೆ. ಇಂತಹ ಹಲವು ಮತಗಳ ಹಲವು ಊರುಗಳು ನಿರ್ಮಾಣವಾಗಲು ಆಯಾ ರಾಜರುಗಳ ಧಾರ್ಮಿಕ ನೀತಿಯೇ ಕಾರಣವಾಗಿದೆ.

ಧರ್ಮ ಸಂಘರ್ಷದ ವಿಷಯ ಬಂದಾಗ ಈ ದೇವಾಲಯಗಳು ಯಾವಾಗಲೂ ಅಪಾಯದ ಅಂಚಿನಲ್ಲಿಯೇ ನಿಲ್ಲುತ್ತವೆ. ಧರ್ಮ ಸಂಘರ್ಷದಲ್ಲಿ ದೇವಾಲಯಗಳ ವಿಚಾರವು ಪ್ರಮುಖವಾದ ಕಾರ್ಯವಾಗಿದೆ. ಎಂ.ಎಂ. ಕಲಬುರ್ಗಿಯವರು ಈ ದೇವಾಲಯದ ಕುರಿತ ಸಂಘರ್ಷವನ್ನು ಮೂರು ರೀತಿಯಲ್ಲಿ ವಿಭಾಗಿಸುತ್ತಾರೆ[19].

**ಅವುಗಳೆಂದರೆ:**

1. ಭಾಗಶಃ ನಾಶ ಅಥವಾ ವಿರೂಪಗೊಳಿಸುವಿಕೆ
2. ರೂಪಾಂತರ ಕ್ರಿಯೆ
3. ಸಮೂಲ ನಾಶ ಕ್ರಿಯೆ

ಧರ್ಮ ಸಂಘರ್ಷದಲ್ಲಿ ಈ ದೇವಾಲಯದ ವಿಷಯವು ಬಹು ಸಾಮಾನ್ಯವಾದ ಕ್ರಿಯೆಯಾಗಿದೆ. ಇದು ಬಹುಪಾಲು ವೇಳೆ ತತ್ಕಾಲೀನ ಪ್ರಚೋದನೆಗಳಿಂದಲೇ ನಡೆಯುವಂತಾಗಿದೆ. ಈಗೀನ ಕಾಲದಲ್ಲೂ ಸಹ ಇದನ್ನು ಗುರುತಿಸಬಹುದು. ಚರ್ಚ್ ದಾಳಿಯಂತಹ ಅನೇಕ ಘಟನೆಗಳನ್ನು ನಾವು ಆಗಾಗ್ಗೆ ನೋಡುತ್ತೇವೆ. ಇಲ್ಲಿ ಚರ್ಚ್ ದಾಳಿ ಎಂದರೆ ಪೂರ ಚರ್ಚಿನ ಮೇಲೆ ಎನ್ನುವುದಕ್ಕಿಂತಲೂ ಚರ್ಚ್‌ನ ಯಾವುದಾದರು ಭಾಗವು ದಾಳಿಗೆ ಒಳಗಾಗಿರುತ್ತದೆ. ಯಾವುದಾದರು ಕಂಬವೋ ಮೂರ್ತಿಯೋ ಮುರಿಯಲ್ಪಟ್ಟಿರುತ್ತದೆ. ಇಲ್ಲವೇ ವಿರೂಪಗೊಳಿಸಲ್ಪಪಟ್ಟಿರುತ್ತದೆ. ಕೆಲವೊಮ್ಮೆ ಇಡೀ ಚರ್ಚ್‌ನ ಮೇಲೂ ದಾಳಿಯಾದದ್ದಿದೆ. ಬರೀ ಚರ್ಚ್ ಮೇಲೆ ಮಾತ್ರವಲ್ಲ ಹಿಂದೂಗಳ ದೇವಾಲಯಗಳ ಮೇಲೂ, ಮುಸ್ಲಿಮರ ಮಸೀದಿಗಳ ಮೇಲೂ, ಮತ್ತು ಇತರೆ ಧರ್ಮೀಯರ ಕಟ್ಟಡಗಳ ಮೇಲೂ ದಾಳಿಗಳಾಗಿವೆ. ಅಫ್ಘಾನಿಸ್ಥಾನದಲ್ಲಿ ತಾಲಿಬಾನ್ ಉಗ್ರರು ಬಹುಪ್ರಾಚೀನವಾದ

ಬುದ್ದನ ವಿಗ್ರಹಗಳನ್ನು ನಾಶ ಪಡಿಸಿದ್ದನ್ನು ಈ ಹಿನ್ನೆಲೆಯಲ್ಲಿ ನೆನೆಯಬಹುದು. ಪ್ರಾಚೀನ ಕಾಲದಲ್ಲಿ ಈ ಕ್ರಿಯೆಯು ಬಹಳವಾಗಿಯೇ ಇತ್ತು.

ಪ್ರಾಚೀನ ಕಾಲದಲ್ಲಿ ಒಂದು ನಂಬಿಕೆಯಿತ್ತು. ಭಗ್ನಗೊಂಡ ಅಥವಾ ವಿರೂಪಗೊಂಡ ಮೂರ್ತಿಯನ್ನು ಪೂಜಿಸಬಾರದೆಂದು. ಒಮ್ಮೆ ವಿರೂಪಗೊಳಿಸಿದರೆ ಪೂಜೆಯು ನಿಲ್ಲುವುದೆಂಬ ಕಾರಣಕ್ಕಾಗಿಯೂ ಅನೇಕ ದಾಳಿಗಳು ನಡೆಯುತ್ತಿದ್ದವು. ಆದರೆ ಅಪರೂಪದ ಪ್ರಕರಣವೊಂದು ಪ್ರಾಚೀನ ಕರ್ನಾಟಕದಲ್ಲಿ ದಾಖಲಾಗಿದೆ[20]. ಸಾಮಾನ್ಯವಾಗಿ ಭಗ್ನಗೊಂಡ ಮೂರ್ತಿಯನ್ನು ಪೂಜಿಸದ ಕಾಲ ಅದು. ಆದರೆ ನವಲಿಯ ಭೋಗಾಪುರೇಶ್ವರ ದೇವಾಲಯದ ಮೇಲೆ ಒಮ್ಮೆ ಕಳ್ಳರು ದಾಳಿ ಮಾಡಿ, ನಿಧಿಗಾಗಿ ಅಲ್ಲಿಯ ಮೂರ್ತಿಯನ್ನು ಒಡೆದಂತೆ ಪೂಜಾರಿಗೆ ಕನಸು ಬೀಳುತ್ತದೆ. ಈ ಕನಸನ್ನು ನಂಬಿದ ಎಲ್ಲಾ ಪುರಜನರು ಸುಮಾರು 7 ದಿನಗಳ ಕಾಲ ಹೊರಗೆಯೆ ಪೂಜೆ ಮಾಡಬೇಕೆಂದು ನಿರ್ಧರಿಸುತ್ತಾರೆ. ಆದರೆ 6ನೇಯ ದಿನಕ್ಕೇನೆ ತೆಗೆದು ನೋಡಲಾಗಿ ಆ ಮೂರ್ತಿಯೂ ಹಾಗೆಯೇ ಇರುತ್ತದೆ. ಇಲ್ಲಿ ಪೂಜಾರಿಗೆ ಬಿದ್ದ ಕನಸಂತೆ ದೇವರ ಮೂರ್ತಿಯು ಒಡೆದು ಹೋಗಿರುವುದಾಗಿ ಎಲ್ಲರೂ ನಂಬಿರುತ್ತಾರೆ. ಹಾಗೆ ನಂಬಿ ಒಡೆದ ಮೂರ್ತಿಯನ್ನೇ ಸೂಮಾರು ಏಳು ದಿನಗಳ ಕಾಲ ಪೂಜೆ ಮಾಡಲು ನಿರ್ಧರಿಸುತ್ತಾರೆ. ಬಹುಶಃ ಏಳು ದಿನಗಳ ಕಾಲ ಪೂಜೆ ಮಾಡಿದರೆ ಆ ಮೂರ್ತಿಯು ಮುಂಚಿನಂತೆಯೇ ಆಗುವುದೆಂಬ ನಂಬಿಕೆಯೋ ಅಥವಾ ಏಳು ದಿನಗಳ ನಂತರ ಆ ಜಾಗದಲ್ಲಿ ಬೇರೊಂದು ಮೂರ್ತಿ ಇಡುವ ಯೋಜನೆಯೋ ಇದಕ್ಕೆ ಕಾರಣವಾಗಿರಬೇಕು. ಈಗಲೂ ಸಹ ಭಗ್ನಗೊಂಡ ಮೂರ್ತಿಯನ್ನು ಬಹುತೇಕ ಕಡೆ ಪೂಜಿಸುವುದಿಲ್ಲ. ಇದಕ್ಕೆ ಹಂಪಿಯನ್ನು ನಿದರ್ಶನವಾಗಿ ಕೊಡಬಹುದು.

1565ರಲ್ಲಿ ಆದ ತಾಳಿಕೋಟೆಯ ಯುದ್ದದ ನಂತರ ಹಂಪಿಯ ವೈಭವವು ಕುಸಿಯುತ್ತದೆ. ಇದರ ನಂತರ ಉಂಟಾದ ಯುದ್ಧೋತ್ತರ ಪರಿಣಾಮಗಳಲ್ಲಿ ಅಲ್ಲಿನ ಹಲವಾರು ದೇವಾಲಯಗಳು ಮತ್ತು ಮೂರ್ತಿಗಳ ಮೇಲೆ ದಾಳಿಯಾಗಿ, ಅವುಗಳು ನಾಶ ಇಲ್ಲವೇ ವಿರೂಪಗೊಳಿಸಲ್ಪಡುತ್ತವೆ. ಹೀಗೆ ವಿರೂಪಗೊಳಿಸಲ್ಪಟ್ಟ ಮೂರ್ತಿಗಳಲ್ಲಿ ಉಗ್ರನರಸಿಂಹನ ಮೂರ್ತಿಯೂ ಒಂದು. ಅದರ ಪಕ್ಕದಲ್ಲೆ ಇರುವ ವಿರುಪಾಕ್ಷನ ಮೂರ್ತಿಗೆ ಯಾವುದೇ ಪ್ರಕಾರದ ಹಾನಿ ಆಗಿಲ್ಲ. ಇದೇ ಕಾರಣವೋ ಏನೋ ಎಂಬಂತೆ ಆ ವಿರೂಪಾಕ್ಷನಿಗೆ ಈಗಲೂ ಸಹ ನಿತ್ಯವೂ ಪೂಜೆ ನಡೆಯುತ್ತದೆ. ಆದರೆ ಉಗ್ರನರಸಿಂಹನಿಗೆ ಯಾವ ಪೂಜೆಯೂ ಇಲ್ಲ. ಬರೀ ಇದೊಂದೇ ಅಲ್ಲ ಹಂಪೆಯಲ್ಲಿಯ ಬಹುತೇಕ ದೇವಾಲಯಗಳ ಪರಿಸ್ಥಿತಿಯು ಇದೇ ಆಗಿದೆ. ಇದು ಭಾರತೀಯರು ಪುರಾತನ ಕಾಲದಿಂದಲೂ ನಂಬಿಕೊಂಡು ಬಂದ ಪದ್ಧತಿ ಇರಬೇಕು. ಭಗ್ನಮೂರ್ತಿಗೆ ಪೂಜೆ ಸಲ್ಲದು ಎಂದು.

ಒಮ್ಮೆ ಚೋಳರಾಜನು ಬಂದು ಹೀಗೆ ಕರ್ನಾಟಕದ ಒಂದು ದೇವಾಲಯದ ಮೇಲೆ ದಾಳಿ ಮಾಡುತ್ತಾನೆ. ಒಂದು ಶಾಸನವು ಅದನ್ನು ಹೀಗೆ ದಾಖಲಿಸುತ್ತದೆ[21] "ಸ್ವಸ್ತಿ ಶ್ರೀ ಮಹಾಲಕ್ಷ್ಮೀ ದೇವಿಯಲ್ಲಿಗೆ ಚೋಳಂ ಬನ್ದು ದೇಗುಲಮಂ ಸುಡುವಾಗ ಮಾಲಗಾರ ಮಟ್ಟಯ್ಯನು ದೇವಿಯೆರ್ಗೆ ವೇಳೆಗೊಣ್ಡು ಕಾದಿ" ï ಎಂದು ಶಾಸನವು ಮುಕ್ತಾಯವಾಗುತ್ತದೆ. ಮುಂದೇನಾಯಿತು ಎಂಬುದು ಶಾಸನದಲ್ಲಿ ದಾಖಲಾಗಿಲ್ಲ. ಬಹುಶಃ ನಾಶವಾಗಿರಬೇಕು ಆ ರಾಜನು ಪೂರ್ತಿಯಾಗಿ ಸುಟ್ಟಿದ್ದರ ಬಗ್ಗೆ ಮಂಡನೆ ಸಿಗುವುದಿಲ್ಲ. ಶಾಸನದಲ್ಲಿ ದಾಖಲಾಗಿರುವುದು 'ಸುಡುವಾಗ' ಎಂದಷ್ಟೇ ಆದರೂ ಆ ದೇವಾಲಯಕ್ಕೆ ಅಲ್ಪಸ್ವಲ್ಪ ಹಾನಿಗಳಾದರೂ ಆಗಿರಬೇಕು. ಕೊಲ್ಲಾಪುರವು ಪ್ರಮುಖವಾದ ಶೈವಕ್ಷೇತ್ರ ಎಂದು ಅಲ್ಲಲ್ಲಿ ಶಾಸನಗಳು ದಾಖಲಿಸುತ್ತವೆ. ಅಲ್ಲದೆ ಆ ಕೊಲ್ಲಾಪುರದ ಮಹಾಲಕ್ಷ್ಮೀಯು 'ಲಿಂಗಧಾರಿ' ಯಾಗಿದ್ದಳು ಎಂದು ಒಂದು ಶಾಸನವು ಹೇಳುತ್ತದೆ[22]. ಚೋಳರು ಶೈವರು ಎಂಬುದು ನಮಗೆಲ್ಲ ತಿಳಿದ ವಿಷಯ. ಶೈವರಾದ ಚೋಳರು ಶೈವ ದೇವರ ದೇವಾಲಯದ ಮೇಲೆ ದಾಳಿ ಮಾಡಿದ್ದು ಆಶ್ಚರ್ಯಕರ ವಿಷಯ. ಇಲ್ಲಿ ಇದಕ್ಕೆ ನಾವು ನಾವು ಕೆಲವು ಊಹೆಗಳನ್ನು ಮಾಡಬಹುದು. ಚೋಳರು ಶೈವರಾಗಿದ್ದಿದ್ದರೂ ಸಹ ಆ ದೇವಾಲಯವು ಇನ್ನೊಂದು ಸಾಮ್ರಾಜ್ಯಕ್ಕೆ ಸೇರಿರುವ ಕಾರಣ ದಾಳಿ ಮಾಡಿರಬಹುದು. ಆ ಕಾಲದಲ್ಲಿ ಸಂಪತ್ತನ್ನು ದೇವಾಲಯಗಳಲ್ಲಿ ಇಟ್ಟಿರುತ್ತಿದ್ದರು ಎಂಬುದು ಸಹ ಇದಕ್ಕೆ ಕಾರಣವೇ. ಇಲ್ಲವೇ ಆ ದಾಳಿ ಮಾಡಿದ ರಾಜನು ಬೇರೆ ಮತಕ್ಕೆ ಅಂದರೆ ಜೈನನೋ, ವೈಷ್ಣವನೋ ಆಗಿರಬೇಕು. ಶಾಸನದಲ್ಲಿ ಎಲ್ಲಿಯೂ ಆ ರಾಜನ ಹೆಸರಿನ ಪ್ರಸ್ತಾಪವಿಲ್ಲ ಮತ್ತು ಕಾಲದ ಬಗ್ಗೆಯೂ ಸ್ಪಷ್ಟ ಮಾಹಿತಿಯಿಲ್ಲ. ಆದರೆ ದೇವಾಲಯದ ಮೇಲೆ ದಾಳಿಯಾಗಿದ್ದಂತು ನಿಜ.

ಹೀಗೆ ಚೋಳರು ದಾಳಿ ಮಾಡಿದ ಇನ್ನೊಂದು ಉದಾಹರಣೆಯನ್ನು ನಾವು ನೋಡಬಹುದು. ಅದು ಲಕ್ಕುಂಡಿಯ ಜಿನಾಲಯ. "ತಂಜಾವೂರಿನ ಚೋಳರ ವಿಜಯರಾಜೇಂದ್ರ ದೇವ ರಾಜಾಧಿರಾಜನು ಕಲ್ಯಾಣಿಚಾಲುಕ್ಯರ ಒಂದನೇ ಸೋಮೇಶ್ವರನ ವಿರುದ್ಧ ದಂಡಯಾತ್ರೆಯನ್ನು ಕೈಗೊಂಡ ಸಮಯದಲ್ಲಿ, ಈ ಲಕ್ಕುಂಡಿ ಜಿನಾಲಯವು ಚೋಳಪಡೆಯ ಕೋಪಾಗ್ನಿ ಬೆಂಕಿಗೆ ಆಹುತಿಯಾಯಿತು" ಎಂದು ಹಂ.ಪ.ನಾಗರಾಜಯ್ಯ ಅವರು ತಮ್ಮ 'ಲಕ್ಕುಂಡಿ ಶಾಸನ ಕೆಲವು ಒಳನೋಟಗಳು' ಎನ್ನುವ ಲೇಖನದಲ್ಲಿ ಹೇಳುತ್ತಾರೆ[60]. ಹೀಗೆ ಒಂದು ಪ್ರದೇಶದ ರಾಜರು ಇನ್ನೊಂದು ಪ್ರದೇಶದ ಮೇಲೆ ದಾಳಿ ಮಾಡಿದಾಗ ಅಲ್ಲಿಯ ದೇವಾಲಯಗಳನ್ನು ಒಳಗೊಂಡಂತೆ ಕಣ್ಣಿಗೆ ಕಂಡದನ್ನು ನಾಶಮಾಡುತ್ತಿದ್ದರು. ಆದರೂ ದೇವಾಲಯವನ್ನು ಒಂದು ಪ್ರಮುಖ ವಿಷಯವನ್ನಾಗಿಯೇ ಭಾವಿಸಿ ದಾಳಿ ಮಾಡುತ್ತಿದ್ದರು.

ಬಾರ್ಕೂರ ರಾಜ್ಯವನ್ನು ಅಂಣಪ ವೊಡೆಯರು ಪಾಲಿಸುತ್ತಿದ್ದ ಕಾಲದಲ್ಲಿ "ಆಂಣಪ ವೊಡೆಯರು ಶಿವಳಿಯ ಗ್ರಾಮಕ್ಕೆ ದಾಳಿಯ ಮಾಡಿ ನಾಡವಿರಿಂತವಾದ್ದಲ್ಲಿ . . . . ಅಲ್ಲಿಯ ದೇವಾಸ್ಥಾನದ ಅನ್ಯಮನ್ಯಂಗಳು ತಪ್ಪಿದಲ್ಲಿ ಉಡುಪಿನ ಆ ಕೃಷ್ಣ ದೇವರ ಪ್ರತಿಮಾಫಲನವಾದ್ದಲ್ಲಿ"

ಎಂದು ಒಂದು ಶಾಸನವು ಹೇಳುತ್ತದೆ[23]. ಶಿವಳಿ ಎಂಬುದು ಶಿವಳ್ಳಿ ಗ್ರಾಮವಿರಬಹುದು. ಅದು ಇಂದಿನ ಉಡುಪಿಯಲ್ಲಿ ಲೀನವಾಗಿರಬಹುದು. ಆದರೂ ಶಾಸನವು ಶಿವಳಿ ಮತ್ತು ಉಡುಪಿಗಳನ್ನು ಪ್ರತ್ಯೇಕವಾಗಿ ದಾಖಲಿಸುತ್ತದೆ. ಆತ ದಾಳಿ ಮಾಡಿದ್ದು ಶಿವಳಿಯ ಗ್ರಾಮದ ಮೇಲೆಯೆ ಎಂಬುದು ಸ್ಪಷ್ಟ. ಉಡುಪಿನ ಎಂಬುದು ಸ್ಥಳನಾಮವೇ ಎಂಬುದು ಸ್ಪಷ್ಟ. ಯಾಕೆಂದರೆ ಈ ಶಾಸನ ಸಿಕ್ಕಿರುವುದು ಉಡುಪಿಯಲ್ಲಿಯೇ. ಇಲ್ಲಿ ದಾಳಿಯಿಂದಾದ ಪರಿಣಾಮದ ಬಗ್ಗೆಯೂ ಸ್ಪಷ್ಟವಾಗಿ ಹೇಳಿಲ್ಲ. 'ಶ್ರೀ ಕೃಷ್ಣದೇವರ ಪ್ರತಿಮಾಫಲನವಾದ್ದಲ್ಲಿ' ಎಂದಷ್ಟೆ ಹೇಳಲಾಗಿದೆ. ಇಲ್ಲಿ ದಾಳಿಯ ಮುನ್ನೆಚ್ಚರಿಕೆ ಕ್ರಮವಾಗಿ ಗ್ರಾಮಸ್ತರೇ ಪ್ರತಿಮೆಯನ್ನು ಸ್ಥಳಾಂತರಿಸಿದ್ದರೋ, ಇಲ್ಲವೆ ದಾಳಿಕಾರರೇ ಪ್ರತಿಮೆಯನ್ನು ಪಲ್ಲಟಿಸಿದ್ದರೋ ತಿಳಿಯದು. ಉಡುಪಿಯ ಕೃಷ್ಣ ದೇವಾಲಯದ ಮೇಳಿನ ದಾಳಿಯನ್ನು ಮಾತ್ರ ಇದು ಖಚಿತಪಡಿಸುತ್ತದೆ. ಈ ಘಟನೆಗಳೆಲ್ಲ ನಡೆದ ತರವಾಯು ಸಿಂಗರಸ ಎನ್ನುವವನು ಮತ್ತೆ ಎಲ್ಲವನ್ನೂ ಮುಂಚಿನಂತೆ ಕ್ರಮಪಡಿಸಿ ಕೆಲವು ದಾನಗಳನ್ನು ಈ ದೇವಾಲಯಕ್ಕೆ ಬಿಡುತ್ತಾನೆ.

ಸರಿಯಾಗಿ ಘಟನೆಯ ವಿವರ ನೀಡದ ಇಂತದ್ದೆ ಶಾಸನವೊಂದು ದಕ್ಷಿಣಕನ್ನಡದಲ್ಲಿ ದೊರೆಯುತ್ತದೆ[24]. ಅದರದ್ದೇ ಕಾಲಘಟ್ಟ ಮತ್ತು ಅದಕ್ಕೆ ಹೊಂದಿಕೊಂಡಂತೆಯೇ ಇರುವ ಪ್ರದೇಶ ಇದು. ಆದರೆ ಇಲ್ಲಿ ಬರುವುದು ಮಹಾದೇವರ ವಿಷಯ. ಶಾಸನವು ಹೇಳುವ ಪ್ರಕಾರ 'ಮಹಾದೇವರನ್ನು ಪ್ರತಿಷ್ಠೆ ಮಾಡಿ ಪೂಜೆ ಮಾಡುವಲ್ಲಿ ಶ್ರೀ ದೇವರು ಭೂಗತವಾದರಿಂದ' ಎಂದಿದೆ. 'ಭೂಗತ'ವಾದುದಕ್ಕೆ ಮತ್ತ್ಯಾವ ವಿವರಣೆಯೂ ಇಲ್ಲ. ಮೇಲ್ನೋಟಕ್ಕೆ ಇದು ಪ್ರಾಕೃತಿಕ ಕ್ರಿಯೆಗಳಿಂದಾದ ಪರಿಣಾಮ ಎಂದುಕಾಣಿಸಿದರೂ, ಅದನ್ನೂ ದಾಖಲಿಸುತ್ತಿದ್ದರು. ಯಾವುದೋ ರಾಜಕೀಯ ಕಾರಣಕ್ಕಾಗಿ ಅಲ್ಲಿ ನಡೆದ ಘಟನೆಯನ್ನು ಮುಚ್ಚಿ ಹಾಕಿ ಕೇವಲ ಮಹಾದೇವರ ಭೂಗತವಾದುದನ್ನೇ ಮಾತ್ರ ತಿಳಿಸಲಾಗಿದೆ. ಇದಾದ ನಂತರ ಆ ದೇವರ ಪೂಜಾರಿಯ ಜೀವನೋಪಾಯದ ಸಲುವಾಗಿ ವಿವಿಧ ದಾನವನ್ನು ನೀಡಿದ ವಿಷಯವನ್ನು ಶಾಸನವು ಹೇಳುತ್ತದೆ.

ಭೂಗತವಾಯಿತು ಎನ್ನುವುದಕ್ಕೆ ಕಾಣೆಯಾಯಿತು ಎನ್ನುವ ಅರ್ಥವನ್ನು ನಾವು ಗ್ರಹಿಸಬಹುದು. ಕೆಲವೊಮ್ಮೆ ದೇವರ ವಿಗ್ರಹಗಳನ್ನು ಕದಿಯುತ್ತಿದ್ದುದು ಉಂಟು. ಮತ್ತು ತೆಗೆದುಕೊಂಡು ಹೋಗುತ್ತಿದ್ದು ಉಂಟು. 1515ರ ಒಂದು ಶಾಸನವು ಹೇಳುವಂತೆ "ಶ್ರೀ ವೀರಕೃಷ್ಣದೇವ ಮಹಾರಾಯರು ಉದಯಗಿರಿಯಿಂದ ಬಿಜೆಯ ಮಾಡಿಕೊಂಡು ಬಂದಂಥಾ ಶ್ರೀ ಬಾಲಕೃಷ್ಣದೇವರ ಪ್ರತಿಷ್ಠೆಯ ಮಾಡಿ' ಎಂದಿದೆ[25]. ಉದಯಗಿರಿಯಿಂದ ಗೆದ್ದು ತಂದದ್ದು ಉಡುಗೊರೆಯಾಗಿಯೋ ಅಥವಾ ಬೇರೆ ರೀತಿಯಲ್ಲಿ ತಂದುದೋ ಸ್ಪಷ್ಟವಿಲ್ಲ. ಸ್ಪಷ್ಟವಿಲ್ಲದನ್ನು ಊಹಿಸುವುದರಿಂದಲೂ ಕೆಲವೊಮ್ಮೆ

ತಪ್ಪುಗಳಾಗುತ್ತಿರುತ್ತವೆ. ದೇವರ ವಿಗ್ರಹಗಳು ಇಲ್ಲದಂತಹ ಎಷ್ಟೋ ದೇವಾಲಯಗಳು ಇಂದು ಕರ್ನಾಟಕದಾದ್ಯಂತ ಹರಡಿವೆ.

ಇಸ್ಲಾಂ ಧರ್ಮವು ಮೂರ್ತಿ ಪೂಜೆಯನ್ನು ವಿರೋಧಿಸುತ್ತದೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಭಾರತದಲ್ಲಿ ಮುಸ್ಲಿಂರು ಮಾಡಿದ ದೇವಾಲಯ ನಾಶ ಕ್ರಿಯೆಗೆ ಇದು ಪ್ರಮುಖ ಕಾರಣ. ಅನೇಕ ಮುಸ್ಲಿಂ ಅರಸರು ತಮ್ಮನ್ನು 'ಮೂರ್ತಿ ಭಂಜಕರು' ಎಂದು ಕರೆದುಕೊಂಡಿದ್ದಾರೆ. ಆ ಅರಸರು ಇತರೆ ರಾಜ್ಯಗಳ ಮೇಲೆ ದಾಳಿ ಮಾಡಿದಾಗ ಆದಂತಹ ದೇವಾಲಯ ದಾಳಿಯ ಘಟನೆಗಳು ಅನೇಕ ಶಾಸನಗಳಲ್ಲಿ ದಾಖಲಾಗಿದೆ. ಬೀದರ್‌ನ ಒಂದು ಶಾಸನವು ದೇವಾಲಯ ದಾಳಿ ಮತ್ತು ಧರ್ಮಸಮನ್ವಯದ ನಿಟ್ಟಿನಲ್ಲಿ ಒಂದು ಪ್ರಮುಖ ಶಾಸನವಾಗಿದೆ[26]. ಇದರ ಕಾಲ ಕ್ರಿ.ಶ. 1329. ಸುಲ್ತಾನ ಮಹಮ್ಮದನ ಕಾಲದಲ್ಲಿ ಮಹಾ ಪ್ರಧಾನನಾದ ಮಲ್ಲಿಕ ಕಾಮದೀನ ಎನ್ನುವವನು ಮಹಾರಾಷ್ಟ್ರ ಮಂಡಳವನ್ನು ಆಳುತ್ತಿದ್ದ. ಶೋಜ ಅಹ್ಮದ್ ಕಲ್ಯಾಣ ಪಟ್ಟಣದ ಆಡಳಿತ ಅಧಿಕಾರಿ ಆಗಿದ್ದ. ಈತನು ಸೇರಿದಂತೆ ಬಾಹಬದೀನ ಮತ್ತು ಜಂಡಮಲ್ಲ ಎನ್ನುವವವರ ಮಧ್ಯೆ ಅಧಿಕಾರ ಹಸ್ತಾಂತರಕ್ಕಾಗಿ ನಡೆದ ಜಗಳದಲ್ಲಿ ಕೆಲವರು ಅಲ್ಲಿಯ ಮಧುಕೇಶ್ವರ ದೇವಾಲಯಕ್ಕೆ ಹಾನಿ ಮಾಡಿದುದೇ ಅಲ್ಲದೆ, ಅಲ್ಲಿಯ ಶಿವಲಿಂಗ ಒಡೆದಿದ್ದರು. ನಂತರ ದೇವಾಲಯದ ಸ್ಥಾನಿಕರೂ, ಆ ದೇವರ ಕರ್ನಾಟಕದ ಭಕ್ತರು ವಿನಂತಿಸಲಾಗಿ ಪ್ರಾಂತ್ಯಾಧಿಕಾರಿಯು ದೇವಾಲಯದ ಜೀರ್ಣೋದ್ಧಾರಕ್ಕೆ ಸಮ್ಮತಿಸುತ್ತಾನೆ. ಹಾಗೆಯೇ "ಯುಕ್ಸ್ಮಾಕಂ ಕುಲಧರ್ಮೋ ವರ್ತ್ತತೇ । ತತ್ಕರಣೀಯಂ ॥" (ಕುಲಧರ್ಮವನ್ನು ಕಾಪಾಡಿಕೊಳ್ಳುವುದು ಅವರ ಕರ್ತವ್ಯ) ಎಂದು ಶಾಸನವನ್ನು ಹೊರಡಿಸುತ್ತಾನೆ. ನಂತರ ಕಾಯಸ್ತ ಮಲ್ಲನು 'ಮಧುಕೇಶ್ವರ'ನನ್ನು ಮರುಪ್ರತಿಷ್ಠಾಪಿಸುತ್ತಾನೆ.

ಇಲ್ಲಿ ಮೊದಲು ಮೂಡುವ ಪ್ರಶ್ನೆಯೆಂದರೆ ಶಿವಲಿಂಗವನ್ನು ಒಡೆದು ದೇವಾಲಯಕ್ಕೆ ಹಾನಿ ಮಾಡಿದ ಆ 'ಕೆಲವರು' ಎಂದರೆ ಯಾರು. ಜೈನ–ವೈಷ್ಣವರಿರಬೇಕು. ಇಲ್ಲವೇ ಇಸ್ಲಾಂ ಮತದವರೇ ಇರಬೇಕು. ಜೈನ–ವೈಷ್ಣವರು ಅದರಲ್ಲಿ ಭಾಗಿಯಾಗಿದ್ದರೆನ್ನುವುದು ಅಷ್ಟೊಂದು ಸಮಂಜಸವಲ್ಲ. ಯಾಕೆಂದರೆ ಅವರನ್ನು ಹುಡುಕಿ ಅವರಿಗೆ ದಂಡಹಾಕುವ, ಅವರನ್ನು ಶಿಕ್ಷಿಸುವ ಇನ್ನಿತರೆ ಕೆಲಸಗಳನ್ನು ಅಲ್ಲಿಯ ಆಡಳಿತದವರು ಮಾಡುವ ಅವಕಾಶವಿತ್ತು. ಅದೇ ಇಸ್ಲಾಂ ಮತಕ್ಕೆ ಸೇರಿದವರೇ ಅಲ್ಲಿ ಜಗಳವಾಡಿದವರ ಅನಯಯಾಯಿಗಳು ಈ ಕೆಲಸವನ್ನು ಮಾಡಿರುವ ಸಾಧ್ಯತೆಯಿದೆ. ಯಾಕೆಂದರೆ ದಾಳಿ ಮಾಡಿದವರ ಕುರಿತಾದ ಯಾವೊಂದು ವಿರೋಧದ ಮಾತೂ ಅಲ್ಲಿ ದಾಖಲಾಗಿಲ್ಲ. ಆದರೆ ಕೊನೆಯಲ್ಲಿ ಬರುವ 'ಕುಲಧರ್ಮವನ್ನು ಕಾಪಾಡಿಕೊಳ್ಳುವುದು ಅವರ ಕರ್ತವ್ಯ' ಎನ್ನುವ ಮಾತು ಧರ್ಮಸಾಮರಸ್ಯದ ಕುರಿತಾಗಿದ್ದ ಅಲ್ಲಿಯ ಅಧಿಕಾರಿಗಳ ಮನಸ್ಥಿತಿಯನ್ನು ಹೇಳುತ್ತದೆ.

ಮತ್ತೊಂದು ಇಸ್ಲಾಂ ರಾಜರ ದೇವಾಲಯದ ಕತೆಯನ್ನು ಇಲ್ಲಿ ನೋಡಬಹುದು[27]. ಔರಂಗಜೇಬನು ವಿಜಾಪುರದ ಆದಿಲಶಾಹಿಗಳನ್ನು ಯುದ್ಧದಲ್ಲಿ ಸೋಲಿಸುತ್ತಾನೆ. ಆನಂತರ ಭೀಮ ನದಿಯ ದಂಡೆಯ ಮೇಲೆ ಬೀಡು ಬಿಡುತ್ತಾನೆ. ಈ ಸಮಯದಲ್ಲಿ ಚಿತ್ರದುರ್ಗದ ಮದಕರಿ ಬರಮಪ್ಪ ನಾಯಕನೊಂದಿಗೆ ಯುದ್ಧ ನಡೆಯುತ್ತದೆ. ಈ ಯುದ್ಧದಲ್ಲಿ ಚಿತ್ರದುರ್ಗ ಸೀಮೆಗೆ ಸೇರಿದ ದೇವಾಲಯದ ಮೇಲೆ ಔರಂಗಜೇಬನ ಸೈನ್ಯವು ದಾಳಿ ಮಾಡಿ ನಾಶ ಮಾಡುತ್ತದೆ. ಯುದ್ಧದ ನಂತರ ನಾಯಕನು ಆ ದೇವಾಲಯವನ್ನು ಪುನಃ ಪ್ರತಿಷ್ಠಾಪಿಸುತ್ತಾನೆ. ಹೀಗೆ ಯುದ್ಧಕ್ಕೆ ಕಾರಣವಲ್ಲದಿದ್ದರು ಸಹ, ಯುದ್ಧದ ಮಧ್ಯೆ ಸಿಕ್ಕು ನಾಶವಾದಂತಹ, ವಿರೂಪಗೊಂಡಂತಹ ಅನೇಕ ದೇವಾಲಯಗಳ ಕತೆಗಳು ನಮಗೆ ಸಿಗುತ್ತವೆ. ಇವುಗಳು ಅದರಲ್ಲಿ ಕೆಲವು ಮಂತ್ರ.

ಇನ್ನೂ ಕೆಲವು ಘಟನೆಗಳಿರುತ್ತವೆ. ಅದರಲ್ಲಿ ದೇವಾಲಯದ ಯಾವ ಪಾತ್ರವೂ ಇಲ್ಲದಿದ್ದರೂ ಘಟನೆಯ ಪರಿಣಾಮದಲ್ಲಿ ದೇವಾಲಯದ ಪಾಲು ಇರುತ್ತದೆ. ಇಲ್ಲೊಂದು ಘಟನೆಯಿದೆ[28]. ಇದು ಶೈವ ಹಾಗೂ ಜೈನರ ನಡುವಿನ ಜಗಳ. ದಂಡೀಶ ಎನ್ನುವ ಶಿವಭಕ್ತನೊಬ್ಬನು ಶಿವನಗುಡಿಯ ಮುಂದೆ ಬಾವಿಕೊಡುತ್ತಿರುತ್ತಾನೆ. ಆಗ ಜೈನರು ಬಂದು ಬಾವಿ ತೋಡುವುದನ್ನು ತಡೆಯುತ್ತಾರೆ. ಈ ಜಗಳವು ರಾಜನ ಬಳಿ ಹೋಗುತ್ತದೆ. ಅಲ್ಲಿ ದಂಡೀಶನು ಸ್ಪರ್ದೆಯಲ್ಲಿ ಗೆಲ್ಲುತ್ತಾನೆ. ಬಹುಶಃ ಆ ಜಾಗವು ದಂಡೀಶನದೆಂದು ನಿರ್ಧಾರವಾಗಿರಬೇಕು. ರಾಜನು ಜೈನರಿಗೆ ಶಿಕ್ಷೆಯ ರೂಪದಲ್ಲಿ ಆ ಜಾಗದಲ್ಲಿದ್ದ ಜಿನ ಬಿಂಬಗಳನ್ನು ಕಿತ್ತು, ಅಲ್ಲಿಂದ ತೆಗೆಯಿಸುತ್ತಾನೆ.

ಎಂ.ಚಿದಾನಂದ ಮೂರ್ತಿಯವರು ತಮ್ಮ ಕೃತಿಯಲ್ಲಿ ಒಂದು ಕತೆಯನ್ನು ಪ್ರಸ್ತಾಪಿಸುತ್ತಾರೆ[29]. 'ಗಂಗರ ಮೂಲ ಪುರುಷನಾದ ಕೊಂಗುಣಿವರ್ಮನು ಜಿನಮುನಿ ಸಿಂಹನಂದಿಯಿಂದ ದತ್ತವಾದ ಖಡ್ಗದಿಂದ ಶಿಲಾಸ್ತಂಭವೊಂದನ್ನು ಕತ್ತರಿಸುತ್ತಾನೆ. ಇದೇ ಆ ಕತೆ. ಅವರೇ ಹೇಳುವಂತೆ ಡಾ॥ ಸಾಲೆತ್ತೋರ್ ಅವರ ಪ್ರಕಾರ ಈ ಘಟನೆಯ ಅರ್ಥ 'ಕರ್ನಾಟಕದಲ್ಲಿ ಪ್ರಬಲವಾಗುತ್ತಿದ್ದ ಜೈನರು ತಮ್ಮ ಅನುಯಾಯಿಗಳಿಂದ, ತಮ್ಮ ರಾಜರ ಸಹಾಯದಿಂದ ಬೌದ್ಧರನ್ನು ನಿರ್ಮೂಲನೆ ಮಾಡಿದ ವಿಷಯವನ್ನು ಸೂಚಿಸುತ್ತದೆ' ಎಂದಿದ್ದಾರೆ. ಒಂದು ಕಂಬ ಕತ್ತರಿಸುವುದರಲ್ಲಿ ಇಷ್ಟೊಂದು ಅರ್ಥಗಳಿರಬೇಕಾದರೆ ಇನ್ನೂ ದೇವಾಲಯಗಳನ್ನು ಕೆಡವುದರಲ್ಲಿ, ಮೂರ್ತಿಗಳನ್ನು ಧ್ವಂಸ ಮಾಡುವುದರಲ್ಲಿ ಎಷ್ಟೊಂದು ಅರ್ಥವಿರಬೇಡ.

ದೇವರ ಮೂರ್ತಿಗಳನ್ನು ನಾಶಮಾಡುವಲ್ಲಿ ಧಾರ್ಮಿಕ ಕಾರಣಗಳಿಗಿಂತ ಆರ್ಥಿಕ ಕಾರಣಗಳೂ ಸಹ ಪ್ರಮುಖವಾಗಿರುತಿದ್ದವು ಎಂದು ತೋರುತ್ತದೆ. ಈ ಹಿಂದೆಯೇ ನಿಧಿ ಆಸೆಗಾಗಿ

ಕಳ್ಳರು ಮೂರ್ತಿ ಒಡೆದ ಘಟನೆಯನ್ನು ಹೇಳಲಾಯಿತು. ಅಂತದ್ದೇ ಇನ್ನೊಂದು ಘಟನೆಯಿದೆ[30]. "ಶಿವರಾತ್ರಿಯ ಉಪವಾಸಮಿದ್ದು ಮಲ್ಲಯ್ಯ ದೇವರ ಬನದಲ್ಲಿ ಜಾಗರ ವಿಹಾಗ ಕಳ್ಳರು ದೇವಾಲಯವ ಮುತ್ತಲಾಗಿ ಕಳ್ಳರನ್ನು ಗಾಯವಮಾಡಿ ತಾನು ಘಾಯವಾಗಿ ಬಂದು" ಎಂದು ಒಟ್ಟಾರೆ ಘಟನೆಯನ್ನು ಶಾಸನವು ಈರೀತಿಯಾಗಿ ದಾಖಲಿಸುತ್ತದೆ. ಹಾಗೆ ಕಳ್ಳರ ವಿರುದ್ಧ ಹೋರಾಡಿದಾತನ ಹೆಸರು ತಿಳಿಯುವುದಿಲ್ಲ. ಈ ರೀತಿ ದುಡ್ಡಿನ ಆಸೆಗಾಗಿ ದೇವಾಲಯದ ಮೇಲೆ ದಾಳಿ ಮಾಡುತ್ತಿದ್ದ ಅನೇಕ ಪ್ರಸಂಗಗಳೂ ನಡೆಯುತ್ತಿದ್ದವು ಎಂಬುದನ್ನು ಈ ಶಾಸನವು ತಿಳಿಸುತ್ತದೆ.

ಈ ದೇವಾಲಯ ಕೇಂದ್ರಿತ ಹೋರಾಟದಲ್ಲಿ ಅತಿ ಹೆಚ್ಚಿನ ನಷ್ಟ ಅನುಭವಿಸಿದ್ದು ಆರಂಭದಲ್ಲಿ ಬೌದ್ಧರು ಮತ್ತು ನಂತರದಲ್ಲಿ ಜೈನರು. "ಕರ್ನಾಟಕದ ಪ್ರಧಾನಧರ್ಮಗಳಲ್ಲಿ ಬೌದ್ಧಧರ್ಮ ಅತಿ ಪ್ರಾಚೀನವಾದುದು" ಎಂದು ವಿದ್ವಾಂಸರೊಬ್ಬರು ಹೇಳುತ್ತಾರೆ[31]. ಸನ್ನತಿ, ಬನವಾಸಿ, ಕಲ್ಲೆ, ಬಾದಾಮಿ ಮುಂತಾದ ಕಡೆಗಳಲ್ಲಿ ಇದರ ಅವಶೇಷಗಳು ನಮಗೆ ಸಿಗುತ್ತವೆ. ಇವಲ್ಲದೆ ಬಳ್ಳಿಗಾವೆ, ಡಂಬಳ, ಚಂದ್ರವಳ್ಳಿ, ಇಂಡಿ, ಕದ್ರಿ ಮುಂತಾದವು ಈ ಧರ್ಮದ ಪ್ರಮುಖ ಕೇಂದ್ರಗಳಾಗಿದ್ದವು. ಇಂದು ಇವು ನಾಶವಾಗಿವೆ. ಇತರೆ ಮತಗಳೊಂದಿಗಿನ ಇವರ ಘರ್ಷಣೆಯಲ್ಲಿ ಬೌದ್ಧಧರ್ಮವು ತನ್ನ ದೇವಾಲಯಗಳನ್ನು, ಕೇಂದ್ರಗಳನ್ನು, ಅನುಯಾಯಿಗಳನ್ನು ಕಳೆದುಕೊಳ್ಳಬೇಕಾಯಿತು. ಹೀಗೆ ಇದು ಕಳೆದುಕೊಂಡ ಅನೇಕ ದಾಖಲೆಗಳು ನಮಗೆ ಸಿಗುತ್ತವೆ.

ಈಗ ಜೈನ ಬಸದಿಯೆಂದು ಗುರುತಿಸಿಕೊಂಡಿರುವ ಡಂಬಳದ ಒಂದು ಕಟ್ಟಡವು ಈ ಹಿಂದೆ ಬೌದ್ಧವಿಹಾರವಾಗಿತ್ತು[32]. ಮಂಗಳೂರಿನ ಕದ್ರಿಯಲ್ಲಿ ಅವಲೋಕಿತೇಶ್ವರ ಕಂಚಿನ ವಿಗ್ರಹದ ಮೇಲೆ ಕ್ರಿ.ಶ. 968 ಶಾಸನವಿದೆ. ಅಲ್ಲಿ ವಿಹಾರವಿದ್ದುದು ತಿಳಿಯುತ್ತದೆ. ನಂತರ ಆ ಕೇಂದ್ರವು ನಾಥ ಸಂಪ್ರದಾಯದ ಅಧೀನಕ್ಕೆ ಬಂದಿತು[33]. ಇದಲ್ಲದೆ ಕದರಿಯ ಮಂಜುನಾಥ ದೇವರು ಬಹುಶಃ ಬೌದ್ಧರ ಮಂಜುನಾಥ ಇರಬೇಕು. ಈಗ ಈತ ಹಿಂದೂಗಳ ದೇವರು[34]. ಪುರಿ ಜಗನ್ನಾಥ ಮತ್ತು ಬನವಾಸಿಗಳು ಮೊದಲು ಪ್ರಖ್ಯಾತವಾದ ಬೌದ್ಧ ಕೇಂದ್ರಗಳು. ಇವನ್ನು ವೈದಿಕರು ಹಾಳುಮಾಡಿ ತಮ್ಮವನ್ನಾಗಿ ಮಾಡಿಕೊಂಡರು ಎಂಬ ವಾದವಿದೆ[35].

ಬೌದ್ಧರ ನಂತರದ ಸರದಿ ಜೈನರದ್ದು. ಬೌದ್ದರೊಂದಿಗಿನ ಘರ್ಷಣೆಯಲ್ಲಿ ವಿಜಯವನ್ನು ಸಾಧಿಸಿದ ಜೈನರು ವೈಷ್ಣವ ಮತ್ತು ಶೈವರೊಂದಿಗೆ ಘರ್ಷಣೆಯನ್ನು ನಡೆಸಬೇಕಾದ ಅನಿವಾರ್ಯತೆಯಲ್ಲಿದ್ದರು. ದೇವಾಲಯಗಳ ಹಿನ್ನೆಲೆಯಲ್ಲಿ ಈ ಘರ್ಷಣೆಯು ಎರಡು ಪ್ರಮುಖ ಘಟ್ಟಗಳಿಗೆ ಬಂದು ತಲುಪಿತು. ಮೊದಲೆಯದಾಗಿ ವೈಷ್ಣವ ಮತ್ತು ಶೈವರೊಂದಿಗಿನ ಕದನದಲ್ಲಿ ಸೋತ

ಜೈನರು ತಮ್ಮ ಜಿನಾಲಯಗಳ ರಕ್ಷಣೆಗಾಗಿ ವೈಷ್ಣವರೊಂದಿಗೆ ಒಂದು ಒಪ್ಪಂದ ಮಾಡಿಕೊಂಡರು. ಈ ಒಪ್ಪಂದದ ಮೂಲಕ ಮಾಡಿದಂತವು 'ಬ್ರಹ್ಮ ಜಿನಾಲಯ'ಗಳು. ಅತ್ತಿಮಬ್ಬೆ ಕಟ್ಟಿಸಿದ ಲಕ್ಕುಂಡಿಯ ಜಿನದೇವಾಲಯದ ಘಟನೆಯೊಂದಿಗೆ ಇದನ್ನು ಸಾಬೀತು ಪಡಿಸಬಹುದು. 1002 ರಲ್ಲಿ ರಚಿತವಾದ ಈ ಜಿನಾಲಯ ಕುರಿತು 2 ಶಾಸನಗಳು ಬೆಳಕು ಚಲ್ಲುತ್ತವೆ. ಮೊದಲನೆಯದು ಜೈನಧರ್ಮ ಉಚ್ರಾಯ ಸ್ಥಿತಿಯಲ್ಲಿ ಇದ್ದಾಗಿನದು. ಮತ್ತೊಂದು ಕ್ರಿಶ 1007 ರದು. ಜೈನರು ಆ ಉಚ್ರಾಯ ಸ್ಥಿತಿಯಿಂದ ಕೆಳಗೆ ಇಳಿದಾಗಿನದು. ಒಂದು ಪ್ರಮುಖ ಅಂಶವೆಂದರೆ ಈ ಎರಡೂ ಶಾಸನಗಳು ಅತ್ತಿಮಬ್ಬೆಯು ಬದುಕಿರುವಾಗಲೇ ಹಾಕಿಸಿದಂತವು[36]. ಮೊದಲನೆಯದು ಒಡೆದು ನಾಶವಾಗಿದೆ. ಬಹುಶಃ ಇದು ವೈಷ್ಣವರಿಂದಲೇ ನಾಶಗೊಳಿಸಲ್ಪಟ್ಟಿರಬೇಕು. ಎರಡನೆಯ ಶಾಸನದಲ್ಲಿ ಇದಕ್ಕೆ 'ಬ್ರಹ್ಮ ಜಿನಾಲಯ'ವೆಂದು ಮರುನಾಮಕರಣ ಮಾಡಲಾಗಿದೆ. ಇದಕ್ಕೆ ಕಾರಣವೆಂದರೆ[37] ಈ ಜಿನಾಲಯ ಕಟ್ಟಿದಾಗಿನಿಂದ ಇದನ್ನು ನಾಶ ಮಾಡಲು ಅನ್ಯಧರ್ಮಿಯರು ಮೂರ್‍ನಾಲ್ಕು ಬಾರಿ ದಾಳಿ ಮಾಡಿದ್ದಾರೆ. ಪೂರ್ತಿಯಾಗಿ ನಾಶವಾಗದ ಇದನ್ನು ಮತ್ತೆ ಮತ್ತೆ ಜಿರ್ಣೋದ್ಧಾರ ಮಾಡಲಾಗಿದೆ. ಈ ದಾಳಿಯಿಂದ ಮುಕ್ತರಾಗಲು ಜೈನರು ವೈಷ್ಣವರೊಂದಿಗೆ ಅನಿವಾರ್ಯ ಒಪ್ಪಂದಕ್ಕೆ ಸಿದ್ಧರಾಗುತ್ತಾರೆ. ಇದರ ಪರಿಣಾಮವೇ 'ಬ್ರಹ್ಮ ಜಿನಾಲಯ'ಗಳು. ಇದೇ ರೀತಿಯ ಇನ್ನೊಂದು ಘಟನೆಯಿದೆ. ಕದಂಬ ಮನೆತನದ ಮಾಳಲದೇವಿಯು ಕುಪ್ಪಟೂರಿನಲ್ಲಿ ಒಂದು ಬಸದಿಯನ್ನು ನಿರ್ಮಿಸುತ್ತಾಳೆ. ಅದಕ್ಕೆ 'ಅಶೇಷ ಮಹಾ ಜನಂಗಳಂ ಯಥೋಕ್ತ ವಿಧಿಯಂ ಪೂಜಿಸಿಯವರಿಂ ಬ್ರಹ್ಮ ಜಿನಾಲಯವೆಂದು ಪೆಸರಿಟ್ಟು' ಅದನ್ನು ಜೈನಾಚಾರ್ಯರಿಗೆ ನೀಡಲಾಯಿತು ಎಂಬುದನ್ನು ಕಲಬುರ್ಗಿಯವರು ದಾಖಲಿಸುತ್ತಾರೆ[38]. ಹೀಗೆ ಬ್ರಹ್ಮಜಿನಾಲಯಗಳಾಗಿ ಬದಲಾದ ಇನ್ನೂ ಕೆಲವು ಬಸದಿಗಳ ಪಟ್ಟಿಯನ್ನು ಡಾ ಪಂಡಿತ್ ಕೆ ರಾಠೋಡ್ ಅವರು ತಮ್ಮ ಗ್ರಂಥದಲ್ಲಿ ದಾಖಲಿಸಿದ್ದಾರೆ[61]. ಅವುಗಳೆಂದರೆ

1. ಲಕ್ಕುಂಡಿಯ ಬ್ರಹ್ಮ ಜಿನಾಲಯ
2. ಕುಪಟೂರಿನ ಬ್ರಹ್ಮ ಜಿನಾಲಯ
3. ಮೋರಖಂಡಿಯ ಜಿನಾಲಯ
4. ಸೇಡಿಂಬ ಜಿನಾಲಯ
5. ಭಾಲ್ಕಿಯ ಬಸದಿ
6. ಅಮರಾಪುರದ ಜಿನಾಲಯ... ಮುಂತಾದುವು.

ಎರಡನೇಯದಾಗಿ ಶೈವರ ಜೊತೆಯಾಗಿ ಕೂಡ ಜೈನರು ಇಂತದ್ದೆ ಒಪ್ಪಂದಗಳನ್ನು ಮಾಡಿಕೊಂಡರು. ಈ ಒಪ್ಪಂದದ ಪರಿಣಾಮವಾಗಿ ಮೂಡಿದಂತವು 'ಎಕ್ಕೋಟಿ ಜಿನಾಲಯ'ಗಳು.

ಸಂಖ್ಯಾಬಲದಿಂದ ನೋಡಿದರೆ 'ಬ್ರಹ್ಮ ಜಿನಾಲಯ'ಗಳಿಗಿಂತ ಈ 'ಎಕ್ಕೋಟಿ ಜಿನಾಲಯ'ಗಳೇ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇದಕ್ಕೆ ಕಾರಣ ಇಷ್ಟೆ, ಅಂದು ಸಂಖ್ಯೆಯಲ್ಲಿಯೂ ಪ್ರಭಾವದಲ್ಲಿಯೂ ಅಧಿಕವಿದ್ದವರು ಶೈವರು.

ಕ್ರಿ.ಶ. 12ನೇ ಶತಮಾನದ ಶ್ರವಣಬೆಳಗೊಳದ ಒಂದು ಶಾಸನದಲ್ಲಿ ಬಾಹುಬಲಿ ಸೆಟ್ಟಿಯು ಮತ್ತು ಪಾರಿಸ ಸೆಟ್ಟಿಯರು ಶಾಂತರಾಜಪುರದಲ್ಲಿ ಮಾಡಿಸಿದ ಜಿನಾಲಯವನ್ನು 'ಎಕ್ಕೋಟಿ ಜಿನಾಲಯ'ವೆಂದು ಕರೆಯಲಾಗಿದೆ[39]. ಈ ಕ್ರಿಯೆಯಲ್ಲಿ ಜೈನರು ಶೈವರ ಜೋಗವಟ್ಟಿಗೆ, ನಂದಿಕೋಲುಗಳನ್ನು ಬಸದಿಗಳಲ್ಲಿ ಇಟ್ಟುಕೊಳ್ಳುತ್ತಿದ್ದರು. ಇನ್ನೊಂದು ಶಾಸನದಲ್ಲಿ ಹೀಗೆ ಘೋಷಿಸಲಾಗಿದೆ "ಶ್ರೀ ಮಾಲಸಂಘ ದೇಸಿಗಣದ ಪೊಸ್ತಕಗಚ್ಚದ ಕಂಬದ ಹಳ್ಳಿ ತೀರ್ಥವ ಎಕ್ಕೋಟಿ ಜಿನಾಲೆಯವೆಂದು ಹೆಸರಂ ಬೇರಿ ಪಂಚಾಮಹಾಶಬ್ದವಂ ಎಕ್ಕೋಟಿ ಮಹಾರುದ್ರರಿಳ್ದು ಕೊಟ್ಟರ ಅದನಾಗದೆಂದವಂ ಶಿವದ್ರೋಹಿ"[40]. ಕೊನೆಗೆ ಶಾಪಾಶಯದಲ್ಲಿ ಇದನ್ನು ಒಪ್ಪದವರನ್ನು ಶಿವದ್ರೋಹಿಗಳೆಂದು ಕರೆಯಲಾಗಿದೆ. ಶೈವರ ಮತ್ತು ಜೈನರ ಸಾಕ್ಷಿಯಾಗಿ ಒಪ್ಪಂದದ ಮೂಲಕ ಇಂತಹ ಕ್ರಿಯೆಗಳು ಜರುಗುತ್ತಿದ್ದವಾದ್ದರಿಂದ ಹೀಗೆ ಹೇಳಿರಬಹುದು. ಶಿವಮೊಗ್ಗದ ಇನ್ನೊಂದು ಶಾಸನವೂ ಸಹ "ಈ ಮರಿಯಾದೆಯಂ ಮೀರಿದಾತಾ ಸಿವದ್ರೊಹಂ ಪಂಚಮಹಾಪಾತಕಂ" ಎಂದು ಹೇಳುತ್ತದೆ[62]. ಜಿನಾಲಯಗಳನ್ನು ಈ ರೀತಿಯಾಗಿ ಮಾಡುವ ಕ್ರಿಯೆಯನ್ನು ಕ್ರಿ.ಶ. 1181ರ ತೇರದಾಳದ ಶಾಸನವು ವಿವರವಾಗಿ ವಿವರಿಸುತ್ತದೆ[41]. ತೇರದಾಳ ನೇಮಿತೀರ್ಥೇಶ್ವರ ಜಿನಾಲಯವು ಮೊದಲು ಕೊಲ್ಲಾಪುರದ ರೂಪನಾರಾಯಣ ಬಸದಿಯ ಆಡಳಿತದಲ್ಲಿ ಇತ್ತು. ಆ ಊರಿನ ಎಲ್ಲಾ ನಕರಗಳ ವಿನಂತಿಯಂತೆ ಕೊಲ್ಲಾಪುರದ ಘಟಿಕಾಸ್ಥಾನದ ಆಚಾರ್ಯರು ಮತ್ತು ಎಕ್ಕೋಟಿಯ ಸಂಖ್ಯಾತ ಗಣಂಗಳು ಒಂದುಗೂಡಿ ಆ ಜಿನಾಲಯವನ್ನು ಕಲಿದೇವ ದೇವಾಲಯಕ್ಕೆ ಪ್ರತಿಬದ್ಧಮಾಡುತ್ತಾರೆ. ಹೀಗೆ ಮಾಡುವಾಗ ಬಸದಿಯಲ್ಲಿ ಜೋಗವಟ್ಟಿಗೆಯನ್ನು ಇಟ್ಟರೆಂದೂ, ಬಸದಿಯ ಮೇಲೆ ಶೂದ್ರಕ, ಸಿಂಹ, ಛಕ್ರ ಈ ಚಿಹ್ನೆಗಳನ್ನು ಸ್ಥಾಪಿಸಿದರೆಂದೂ, ಈ ದೇವರಿಗೆ ತ್ರಿಶೂಲದ ಘಂಟೆ, ಪರೆಗಳ ಮರ್ಯಾದೆಯೆಂದು ನಿರ್ಣಯಿಸಿದ್ದಾಗಿ ಶಾಸನ ಹೇಳುತ್ತದೆ. ಹೀಗೆ ಜೈನರು ಶೈವರಿಗೆ ತಮ್ಮ ಜಿನಾಲಯಗಳನ್ನು ಪ್ರತಿಬದ್ದ ಮಾಡುವ ಕ್ರಿಯೆಯು ಕ್ರಿಶ 11,12,13 ನೇ ಶತಮಾನಗಳಲ್ಲಿ ಹೆಚ್ಚಾಗಿ ನಡೆದವು.

ಹೀಗೆ ಜಿನದಿಂದ ಶೈವಕ್ಕೆ ಬದಲಾದ ಕೆಲವು ದೇವಾಲಯಗಳನ್ನು ಕಲಬುರ್ಗಿಯವರು ದಾಖಲಿಸುತ್ತಾರೆ[64]. ಅವುಗಳೆಂದರೆ

1. ನರಗುಂದ ಕೊಣ್ಣೂರಿನ ಜಿನಾಲಯ ಇಂದು ಪರಮೇಶ್ವರ ದೇವಾಲಯ
2. ಹಾವೇರಿಯ ಜಿನಾಲಯ ಇಂದು ವೀರಭದ್ರ ದೇವಾಲಯ

3. ಹೂಲಿಯ ಪಂಚಕೂಟ ಬಸದಿ ಇಂದು ಪಂಚಲಿಂಗ ದೇವಾಲಯ ಮುಂತಾದುವು ......

ಶೈವರು ಅಂದು ಯಾವ ಮಟ್ಟದಲ್ಲಿ ಪ್ರಬಲರಾಗಿದ್ದರು ಮತ್ತು ಜೈನರು ಎಷ್ಟು ಅಸಹಾಯಕತೆಯಿಂದ ಜೀವನ ನಡೆಸುತ್ತಿದ್ದರು ಎಂಬುದನ್ನು ಒಂದು ಶಾಸನವು ವಿವರವಾಗಿ ಕಟ್ಟಿಕೊಡುತ್ತದೆ[42]. ಅದರ ಸಾರ ಸಂಗ್ರಹ ಹೀಗಿದೆ "ಅಂಣ ಸೇನಬೋವರು ಮತ್ತು ಅವನ ಸಾವಿರದವರು ಕೂಡಿ ಕಕ್ಕೆ ದಾಸುಸೆಟ್ಟಿ ಮತ್ತು ಅಡ್ಡಣೆ ಬಾಲ್ಯಮ್ಮ ಸೆಟ್ಟಿಯರ ಮನೆಯನ್ನು ಮತ್ತು ಸಕಲವನ್ನು ಜಪ್ತಿಮಾಡಿ, ಮನೆಯ ಮುಂದೆ ಕಲ್ಲನ್ನಿಟ್ಟು ಹೋಗುತ್ತಾರೆ. ಇದರಿಂದ ಕಂಗಾಲಾದ ಎಲ್ಲಾ ಜೈನರೂ ಬಸದಿಗಳ ಬಾಗಿಲು ಮುಚ್ಚಿ ಊರಿನಿಂದ ವಲಸೆ ಹೋಗತೊಡಗುತ್ತಾರೆ. ಇದರಿಂದ ಪರಿಣಾಮವಾಗಿ ಅಂಣಸೇನಬೋವನು ಜಪ್ತಿಮಾಡಿದ್ದ ಸಕಲ ವಸ್ತುಗಳನ್ನು ಹಿಂದಕ್ಕೆ ಕೊಟ್ಟು, ಅವರ ಬಸದಿಗಳ ಬಾಗಿಲು ತೆಗೆಸಿ, ತಂಟೆಗೆ ಬರುವುದಿಲ್ಲವೆಂದು ಪ್ರಮಾಣ ಮಾಡುತ್ತಾನೆ. ಈ ಪ್ರಮಾಣದ ತಾಮ್ರಶಾಸನವನ್ನು ಬಿದಿರೆಯ ಜೈನ ಮಠಾದೀಶರಾದ ಅಭಿನವ ಚಾರುಕೀರ್ತಿ ಪಂಡಿತರ ಸಮ್ಮುಖದಲ್ಲಿ, ಬಿದಿರೆಯ ಸೆಟ್ಟಿಕುಲದವರಿಗೆ, ನಾಲ್ವರು ಯಳಮೆಗೊಳಗಾದ ಜೈನ ಮುಖಂಡರಿಗೆ ಮತ್ತು ವ್ಯಾಪಾರಿಗಳಿಗೆ ಬರೆದುಕೊಡುತ್ತಾನೆ. "ಸಮಸ್ತರು ಕೂಡಿ ಹೀಗಾದರೆ ಯೀ ನಗರದಲೂ ಬಾಳೂದಶಕ್ಯವೆಂದು, ಯೆಲ್ಲಾ ಬಸ್ತಿಗಳ ಬಾಗಿಲು ಕಟ್ಟಿ". . . ಊರು ಬಿಟ್ಟಿದ್ದ ಜೈನರು, ನಂತರದಲ್ಲಿ ಆತನು "ನಿಂಮನು ಪೂರ್ವ್ವ ಮರ್ಯ್ಯಾದೆಯಲು ಬಾಳಿಸಿಯೇವು ಯಿದಕ್ಕೆ ತಪ್ಪಿದರೆ ಸೋಮನಾಥಗೆ ಪಾರ್ಶ್ವನಾಥಗೆ ತಪ್ಪಿದವರು" ಎಂದು ಶಾಸನ ಬರೆದುಕೊಟ್ಟ ನಂತರ ಊರಿಗೆ ಮರಳುತ್ತಾರೆ.

ಜಪ್ತಿಯನ್ನು ಯಾವ ಕಾರಣಕ್ಕೆ ಮಾಡುತ್ತಾರೆ ಎಂಬುದು ಖಚಿತವಾಗಿ ತಿಳಿದುಬರುವುದಿಲ್ಲ. ಅವರಿಗೆ ಸಾಲ ಕೊಟ್ಟ ಕಾರಣಕ್ಕೆ ಎಂದು ನಾವು ಭಾವಿಸುವುದಾದರೆ, ಉಳಿದ ಜೈನರೇಕೆ ತಮ್ಮ ಮನೆಯನ್ನು ತೊರೆಯಬೇಕು. ಎಲ್ಲರೂ ಸಾಲ ಪಡೆದಿದ್ದರು ಎಂಬುದನ್ನಂತು ಊಹಿಸಬಾರದು. ಬಹುಶಃ ಅಲ್ಪಸಂಖ್ಯಾತರಾದ ಜೈನರ ಅಸಹಾಯಕ ಸ್ಥಿತಿಯನ್ನು ಅವರು ಉಪಯೋಗಿಸಿಕೊಂಡಿರಬೇಕು. 'ಕಂಗಾಲಾದ ಎಲ್ಲಾ ಜೈನರು ಬಸದಿಗಳ ಬಾಗಿಲು ಮುಚ್ಚಿ ಊರಿನಿಂದ ವಲಸೆ ಹೋಗತೊಡಗುತ್ತಾರೆ' ಎಂಬುದರಲ್ಲಿ ಇದನ್ನು ಧ್ವನಿಸಬಹುದು. 'ಹೀಗಾದರೆ ಯೀ ನಗರದಲೂ ಬಾಳೂದಶಕ್ಯವೆಂದು' ಅವರು ಬಾವಿಸುತ್ತಾರೆ. 'ಯೀ ನಗರದಲೂ' ಎಂಬುದು 'ದೀರ್ಘಾಕ್ಷರ'ದಿಂದ ಕೊನೆಯಾಗುವುದರಿಂದ, ಅವರು ಮತ್ತ್ಯಾವುದೋ ನಗರದಲ್ಲಿ ಬಾಳುವುದು ಅಶಕ್ಯವೆಂದು ಇಲ್ಲಿಗೆ ವಲಸೆ ಬಂದವರು ಎಂದು ತಿಳಿಯಬೇಕೆ. ಇಲ್ಲವೇ ಇನ್ನಿತರ ಗ್ರಾಮಗಳಲ್ಲಿಯೂ ಸಹ ಇಂತಹ ಘಟನೆಗಳು ಜರುಗುತ್ತಿದ್ದವು ಎಂದು ತಿಳಿಯಬೇಕೆ. ಒಟ್ಟಿನಲ್ಲಿ ಪ್ರಕರಣವು ಸುಖಾಂತ್ಯವಾಗುತ್ತದೆ.

ಕೊನೆಗೆ ಸೋಮನಾಥ ಮತ್ತು ಪಾರ್ಶ್ವನಾಥ ಇಬ್ಬರ ಮೇಲೂ ಪ್ರಮಾಣ ಮಾಡಿರುವುದು ಧರ್ಮ ಸಾಮರಸ್ಯದ ಮಹತ್ವವನ್ನು ಕಾಣಿಸುತ್ತದೆ. ಇದು ಅಂದಿನ ಜೈನರ ಪರಿಸ್ಥಿತಿ.

ಹೀಗೆ ವೈಷ್ಣವರ ಮತ್ತು ಶೈವರ ದಾಳಿಗೆ ಮತ್ತು ಪ್ರಭಾವಕ್ಕೊಳಪಟ್ಟು ಅನೇಕ ಜಿನಾಲಯಗಳು ತಮ್ಮ ಮೂಲರೂಪವನ್ನು ಕಳೆದುಕೊಂಡವು. ಅಂಥಹವುಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಡಬಹುದು. ಅದರ ಕೆಲವು ಉದಾಹರಣೆಗಳು ಈ ಮುಂದಿನಂತಿವೆ.

ಸ್ಮಾರ್ತ ಬ್ರಾಹ್ಮಣನಾದ ಶಂಕರಾಚಾರ್ಯನು ಜೈನೋಪಾಧ್ಯಾಯರಲ್ಲೆ ವಿದ್ಯೆಯನ್ನು ಕಲಿತು, ಶುದ್ಧ ಶೈವಾಚಾರ ಪ್ರವರ್ಧಮಾನನಾಗಿ, ಶೃಂಗೇರಿಯ ಬಸದಿಯಲ್ಲಿ ಮುನ್ನಿದ್ದ ಜಿನಪ್ರತಿಮೆಯನ್ನು ಮರೆಸಿ ಅದನ್ನು ಸರಸ್ವತಿಯೆಂದು ಪೂಜಿಸಿ, ಅಲ್ಲಿ ಮಠವನ್ನು ನಿರ್ಮಿಸಿದ್ದಾಗಿ ದೇವಚಂದ್ರನು ಹೇಳುತ್ತಾನೆ[43]. ಈಗ ಇದನ್ನು ಶೃಂಗೇರಿಯ ಶಾರದಾಂಬ ಎಂದು ನಾವೆಲ್ಲ ಕರೆಯುತ್ತೇವೆ. ಮಧುರೆಯ ಮೀನಾಕ್ಷಿಯದ್ದು ಸಹ ಇದೇ ಕತೆ. ಪಾಂಡ್ಯಕುಲದ ಅರಸನು ಜಿನಧರ್ಮವನ್ನು ತೊರೆದ ನಂತರ ಜಿನಧರ್ಮ ದ್ವೇಷಿಯಾಗಿ ಅಲ್ಲಿಯ ಬಸದಿಯೆಲ್ಲವನ್ನು ತೆಗೆಯಿಸುತ್ತಾನೆ. ಪಾಂಡ್ಯ ವಂಶದ ಕುಲಸ್ವಾಮಿಯಾದ ನೇಮ ಸೋಮೇಶ್ವರ ಮೂಲಸ್ವಾಮಿಯನ್ನು ಮರೆಸಿ, ಕೂಷ್ಮಾಂಡಿದೇವಿಯ ಪ್ರತಿಮೆಯನ್ನು ಮೀನಾಕ್ಷಿಯೆಂದು ಮರುಹೆಸರಿಸುತ್ತಾನೆ[44]. ಇದೇ ಕವಿಯು ಶ್ರೀಶೈಲದ ಮಲ್ಲಿಕಾರ್ಜುನನ ಬಗ್ಗೆಯು ಇಂತದ್ದೆ ಕತೆ ಹೇಳುತ್ತಾನೆ. ಮಲ್ಲಿಕಾರ್ಜುನನು ಮೊದಲು ಜೈನ ದೇವತೆಯಾಗದ್ದು ನಂತರ ಶೈವರು ಅದನ್ನು ಅತಿಕ್ರಮಿಸಿದರು ಎಂದಾತ ಹೇಳುತ್ತಾನೆ[45]. ಇವುಗಳ ಸತ್ಯಾಸತ್ಯತೆಗಾಗಿ ನಾವು ಇನ್ನೂ ಹೆಚ್ಚಿನ ಅಧ್ಯಯನ ಮಾಡಬೇಕಾಗುತ್ತದೆ. ಇವನ್ನೆಲ್ಲಾ ದಾಖಲಿಸಿರುವ ಕವಿಯು ಜೈನಧರ್ಮೀಯನಾಗಿರುವುದರಿಂದ ಸ್ವಲ್ಪವಾದರೂ ಹೆಚ್ಚಿಗೆ ಹೇಳಿರಬೇಕು. ಆದರೆ ಒಂದಂತೂ ನಿಜ. ಬೌದ್ಧ ಮತ್ತು ಜೈನರ ಅನೇಕ ಪ್ರಸಿದ್ದ ಕ್ಷೇತ್ರಗಳೆಲ್ಲವೂ ಇಂದು ಹಿಂದು ಎಂದು ಕರೆಯಲಾಗುವ ಧರ್ಮದ ದೇವತೆಗಳ ವಾಸಸ್ಥಾನಗಳಾಗಿ ಬದಲಾಗಿವೆ.

ಒಂದು ಶಾಸನದಲ್ಲಿ ರಾಣಿ ಏಚಲಾದೇವಿಯ ಬಗ್ಗೆ ಮಾಹಿತಿ ಸಿಗುತ್ತದೆ. ಹಗರಟೆಯ ಯದುವಂಶದ ಅರಸನ ಮಗಳಾದ ಈಕೆ ಶಿವಭಕ್ತೆ. ಮೂರು ಶಿವಾಲಯ ಒಂದು ಜಿನಾಲಯ ಕಟ್ಟಿಸಿದ್ದಾಗಿ ತಿಳಿಯುತ್ತದೆ. ಈಕೆ ನೇಸರಗಿಯ ಬಸದಿಯಲ್ಲಿ ವೀರಭದ್ರನನ್ನು ಪ್ರತಿಷ್ಠಾಪಿಸಿ ವೀರಶೈವ ಮತಕ್ಕೆ ಗೌರವವನ್ನು ಸಲ್ಲಿಸುತ್ತಾಳೆ. ಈ ವೀರಭದ್ರ ದೇವಾಲಯವು ಮೂಲತಃ ಬಸದಿ ಎಂದು ಹೇಳಲಾಗುತ್ತದೆ[46]. ಜೈನಧರ್ಮದ ಪ್ರಮುಖ ಕೇಂದ್ರವಾಗಿದ್ದ ಕೊಪ್ಪಳದಲ್ಲಿ ಹಲವು ಬಸದಿಗಳು

ಇದ್ದುದಾಗಿ ಶಾಸನಗಳಿಂದ ತಿಳಿದುಬರುತ್ತದೆ. ಈಗ ಕೊಪ್ಪಳದಲ್ಲಿರುವುದು ಒಂದೇ ಬಸದಿ. ಈಗ ವೀರಶೈವರದಾಗಿರುವ ಗವಿಮಠವು ಮೊದಲು ಜೈನರದಾಗಿತ್ತು[47].

ಎಲ್ಲಾ ಕಾಲದಲ್ಲಿಯೂ ಜೈನರೇ ದಾಳಿಗೊಳಗಾದರು ಎಂದುಹೇಳುವಂತಿಲ್ಲ. ಕೆಲವು ಕಡೆ ಪ್ರಬಲವಾದ ಪ್ರತಿರೋಧವನ್ನು ತೋರಿದರು. ಕೆಲವು ಕಡೆ ತಾವೇ ದಾಳಿ ಮಾಡಿ ಇನ್ನೊಂದು ಮತದವರನ್ನು ಘಾಸಿಗೊಳಿಸಿದ್ದೂ ಉಂಟು. ಸಮಯಪರೀಕ್ಷೆಯಲ್ಲಿ ದಾಖಲಾಗಿರುವಂತೆ "ಶ್ರೀ ಮತ್ಸಮಂತ ಭದ್ರಸ್ವಾಮಿಯ ವಾಗ್ವಜ್ರಪಾತದಿಂದ ವಾರಣಾಸಿ ಗ್ರಾಮದ ಮಹೇಶಲಿಂಗವು ಒಡೆಯಲು ಜಿನನೊಳಗಿದ್ದನು" ಎಂದಿದೆ[48]. ಬಹುಶಃ ಇಲ್ಲಿ ವಾದ–ವಿವಾದವು ಜರುಗಿ ಶೈವರು ಸೋತಿರಬೇಕು. ಗೆದ್ದ ಜೈನರು ಅಲ್ಲಿಯೇ ಶಿವಲಿಂಗವನ್ನು ತೆಗೆಯಿಸಿ ಅಲ್ಲಿ ಜಿನನನ್ನು ಪ್ರತಿಷ್ಠಾಪಿಸಿರಬೇಕು. ಇಲ್ಲವೇ 'ಜಿನನೊಳಗಿದ್ದನು' ಎನ್ನುವ ಮಾತನ್ನು ನೋಡುವುದಾದರೆ ಅಲ್ಲಿ ಮೊದಲು ಜಿನ ದೇವಾಲಯವಿದ್ದು, ಅದನ್ನು ಶೈವರು ವಶಮಾಡಿಕೊಂಡಿರಬೇಕು. ಆ ನಂತರದಲ್ಲಿ ಜೈನರು ಅದನ್ನು ಮತ್ತೆ ವಶಮಾಡಿಕೊಂಡಾಗ ಮೂಲದ ಜಿನನು ಹೊರಬಂದಿರಬೇಕು ಎಂಬ ಅರ್ಥವನ್ನೂ ಮಾಡಬಹುದು. ಇನ್ನೊಂದು ಕಡೆ ಮಲ್ಲಿಕಾರ್ಜುನನ ಬಗ್ಗೆಯು ಈ ರೀತಿ ಬರುತ್ತದೆ. ಬಹುಶಃ ಇದು ಶ್ರೀಶೈಲದ ಮಲ್ಲಿಕಾರ್ಜುನ ಇರಬಹುದು. "ಮುಕ್ಕಾದರೆ ಬಳಿಕ ಆ ಲಿಂಗವನ್ನು ಮುಟ್ಟಿ ಪೂಜಿಸಲಾಗದು. ಹೀಗಿರಲು ಮಲ್ಲಿಕಾರ್ಜುನನು ಎರಡು ಹೋಳಾದುದನ್ನು ಕಂಡರೂ ಜಾತ್ರೆ ಬಂದು ಪೂಜಿಸುವವರು ಜಾತ್ರೆ ಮರುಳ್ಗಳೆಂಬಂತೆ" ಎಂದು ಶೈವರನ್ನು ಹೀಯಾಳಿಸಲಾಗಿದೆ[49]. ಈ ಹಿಂದೆಯೇ ಹೇಳಿದಂತೆ ವಿರೂಪಗಳಿಸಲಾದ ಮೂರ್ತಿಗಳನ್ನು ಪೂಜಿಸುವುದಿದ್ದಿಲ್ಲ ಎಂಬುದಕ್ಕೆ ಈ ಮಾತಿನಿಂದ ಪುಷ್ಠಿ ದೊರೆಯುತ್ತದೆ. ಆದರೆ ಇಲ್ಲಿ ಪೂಜಿಸಲಾಗಿದೆ ಮತ್ತು ಪೂಜಿಸಿದವರನ್ನು ಹೀಯಾಳಿಸಲಾಗಿದೆ. ಕೇವಲ ಮುಕ್ಕಾದರೇನೆ ಪೂಜಿಸಲು ಬಾರದು. ಅಂತದ್ದರಲ್ಲಿ ಎರಡು ಹೋಳಾದರು ಜನರು ಪೂಜಿಸುತ್ತಿದ್ದರಂತೆ. ಯಾವ ಕಾರಣಕ್ಕೆ ಲಿಂಗ ಹೋಳಾಯಿತೆಂದು ತಿಳಿಸಿಲ್ಲ. ಪ್ರಾಕೃತಿಕ ಕಾರಣಕ್ಕಿಂತ ಮಿಗಿಲಾಗಿ ಧಾರ್ಮಿಕ ಸಂಘರ್ಷದ ಕಾರಣಕ್ಕಾಗಿಯೇ ಇರಬೇಕು.

ಇದಾದ ನಂತರ ಮುಂದುವರೆದು ಆ ಕೃತಿಯಲ್ಲಿ ಮಹತ್ವದ ಅಂಶವೊಂದು ದಾಖಲಾಗಿದೆ. "ಜಿನನ ನೆತ್ತಿಯಲಿ ಒಗೆದುದು ಲಿಂಗವೆಂದೆಂಬರು, ಅಂತಲ್ಲಿ ಒಳಗೆ ಜಿನೇಶ್ವರನಿರುವನು, ಹೊರಗೆ ಲಿಂಗವು ಎಡಚುತನದಿಂದಿರುವುದು" ಎಂದು ಹೇಳಲಾಗಿದೆ[50]. ಜಿನಾಲಯವೊಂದನ್ನುನ ಶಿವಾಲಯವಾಗಿ ಬದಲು ಮಾಡುವ ಕ್ರಿಯೆಯ ಕುರಿತು ಈ ಮಾತಿರಬೇಕು. ಈ ಬಸದಿಗಳ ರೂಪ ಬದಲಾವಣೆ ಕ್ರಿಯೆ ಅಂದು ಜೋರಾಗಿಯೇ ನಡೆದಿರಬೇಕು. ರೂಪ ಬದಲಾವಣೆಗೆ ಇನ್ನೊಂದು ಮತದ ಮೇಲ್ಮೈ ಕಾರಣವಾದಂತೆ, ಸಾಮೂಹಿಕ ಮತಾಂತರವು ಒಂದು ಕಾರಣ. ಒಂದು ಪ್ರದೇಶದ

ಜನರು ಒಂದು ಮತದಿಂದ ಇನ್ನೊಂದು ಮತಕ್ಕೆ ಸಾಮೂಹಿಕವಾಗಿ ಮತಾಂತರವಾದಾಗ, ತಮ್ಮ ಹಳೆಯ ದೇವರನ್ನು ಬದಲಿಸಿ ಅಲ್ಲಿ ಹೊಸ ದೇವರನ್ನು ಕೂರಿಸುತ್ತಿದ್ದರು. ಒಟ್ಟಿನಲ್ಲಿ ಅಸಂಖ್ಯ ಜಿನಾಲಯಗಳು ರೂಪಾಂತರವಾಗಿದ್ದಂತು ಸ್ಪಷ್ಟ. ಪ್ರಾಚೀನದಿಂದಲೂ ಬಂದ ಬುದ್ದ, ಶೈವ, ವೈಷ್ಣವ ಈ ಧರ್ಮಗಳಿಂದ ಮಾತ್ರವೇ ಅಲ್ಲದೇ, ಮಧ್ಯಕಾಲದಲ್ಲಿ ಬಂದ ಇಸ್ಲಾಂನಿಂದಲೂ ಕೂಡ ಜೈನ ದೇವಾಲಯಗಳ ಮೇಲೆ ದಾಳಿಯಾಯಿತು. ಕ್ರಿ.ಶ. 16ನೇಯ ಶತಮಾನದ ಮುಳಗುಂದ ಶಾಸನವು ಈ ಜೈನ–ಇಸ್ಲಾಂ ಘರ್ಷಣೆಯ ಕುರಿತು ಬೆಳಕು ಚೆಲ್ಲುತ್ತದೆ[51].

**"ಶ್ರೀ ಜಿನ ಪಾರ್ಶ್ವನಾಥನ ಮಹಾ**
**ಚೈತ್ಯಾಲಯಂ ದುರ್ಮ್ಮಖರ್ಕ್ಕಡುಮೂರ್ಕ್ಕತ್ತುರುಕ**
**ಸ್ರ್ಸುಡಲ್ಕೆ ತೊಲೆಗಳ್ಕಂಭಂಗಳುಂ ಭಿತ್ತಿಗೆಳ್ಕೆಳೆಯ**
**ಲ್ಕಂಡು ಸುವಜ್ರದ ಮತ್ಯ ಬಲು ಪಂತುಂ ತಾಳ್ದಿರಲ್ಕ**
**ಡಿದಂ ಪೊಡುವೀಖ್ಯಾತ ಸಹಸ್ರಕೀರ್ತಿಯತಿಪಂ"**

ಎಂದು ಶಾಸನದಲ್ಲಿ ಬರೆಯಲಾಗಿದೆ. ಆ ಜಿನಪಾರ್ಶ್ವನಾಥನ ಮಹಾಚೈತ್ಯಾಲಯವನ್ನು ದುರ್ಮೂರ್ಕರಾದ, ಕಡುಮೂರ್ಖರಾದ ತುರುಕರು ಸುಟ್ಟು ಹಾಕಿದರು ಎಂದು ಹೇಳಲಾಗಿದೆ. ತೊಲೆಗಳುಂ ಕಂಬಗಳುಂ ಭಿತ್ತಿಗಳು ಆ ಬೆಂಕಿಗೆ ಆಹುತಿಯಾಗುತ್ತವೆ. 16ನೇ ಶತಮಾನದ ಅವಧಿಯ ವೇಳೆಗಾಗಲೇ ಇಸ್ಲಾಂ ಇಲ್ಲಿ ಪ್ರಬಲವಾಗಿ ಬೆಳೆದಿತ್ತು. ಈ ಕಾಲದ ದಾಖಲೆಗಳಲ್ಲಿ ಬರಿ ಜೈನರಷ್ಟೇ ಅಲ್ಲ, ಇಸ್ಲಾಂಗೆ ಹೊರತಾದ ಮತಗಳ ಎಲ್ಲಾ ಕಟ್ಟಡಗಳನ್ನು ಅವರು ನಾಶಗೊಳಿಸುತ್ತಿದ್ದರು. ಇಲ್ಲವೇ ತಮ್ಮವನ್ನಾಗಿ ಬದಲಾಯಿಸಿಕೊಳ್ಳುತ್ತಿದ್ದರು. ಅಂತಹ ಹಲವು ಉದಾಹರಣೆಗಳು ನಮಗೆ ಸಿಗುತ್ತವೆ.

ದೇವಾಲಯದ ಜಾಗದಲ್ಲಿ ಮಸೀದಿಯನ್ನು ನಿರ್ಮಿಸಿದರೆಂದು ಹೇಳುತ್ತಾ ಒಂದು ಶಾಸನವು ಪ್ರಾರಂಭವಾಗುತ್ತದೆ[52]. ಈ ಶಾಸನವನ್ನು ಫರ್‍ಹಾಬಾಗ್‌ನ ಮಸೀದಿಯ ಕಲ್ಲಿನ ಮೇಲೆ ಕೆತ್ತಲಾಗಿದೆ. "ಅಬುಜ್ ಜಫರ್ ಔರಂಗಜೇಬ್ ಬಹದೂರನು ಈ ಪ್ರದೇಶವನ್ನು ಗೆದ್ದು ಧರ್ಮನಿಂದೆಯ ಮತ್ತು ಕತ್ತಲೆಯ ಬುಡವನ್ನು ಕಿತ್ತು ಇಸ್ಲಾಂ ಧರ್ಮಕ್ಕೆ ತಳಹದಿಯನ್ನು ಹಾಕಿದ. ಇವನ ಸೇವಕನಾದ ಜಫರಾಬಾದ್ ï ಮಕಾಖ್ತಾನ್ ಖಾನನು ದೇವಾಲಯವನ್ನು ಬೀಳಿಸಿ ಇಲ್ಲಿ ಮಸೀದಿಯನ್ನು ಕಟ್ಟಿಸಿದ. ದೇವರ ದಯೆಯಿಂದ ಈ ದೇವಾಲಯವು ಮಸೀದಿಯಾಗಿ ಪರಿವರ್ತಿತವಾಯಿತು" ಎಂದು ಶಾಸನವು ಹೇಳುತ್ತದೆ. ದೇವಾಲಯವೊಂದನ್ನು ಮಸೀದಿಯಾಗಿ ಬದಲು ಮಾಡಲಾದ ಕ್ರಿಯೆಯೊಂದು ಇಲ್ಲಿ ದಾಖಲಾಗಿದೆ. ಇಂತಹ ಬದಲು ಮಾಡುವಿಕೆಯು ಆ ಕಾಲದಲ್ಲಿ ಅಪರೂಪವೇನೂ ಆಗಿರಲಿಲ್ಲ.

ಇಲ್ಲಿ 'ಕತ್ತಲೆಯ ಬುಡವನ್ನು ಕಿತ್ತು' ಎನ್ನುವ ಮಾತನ್ನು ಗಮನಿಸೋಣ. ಆ ಕಾಲದಲ್ಲಿ ಏಕೆ ಎಲ್ಲಾ ಕಾಲದಲ್ಲಿಯೂ ಇಂತಹ ಭಾವನೆ ಯಾವತ್ತೂ ಇರುವಂತದೇ ಆಗಿದೆ. ಒಂದು ಮತಕ್ಕೆ ಇನ್ನೊಂದು ಮತವು ಅಂಧಕಾರದ ಕೂಪವಾಗಿಯೇ ಯಾವಾಗಲೂ ಕಾಣುತ್ತದೆ. ಆಗಿನವರ ಭಾವನೆಯು ಇದೇ ಆಗಿತ್ತು. ಇಲ್ಲಿ ಇಸ್ಲಾಂ ಧರ್ಮಕ್ಕೆ ತಳಹದಿಯನ್ನು ಹಾಕಿದ ಎಂಬುದನ್ನು ಬೇರೆ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವೇ ನೋಡಬೇಕಿದೆ. 1347 ರಲ್ಲಿ ಬಹಮನಿಗಳ ಮೂಲಕ ಇಲ್ಲಿ ಇಸ್ಲಾಂ ಸಾಮ್ರಾಜ್ಯವು ಇಸ್ಲಾಂ ಧರ್ಮದೊಂದಿಗೆ ಆಗಲೇ ತಳಹದಿಯನ್ನು ಹಾಕಿಕೊಂಡಾಗಿತ್ತು. ನಾವಿಲ್ಲಿ ಹೆಚ್ಚು ಪ್ರಾಮುಖ್ಯತೆ ಕೊಡಬೇಕಿರುವುದು 'ದೇವಾಲಯವನ್ನು ಬೀಳಿಸಿ ಮಸೀದಿಯನ್ನು ಕಟ್ಟಿಸಿದ' ಎನ್ನುವ ವಿಷಯಕ್ಕೆ. ಆಗಿನ ಕಾಲದಲ್ಲಿ ಅಸಂಖ್ಯಾತ ದೇವಾಲಯಗಳ ಕತೆಯು ಹೀಗೆಯೇ ಆಗುತ್ತಿತ್ತು. ಇದಕ್ಕೆ ಪೂರಕ ಎನ್ನುವಂತೆ ಹೆಚ್ಚಿನ ವಿವರಗಳು ಲಭ್ಯವಿಲ್ಲದ "ಈ ಮಸೀದಿಯನ್ನು ದೇವರ ದಯೆಯಿಂದ ಕಟ್ಟಲಾಯಿತು" ಎಂಬುದನ್ನು ಹೊಂದಿರುವ ಮತ್ತೊಂದು ಶಾಸನವು ದೊರೆಯುತ್ತದೆ[53]. ಈ ಮೇಲಿನ ಶಾಸನದಲ್ಲಿಯೂ ಕೂಡ 'ದೇವರ ದಯೆಯಿಂದ' ಎಂಬ ಸಾಲನ್ನು ಓದಿದೆವು. ಇದೇ ಮಸೀದಿಯ ಇನ್ನೊಂದು ಶಾಸನದಲ್ಲಿಯೂ ಕೂಡ 'ದೇವರ ದಯೆಯಿಂದ ರಚಿಸಲಾಗಿದೆ' ಎಂದು ಬರೆಯಲಾಗಿದೆ. ಈ ಹೇಳಿಕೆಯನ್ನು ಗಮನಿಸಿದಾಗ ಈ ಮಸೀದಿಗಳು ಸಹ ಹಿಂದೆ ಬೇರೊಂದು ಧರ್ಮದ ದೇವಾಲಯಗಳಾಗಿದ್ದು ನಂತರದಲ್ಲಿ ಅಲ್ಲಿ ಮಸೀದಿಗಳಾಗಿ ರಚಿತವಾಗಿರುವಂತೆ ತೋರುತ್ತದೆ. ಇಲ್ಲವೇ ಬದಲುಗೊಳಿಸಲ್ಪಡುವ ಅಥವಾ ಕಟ್ಟಲ್ಪಡುವ ಪ್ರತಿ ನಿರ್ಮಾಣಕ್ಕೂ ಮುಸ್ಲಿಮರು ಹೀಗೆ 'ದೇವರ ದಯೆಯಿಂದ' ಎನ್ನುವುದನ್ನು ಹಾಕಿಕೊಳ್ಳುತ್ತಿದ್ದರು ಎಂದು ಇನ್ನೊಂದು ಅರ್ಥವನ್ನು ಮಾಡಬಹುದು.

ಮುಸಲ್ಮಾನರ ಆಗಮನದಿಂದ ಭಾರತದಲ್ಲಿ ದೇವಾಲಯ ನಾಶ ಸಂಸ್ಕೃತಿಯ ಬೇರೋಂದು ಸಮಯ ಆರಂಭವಾಯಿತು. ತಮಲ್ಲಿಯೇ ಕಚ್ಚಾಡುತ್ತಿದ್ದ ಇಲ್ಲಿಯ ಮತಗಳ ಮೇಲೆ ಮುಸಲ್ಮಾನರು ದಾಳಿನಡೆಸಿದರು. ಇದನ್ನು ಕಲಬುರ್ಗಿಯವರ ಮಾತುಗಳಲ್ಲಿ ಹೀಗೆ ಹೇಳಬಹುದು "ಹೊರಗಿನಿಂದ ಪ್ರವೇಶಿಸಿದ ಮುಸಲ್ಮಾನರಿಂದಾಗಿ ಇವರೆಲ್ಲರ ದೇವಾಲಯಗಳು ಹೊಸ ಬಗೆಯ ದುರಂತಕ್ಕೆ ಒಳಗಾದವು. ಆದರೆ, ಈವರೆಗೆ ದೇವಾಲಯ ಧ್ವಂಸಕಾರ್ಯ, ಮತಾಂತರ ಒತ್ತಾಯ ಕಾರ್ಯಗಳಿಂದ ದೂರವಿದ್ದ ಆಳುವವರ್ಗ ಈಗ ನೇರವಾಗಿ ಈ ಕಾರ್ಯಗಳಲ್ಲಿ ಕೈ ಹಾಕಿತು. ಒತ್ತಾಯದ ಮತಾಂತರವೆಂಬ ಹೊಸ ಪ್ರಯೋಗದಿಂದಾಗಿ ರಾಜಕೀಯ ದಾಳಿಯೆಂದರೆ ಧಾರ್ಮಿಕ ದಾಳಿಯೆಂಬಂತ ಪರಿಸ್ಥಿತಿ ಈಗ ನಿರ್ಮಾಣವಾಯಿತು. ಯಾವುದೇ ಹಿಂದೂ ವಿಗ್ರಹವನ್ನು ಯಾರೇ ಭಗ್ನಗೊಳಿಸಿರಲಿ ಅಥವಾ ತಾನೇ ಸ್ವಾಭಾವಿಕ ಭಗ್ನಗೊಂಡಿರಲಿ, ಕೊಡಲಿ ಮಹಮ್ಮದ ಭಗ್ನಗೊಳಿಸಿದ'ನೆಂಬುದು ಮನೆ ಮಾತಾಗುವಂತೆ ಈ ಕಾರ್ಯ ನಮ್ಮ ನಾಡಿನಲ್ಲಿ ಘಟಿಸಿತು"[55] ಎಂದವರು

ಹೇಳುತ್ತಾರೆ. ಒಟ್ಟಿನಲ್ಲಿ ಧರ್ಮಸಂಘರ್ಷದ ಆಖಾಡಕ್ಕೆ ಮತ್ತೊಬ್ಬ ಸ್ಪರ್ಧಿಯ ಅಗಮನವಾದಂತೆ ಆಯಿತು. ಮುಸಲ್ಮಾನರ ಪ್ರವೇಶದಿಂದಾಗಿ ನಮ್ಮ ಸಮಾಜದಲ್ಲಾದ ಅನೇಕ ಬದಲಾವಣೆಗಳಲ್ಲಿ ಇದೂ ಒಂದು. ಮುಂದುವರೆದು ಇದಕ್ಕೆ ಒಂದೆರೆಡು ಉದಾಹರಣೆಗಳನ್ನು ಸಹ ಕಲಬುರ್ಗಿಯವರು ನೀಡುತ್ತಾರೆ. ವಿಜಾಪುರದಲ್ಲಿ ಕವಿ ನಾಗಚಂದ್ರ "ವಿಜಯಪುರಕ್ಕಲಂಕರಣ" ವೆನ್ನುವಂತೆ ಕಟ್ಟಿಸಿದ್ದ ಮಲ್ಲಿನಾಥ ಜಿನಾಲಯ ಕಾಲಕ್ರಮದಲ್ಲಿ ಕರೀಮುದ್ದೀನ ಮಸೀದಿಯಾಗಿದೆ. ಬೆಳಗಾವಿ ಜಿಲ್ಲಾ ಪ್ರದೇಶದ ಒಂದು ಮಸೀದಿ ಮೂಲತಃ ಹಿಂದೂ ದೇವಾಲಯವಾಗಿದ್ದುದಕ್ಕೆ ಸ್ಪಷ್ಟ ಕುರುಹುಗಳಿವೆ.

ಇದಲ್ಲದೆ ಈ ಕಾಲದ 'ರಕ್ಕಸತಂಗಡಿ' ಯುದ್ಧವನ್ನು ಕುರಿತು ಹೇಳುತ್ತಾ ಈ ಬಗ್ಗೆ ಕಮಲಾಪುರದ ಕೈಫಿಯೊತ್ತೊಂದನ್ನು ದಾಖಲಿಸಿದ್ದಾರೆ. ಅದರ ಪ್ರಕಾರ "ಪಟ್ಟಣದ ಯಾವತ್ತೂ ದೇವಾಸ್ಥಾನಗಳು, ದಿವಾಣಗಳು, ಮಹಲುಗಳು, ದಿವಾನಖಾನಗಳು ಮತ್ತು ದೇವಾಸ್ಥಾನ ಗೋಪುರಗಳು ಮುಂತಾದವು ಯಾವತ್ತೂ ಬೆಂಕಿ ಹಾಕಿ ಸುಟ್ಟುಬಿಟ್ಟರು" ಎಂದು ಆ ಕೈಫಿಯತ್ತು ದಾಖಲಿಸುತ್ತದೆ. ಮುಸಲ್ಮಾನ ಅರಸರ ಈ ಕಾರ್ಯಗಳನ್ನು ದೇವಚಂದ್ರನು ತನ್ನ ರಾಜಾವಳೀ ಕತಾಸಾರದಲ್ಲಿ ಹೀಗೆ ದಾಖಲಿಸುತ್ತಾನೆ "ಹೊಯ್ಸಳ ಪತನ ನಂತರ ದಿಲ್ಲಿಯ ಬಾದಶಾಹನು ಜಿನಗೃಹ, ಶಿವಾಲಯ, ವಿಷ್ಣುವಿನಾಲಯ ಮುಂತಾದ ಸಕಲ ದೇವಸ್ಥಾನಗಳು ಇಪ್ಪತ್ತು ವರ್ಷದಿಂ ತೊಡಗಿ ಎಂಬತ್ತು ವರ್ಷದವರೆಗೂ ದಿನಂಪ್ರತಿ ತಪ್ಪದೆ ಉತ್ತರ ದೇಶ ಪೂರ್ವ ಪಶ್ಚಿಮ ದೇಶಂಗಳೊಳಿರ್ದವ ಹೇಳ ಹೆಸರಿಲ್ಲದಂತೆ ಪಾಳುಮಾಡಿ ಅಲ್ಲಲ್ಲಿ ಮಸೀತಿಗಳಂಮಾಡಿಸಿ ಫಕೀರರಂ ನಿಲಿಸಿ[63]" ಎಂದು ವಿವರಿಸಿದ್ದಾನೆ. ಮುಸಲ್ಮಾನರು ಪ್ರಬಲರಾದ ಸಮಯದಲ್ಲಿ ಈ ರೀತಿಯ ಅನೇಕ ಕಾರ್ಯಗಳನ್ನು ಅವರು ಮಾಡಿದರು. ಅನೇಕ ದಾಖಲೆಗಳು ಸಹ ಈ ಕುರಿತು ನಮಗೆ ಸಿಗುತ್ತವೆ. ಇವು ಒಂದೆರೆಡು ಉದಾಹರಣೆ ಮಾತ್ರ.

ದೇವಾಲಯ ನಾಶ ಎನ್ನುವ ವಿಷಯ ಬಂದಾಗ ಮೂವರ ಹೆಸರಿಲ್ಲದೆ ಅದು ಪೂರ್ಣವಾಗುವುದಿಲ್ಲ. ಅವುಗಳೆಂದರೆ ಆದಯ್ಯ, ಏಕಾಂತ ರಾಮಯ್ಯ ಮತ್ತು ಗೊಗ್ಗಿದೇವ. ಇನ್ನೂ ಅನೇಕರು ಈ ಪಟ್ಟಿಯಲ್ಲಿ ಇರಬಹುದಾದರು, ಪ್ರಮುಖವಾಗಿ ಕಾಣಸಿಗುವುದು ಇವರೇ. ಇವರನ್ನು ಒಳಗೊಂಡಂತೆ ಈ ಎಲ್ಲಾ 'ಧರ್ಮವೀರ'ರ ಕುರಿತು ಒಂದು ಶಾಸನ ಈ ರೀತಿ ಮಾಹಿತಿ ನೀಡುತ್ತದೆ[56].

**"ಪರಸಮಯ ಗಿರಿ ವಜ್ರದಂಡರು**
**ಜಗದಲುದ್ದಂಡರುಂ ಜಿನಸಮಯ**
**ವನದಹನ ದಾವಾನಳರುಂ**

**ಮುನಿದರ್ಗ್ಗೆ ಹಾಳಾಹಳರುಂ**

**ಬೌದ್ಧ ಸಮಯ ವಿಧ್ವಂಸನ ಪ್ರವೀಣರುಂ**

**ಬಗೆಯಲು ಜಾಣರುಂ**

**ಅನ್ಯಸಮಯಿಗಳ ಬೆನ್ನ ಬಾರನ್ನೆತ್ತುವರುಂ**

**ಸೆಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ**

**ಪರಸಮಯ ಘರಟ್ಟರುಂ**

**ವೀರಕು(ಪ್ಪ)ರವಟ್ಟರುಂ**

**ಕಾಲನ ನಾಲಗೆಯಂ ಕೀಳ್ವರುಂ**

**(ಬಾ)ರಿಯಂ ಕೂರದಗ್ಗೀವರು . . .**

**ಪರಸಮಯ ಸರಸಿಜಾತ ಸಮೂಹ ಮದಕರಿಗಳಂ"**

ಎಂದು ಇನ್ನೂ ಮುಂತಾಗಿ ಶಾಸನವು ಇವರನ್ನು ವರ್ಣಿಸುತ್ತದೆ. ಈ ವಿಶೇಷಣಗಳೆಲ್ಲ ಮುಗಿದ ಮೇಲೆ ಇನ್ನೂ ಮುಂದುವರೆದಂತೆ ಶಾಸನವು ಕೆಲವು ಊರುಗಳ ಹೆಸರನ್ನು ಹೇಳುತ್ತದೆ. ಅವುಗಳೆಂದರೆ

1. ಪರಿಯಳಿಗೆ
2. ಅಣಿಲೆವಾಡ
3. ಉಣುಕಲ್ಲು
4. ಸಂಪಗಾವಿ
5. ಅಬ್ಬಲೂರು
6. ಮಾರುಡಿಗೆ
7. ಅಣಂಪೂರು
8. ಕರಹಾಡ
9. ಕೆಂಬಾವಿ
10. ಬಮ್ಮಕೂರು...

ಈ ಮೊದಲಾದ "ಅನನ್ತದೇಶದೇಶಾನ್ತರದಲಿದಿರಾದ ಪರಸಮಯಿಗಳಂ ಪಡಲ್ವಡ್ಸಿ ಲೋಕಮನಾಕಂಪಂಗೊಳ್ಸಿ ಬಸದಿಗಳಂ ಹೊಸದು ಮುಕ್ಕಿ ಶಿವಲಿಂಗ ಸಿಂಸಾಸನಮಂಣ್ಗೊಳ್ಸಿ" ಎಂದು ವರ್ಣಿಸುತ್ತದೆ. ಮೇಲಿನ ಪಟ್ಟಿಯಲ್ಲಿ ನೀಡಲಾದ ಆ ಎಲ್ಲಾ ಊರುಗಳು ಜೈನರ ಪ್ರಮುಖ ಕ್ಷೇತ್ರಗಳು ಇದ್ದಿರಬೇಕು. ಆ ಊರುಗಳಲ್ಲಿ ಇರುವಂತ ಎಲ್ಲ ಬಸದಿಗಳ ಮೇಲೆ ದಾಳಿ ಮಾಡಿ, ಅಲ್ಲಿರುವ ಜಿನವಿಗ್ರಹಗಳನ್ನು ಕಿತ್ತು, ಅಲ್ಲಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಯಿತು ಎಂಬ ವಿಷಯವನ್ನು

ಶಾಸನವು ವಿವರಿಸುತ್ತದೆ. ಆ ಎಲ್ಲಾ ಊರುಗಳ ಕುರಿತು ಹೆಚ್ಚಿನ ಸಂಶೋಧನೆಯನ್ನು ಮಾಡಬೇಕಿದೆ. ಹೀಗೆ ದೇವಾಲಯ ನಾಶದಲ್ಲಿ ತೊಡಗಿದ್ದ ಆ ಅವರನ್ನು ವರ್ಣಿಸಿತ್ತಿರುವುದನ್ನು ನೋಡಿದರೆ, ಇಂತಹ ನಾಶ ಕಾರ್ಯಕ್ಕಾಗೆ ಬಹುದೊಡ್ಡ ಗುಂಪೊಂದು ಸಂಘಟಿತರಾಗಿದ್ದಂತೆ ತೋರುತ್ತದೆ. ಭಾರತದ ಇತಿಹಾಸದಲ್ಲಿ ಈ ಸಂಘಟನೆ ಹೊಸದೇನೂ ಅಲ್ಲ. ಪ್ರಾಚೀನ ಭಾರತದಲ್ಲಿ ದೇವಾಲಯವನ್ನೂ ದೇವರನ್ನೂ ನಾಶಮಾಡುವುದರ ಜೊತೆ ಅದರಲ್ಲಿ ಅಡಗಿರಬಹುದಾದ ಸಂಪತ್ತನ್ನು ಹೇಗೆ ದೋಚಬೇಕು ಎನ್ನುವ ರಾಜಕೀಯ ವಿಭಾಗಗಳೇ ಇದ್ದುವಂತೆ. ಇದನ್ನು ಕಲ್ಹಣನು ತನ್ನ 'ರಾಜ ತರಂಗಿಣಿ' ಕೃತಿಯ 'ದೇವಾಲಯ ಮೂಲೋತ್ಪಾಟನ' ಎಂಬ ಅಧ್ಯಾಯದಲ್ಲಿ ವಿವರಿಸಿದ್ದಾನೆ.

ಕೇವಲ ಶಾಸನಗಳು ಮಾತ್ರವಲ್ಲದೇ ಕಾವ್ಯಗಳು ಸಹ ಇಂತಹ ಕಾರ್ಯಗಳನ್ನು ಹಿಡಿದಿಟ್ಟಿವೆ. ಮಾರುಡಿಗೆಯ ನಾಚಿತಂದೆಯ ರಗಳೆಯಲ್ಲಿ ಹರಿಹರನು ಇದನ್ನು ಹೀಗೆ ವರ್ಣಿಸುತ್ತಾನೆ[57].

**"ಗಣ ಸಂಕುಳಂ ಬೆರಸಿ ಪುರದೊಳಗೆ ನಡೆನಡೆದು**
**ಅಣಕಿಸುತೆ ಬತ್ತಲೆಯ ಬೊಂಬೆಗಳ ನೊಡೆನೊಡೆದು**
**ಅಲ್ಲಲ್ಲಿ ಲಿಂಗ ಪ್ರತಿಷ್ಠೆಯಂ ಮಾಡುತಂ**

**ಆ ದೇಶದೊಳಗಳೇಳ್ನೂರು ಬಸದಿಯೊಳಿರ್ಪ**
**ಸಾದರಂ ಸವಣರೆಲ್ಲಂ ಪೊಡಮಡುತ್ತಿರ್ಪ**
**ಬತ್ತಲೆಯ ಬೊಂಬೆಗಳ ನೊಡಗಟ್ಟಿ ಕಳೆವುತಂ**
**ಮತ್ತಲ್ಲಿ ಲಿಂಗ ಪ್ರತಿಷ್ಠೆಯಂ ಮಾಡುತಂ**
**ಮಾರುಡಿಗೆಯಂ ಶಿವಪುರಂ ಮಾಡಿ ನಲಿವುತಂ"**

ಹೀಗೆ ಅವರು ಮಾರುಡಿಗೆ ಎಂಬ ಊರನ್ನು ಶಿವಪುರವನ್ನಾಗಿ ಮಾಡಿದರಂತೆ. ಇಲ್ಲಿ ಬೆತ್ತಲೆ ಬೊಂಬೆಗಳೆಂದರೆ ಜೈನರ ಜಿನ ಮೂರ್ತಿಗಳು. 'ಪುರದೊಳಗೆ ನಡೆನಡೆದು' ಎನ್ನುವಲ್ಲಿ ಆ ಗುಂಪು ವ್ಯವಸ್ಥಿತವಾಗಿ ಆ ನಾಶ ಕಾರ್ಯವನ್ನು ಮಾಡುತ್ತಿತ್ತು ಎನ್ನಬಹುದು. ಅಲ್ಲಿಯ ಬಸದಿಯಗಳಲ್ಲಿಯ ಸಾದು ಸವಣರನ್ನು ಹೊರಗೆ ನೂಕಿ ಅದನ್ನು ಆಕ್ರಮಿಸುತ್ತಿದರಂತೆ. ಸುಮಾರು ಏಳುನೂರು ಬಸದಿಗಳಲ್ಲಿ 'ಲಿಂಗ ಪ್ರತಿಷ್ಠೆ'ಯನ್ನುಮಾಡಲಾಯಿತಂತೆ. ಆ ಕಾಲಕ್ಕೆ ಶೈವವು ಜೈನರ ಮೇಲೆ ನಡೆಸಿದ

ಮಾರಣಾಂತಿಕ ಹಲ್ಲೆಯನ್ನು ಈ ಉದಾಹರಣೆಗಳು ತೆರೆದಿಡುತ್ತವೆ. ಹೀಗೆ ಇವರು ಗ್ರಾಮಗಳ ಹೆಸರಿನ ಪಟ್ಟಿಯನ್ನೆ ನೀಡುವುದನ್ನು ನೋಡಿದರೆ, ಒಂದು ರಾಜಕೀಯ ಸೈನ್ಯದ ಹಾಗೆ ಇವರು ಅನ್ಯಮತೀಯರ ಊರುಗಳ ಮೇಲೆ ದಾಳಿ ಮಾಡುತ್ತಿದ್ದರು ಎಂದು ಭಾವಿಸಲು ಅಡಿಯಿಲ್ಲ. 'ಜೈನ ಕೆಟ್ಟು ಬಣಜಿಗನಾದ' ಎನ್ನುವಂತಹ ಗಾದೆಗಳು ಹುಟ್ಟಲು ಇಂತಹ ಘಟನೆಗಳೇ ಕಾರಣವಾಗಿರಬೇಕು.

ಈಗ ಈ ಮುಂಚೆ ಹೇಳಿದ ಆ ಮೂವರ ಕುರಿತಾಗಿ ನೋಡೋಣ. ಗೊಗ್ಗಿದೇವನು ಮಾಡಿದ ಧರ್ಮನಿಮಿತ್ತ ಕಾರ್ಯಗಳನ್ನು ಒಂದು ಶಾಸನವು ಹೀಗೆ ಹೇಳುತ್ತದೆ[57].

> **ಜಯಿನಮ್ರಿಗ ಬೇಂಟೆಕಾರಂ**
> **ಜಯಿನಾಗಮ ಧೂಮಕೇತು ಜಯಿನ ಕು(ರಾ) ।**
> **ಜಯಿನ ಫಣಿ ವೈನತೇಯಂ**
> **ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸಂ ॥**
> **ಅಗ್ಗದ ಘಟಾಂತಿಕೆಯಂ ಅದೆ**
> **ನುರ್ಗ್ಗಾಗಿರೆಯೊಡೆದು ಕಳೆದು ಜಿನನಂ ತಾ ಗೆಲೆ**
> **ದುರ್ಗ್ಗತಿಯೊಳಿಕ್ಕಿ ಮೆಟ್ಟದ**
> **ಗೊಗ್ಗರಸಾಗ್ರಣಿ ಕೊಮಾರ ಆಹವಧೀರಂ ॥**

ಜೈನರನ್ನು 'ಮೃಗ' ಎಂದು ಇಲ್ಲಿ ಕರೆಯಲಾಗಿದೆ. ಇಲ್ಲಿ ಮೃಗ ಯಾರೆಂಬ ಉತ್ತರವನ್ನು ಇತಿಹಾಸವೇ ಹೇಳುತ್ತದೆ. ಇಲ್ಲಿ ಘಟಾಂತಿಕೆ ಎನ್ನುವ ಹೆಸರು ಬಂದಿದೆ. ಈಕೆ ಜೈನ ಯಕ್ಷಿ. ಇದು ಲಕ್ಕುಂಡಿಯ ಒಂದು ಬಸದಿ. ಈ ಶಾಸನವು ಹೇಳುತ್ತಿರುವುದು ಆ ಬಸದಿಯ ಮೇಲಾದ ದಾಳಿಯನ್ನು. ಈ ಕಾಲದ ಎಲ್ಲಾ ದಾಖಲೆಗಳು ಅತಿಯಾಗಿ ಜೈನರ ವಿರುದ್ಧವಾಗಿಯೇ. ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ, ಬಲು ವ್ಯವಸ್ಥಿತವಾಗಿಯೇ ಜೈನ ಧರ್ಮವನ್ನು ನಾಶ ಮಾಡುವ ಕಾರ್ಯವು ನಡೆದಿರಬೇಕು. ಆ ಕಾಲದ ಶೈವರ ಅನುಕೂಲಕರ ಪರಿಸ್ಥಿತಿಯು ಸಹ ಗೊಗ್ಗದೇವನಂತವರು ಹುಟ್ಟುವುದಕ್ಕೆ ಕಾರಣವಾಗಿದೆ. ಈ ಧಾರ್ಮಿಕ ಸೈನಿಕರೆಲ್ಲರೂ ಈ ಅನ್ಯ ಸಮಯ ನಾಶವನ್ನು ಒಂದು ವ್ರತದಂತೆ ತೊಟ್ಟಿದ್ದಾರೆ. ತಮ್ಮ ಇಡೀ ಜೀವನವನ್ನೆ ಇದಕ್ಕೆ ಮೀಸಲಿರಿಸಿ ಗುದ್ದಾಡಿದಂತಿದೆ. ಇವರು ಜೈನದ ಮೇಲೆ ಇಷ್ಟೊಂದು ರೋಷದಿಂದ ಕೂಡಿರಲು ಯಾವ ಕಾರಣವನ್ನಾದರೂ ನಾವು ಹುಡುಕಬೇಕು. ಇಲ್ಲವಾದರೆ ಈ ಧಾರ್ಮಿಕ ಹಿಂಸೆಯು ನಮಗೆ ಅರ್ಥವಾಗುವುದೇ ಇಲ್ಲ.

ಆದಯ್ಯ  ಆ ಕಾಲದ ಶೈವ ಧರ್ಮಿಯರಲ್ಲಿ ಪ್ರಮುಖವಾದ ಹೆಸರು. ರಾಘವಾಂಕನ 'ಸೋಮನಾಥ ಚರಿತ್ರೆ' ಕೃತಿಯಲ್ಲಿ ಆದಯ್ಯನ ವೃತ್ತಾಂತವೇ ಇದೆ. ಈತ ಕಟ್ಟಾ ಶೈವಭಕ್ತ. "ಎನ್ನ ಸಮಯಾಭಿಮಾನ ನಿಮಿತ್ತ ಮಾಡಿದಡೆ ದೋಷಮೆನಗಿಲ್ಲ" ಎನ್ನುವ ನಿಲುವು ಈತನದು[58]. ಯಾವ ಧಾರ್ಮಿಕ  ಭಯೋತ್ಪಾದಕ ಸಂಘಟನೆಗಳಿಗೂ ಈ ಮಾತು ಕಮ್ಮಿಯಿಲ್ಲ. ಈ ಕಾರಣಕ್ಕೆ ಎಂ.ಆಶಾದೇವಿ ಅವರು ರಾಘವಾಂಕನ ಈ ಕೃತಿಯನ್ನು ಕುರಿತು ಹೀಗೆ ಹೇಳಿದ್ದಾರೆ[59]. "ರಾಘವಾಂಕ ಉಗ್ರಗಾಮಿ. ಆತನಿಗೆ ಸಾಮರಸ್ಯ ಮುಖ್ಯವಲ್ಲ. ತನ್ನ ಕಾಲದ ವರ್ತಮಾನದೊಂದಿಗೆ ಮುಖಾಮುಖಿಯಾಗುವಾಗ ಗೆಲ್ಲುವ ಹಂಬಲ ಮಾತ್ರ ಇತ್ತು. ಈ ಕೃತಿಯನ್ನು ಓದಿದರೆ ಇದು ಕನ್ನಡದ ಮನಸ್ಸು ಬರೆಯಬಹುದಾದ ಕಾವ್ಯವೇ ಎನ್ನುವಷ್ಟು ಉಗ್ರಗಾಮಿ ನೆಲೆಯಲ್ಲಿದೆ" ಎನ್ನುತ್ತಾರೆ.

ಇನ್ನೂ ಏಕಾಂತ ರಾಮಯ್ಯನೂ ಸಹ ಇಂತದ್ದೇ ಉಗ್ರಭಕ್ತ. ಈತನು ಶಿರಸ್ಸು ಪವಾಡದ ಮೂಲಕ ಜೈನರನ್ನು ಸೋಲಿಸಿದ ಕತೆಯು ಪುರಾಣ ಮತ್ತು ಶಾಸನ ಎರಡಲ್ಲಿಯೂ ಬರುತ್ತದೆ. ಈ ಕತೆಗೆ ಹಿನ್ನೆಲೆಯಾಗಿ ಎರಡು ಮೂಲಗಳೂ ಎರಡು ರೀತಿಯ ಕಾರಣಗಳನ್ನು ಹೇಳುತ್ತವೆ. ಬಸವಪುರಾಣದಲ್ಲಿ ಜೈನನು ಕೆರಹುಗಾಲಿನಿಂದ ಶಿವದೇವಾಲಯವನ್ನು ಪ್ರವೇಶಿಸಿದ್ದರಿಂದ ಅವರ ವಿರುದ್ಧ ಜಗಳವಾಡಿದ ಎನ್ನಲಾಗಿದೆ. ಹರಿಹರನು ತನ್ನ ರಗಳೆಯಲ್ಲಿ ಆ ಜೈನನು ಶಿವಲಿಂಗದ ಕಡೆ ಕಾಲು ಮಾಡಿ ಮಲಗಿದ್ದ ಎಂದು ಹೇಳಿದ್ದಾನೆ. ಒಟ್ಟಿನಲ್ಲಿ ಒಂದು ಕಾರಣ ಬೇಕಷ್ಟೇ. ಒಮ್ಮೆ ಜೈನರು ಬ್ರಹ್ಮೇಶ್ವರ ಲಿಂಗದೆದುರು ಜಿನನೇ ದೊಡ್ಡವನು ಎಂದು ಜಿನಪಾರಮ್ಯವನ್ನು ಘೋಷಣೆ ಮಾಡುತ್ತಾರಂತೆ.ಇದರಿಂದ ಕೆರಳಿದ ರಾಮಯ್ಯನು ಅವರೊಂದಿಗೆ ಪಣ ಕಟ್ಟುತ್ತಾನೆ. ಆ ಪಣದಂತೆ ತನ್ನ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಅದನ್ನು ತನಗೆ ಜೋಡಿಸಿಕೊಂಡು ಪಣದಲ್ಲಿ ಗೆಲ್ಲುತ್ತಾನೆ. ಈ ಮೂಲಕ ಗೆದ್ದು, ಅಲ್ಲಿಲಯ ಜಿನನನ್ನು ಕಿತ್ತು ಶಿವನನ್ನು ಇಡುತ್ತಾನೆ. ಈ ವಿವಾದವು ಬಿಜ್ಜಳನ ಬಳಿ ಹೋಗಲು, ಅಲ್ಲಿಯೂ ಏಕಾಂತ ರಾಮಯ್ಯನು ವಾದದಿಂದ ಗೆಲ್ಲುತ್ತಾನೆ. ಇದು ಮಾತ್ರವೇ  ಅಲ್ಲದೇ ಇಲ್ಲಿಂದ ತೊಡಗಿ ಅಸಂಖ್ಯಾತ ಜೈನರನ್ನು ಕೊಂದು, ಅವರ ದೇವಾಲಯಗಳನ್ನು ಈತ ನಾಶ ಮಾಡುತ್ತಾನೆ. ಇಲ್ಲವೇ ಶಿವದೇವಾಲಯಗಳಾಗಿ ಪರಿವರ್ತಿಸುತ್ತಾನೆ. ಇತನ ಕುರಿತಾಗಿ ಅಬ್ಬಲೂರಿನ ಶಾಸನವು ಮಾಹಿತಿ ನೀಡುತ್ತದೆ[60].

ಈ ರೀತಿಯಾಗಿ ಪ್ರಾಚೀನ ಕರ್ನಾಟಕದ ಧರ್ಮಸಂಘರ್ಷದಲ್ಲಿ ದೇವಾಲಯಗಳು ತಮ್ಮದೇ ಆದ ಪಾತ್ರವನ್ನು ವಹಿಸಿವೆ. ಮತ್ತು ಈ ಮೂಲಕ ದೇವಾಲಯಗಳು ಅಥವಾ ಧಾರ್ಮಿಕ ಕಟ್ಟಡಗಳು ಧರ್ಮದಲ್ಲಿ ಯಾವ ರೀತಿಯ ಮಹತ್ವವನ್ನು ಹೊಂದಿವೆ ಎಂಬುದನ್ನು ಕಾಣಬಹುದು. ಮರವನ್ನೋ,

ಮರದ ಕೆಳಗಿನ ಕಲ್ಲನ್ನೋ ಪೂಜಿಸುತ್ತಿದ್ದ ಸರಳ ಆಚರಣೆಗಳು ಕೇವಲ ದೃಷ್ಟಿಗೆ ಒಳಗಾಗಿ, ದೇವಾಲಯದಂತಹ ಬೃಹತ್ ರಚನೆಗಳು ಮುಂದೆ ಬರಲಿಕ್ಕೆ ಕೇವಲ ಭಕ್ತಿಯೂ ಮಾತ್ರವೇ ಕಾರಣವಾಗಿರಲಾರದು. ಹಾಗೆ ದೇವಾಲಯಕ್ಕೆ ಇಷ್ಟು ಪ್ರಾಮುಖ್ಯತೆಯನ್ನು ತಂದುಕೊಡುವಲ್ಲಿ ಪ್ರಭುತ್ವವು ತನ್ನದೇ ಪ್ರಯತ್ನ ಮಾಡಿರುವುದನ್ನು ಇದುವರೆಗೂ ನೋಡಿದೆವು. ಬಹುಶಃ ರಾಜನು ತಾನು ವಾಸ ಮಾಡಲಿಕ್ಕೆಂದು ಅವುಗಳನ್ನು ಕಟ್ಟಿಕೊಳ್ಳುತ್ತಿದ್ದುದರ ಹಿನ್ನೆಲೆಯೆ ಇದಕ್ಕೆ ಕಾರಣವಿರಬೇಕು. ಅಲ್ಲದೆ ದೇವರು ಎಲ್ಲಾ ಕಡೆ ಇರುವನು ಎಂದು ವಾದಿಸುವ ಒಂದು ಗುಂಪು ಇದ್ದರೆ, ದೇವಾಲಯಗಳಲ್ಲಿ ಮಾತ್ರವೇ ಇರುವುದು ಎಂದು ಪ್ರಬಲವಾದ ಮತ್ತೊಂದು ಗುಂಪು ವ್ಯಾಪಕವಾಗಿ ಪ್ರಚಾರ ಕಾರ್ಯದಲ್ಲಿ ತೊಡಗಿತು. ಮತ್ತು ಅದರಲ್ಲಿ ಯಶಸ್ವಿಯೂ ಆಯಿತು. ಯಾಕೆಂದರೆ 'ಹುಂಡಿ'ಗಳನ್ನು ಬಯಲು ಪ್ರದೇಶದಲ್ಲಿ ಇಡಲಾಗುವುದಿಲ್ಲವಲ್ಲ. ಸಂಪತ್ತಿನ ವಿಷಯವನ್ನು ಇಲ್ಲಿ ಹೇಳುವುದು ಸೂಕ್ತ. ದೇವಾಲಯಗಳಲ್ಲಿ ದೇವರಿಗಿಂತ ಹೆಚ್ಚಾಗಿ ಜಾಗರೂಕವಾಗಿ ಸಂಪತನ್ನೇ ತಾನೇ ನೋಡಿಕೊಂಡಿದ್ದು.

ಸದ್ಯ ಇಲ್ಲಿಯವರೆಗೂ ಶಾಸನಗಳಲ್ಲಿ ಹಾಗು ಸಾಹಿತ್ಯದಲ್ಲಿ ದಾಖಲಾಗಿರುವ ದೇವಾಲಯ ಕುರಿತ ಮಾಹಿತಿಯನ್ನು ಇಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ವಿಮರ್ಶೆಗಿಂತ ಹೆಚ್ಚಾಗಿ, ಆ ದಾಖಲೆಯು ಹೇಗಿತ್ತೋ ಹಾಗೆ ಇಲ್ಲಿ ದಾಖಲುಗೊಳಿಸಿ ಅದರ ಪೂರ್ಣ ಸ್ವರೂಪವನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

**ಅಡಿ ಟಿಪ್ಪಣಿಗಳು**

1. ಬಸವಣ್ಣನ ವಚನಗಳು, ಸಂ 852 ,ಶ್ರೀ ಬಸವನಾಳ
2. ಎ ಕ, 7, ಎಸ್‌ಕೆ 263, ಕ್ರಿಶ 150
3. ಸಿ. ಮೀನಾಕ್ಷಿ, ಸಂ.ಕೆ.ಎಮ್ ಶ್ರೀ ಮಾಲಿ 1982 ಮ–153 (?)
4. ಕೊಪ್ಪಳ ಜಿಲ್ಲೆಯ ಶೈವ ದೇವಾಲಯಗಳು, ಮೂರ್ತಿ ಶಿಲ್ಪಗಳಲ್ಲಿ ಶೈವಧರ್ಮ ಪರಂಪರೆ
5. ಶಾಸನಗಳಲ್ಲಿ ಶಿವಶರಣರು ï ಪು– 58
6. ಬೀದರ್ ಶಾಸನ ಸಂಪುಟ ï ರಂಜೋಳ, ಪು ï 169, 13ನೇ ಶ.
7. ಇ ಸಿ 5, ಪು–311, 1121
8. ಎ.ಕ.6, ಕಡೂರು, 104 ï ಸುಮಾರು 1181.
9. ಕೆ. ಇ. 1. ಸಿರಸಂಗಿ, 25, 1189.
10. ಎ.ಕ, ಸಂ 11, 198, 1145
11. ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು– 8 ï ಮುರಮ್ – 1041 ï
12. ಎಃಃಖಂಖ. ಫಿ. ಆ 205
13. ಎ.ಕ. 10 ಮುಳಬಾಗಿಲು, 65 ï 931.
14. ಎ.ಕ. 11, ಮೊಳಕಾಲ್ಮೂರು 27, 962.
15. ಬೀದರ್ ಶಾಸನ ಸಂಪುಟ,ಪು 18 ï ಬಸವಕಲ್ಯಾಣ ï 1100.
16. ಇ.ಸಿ. 5, ಪುಟ ï 17, ಕಾಲ ï 11–12ನೇ ಶತಮಾನ.
17. ಇ.ಸಿ 5, ಪು ï 18 ï ಕಾಲ –12 ನೇ ಶತಮಾನ.
18. ಇಖ. ಫಿಖಖಖ. ಮ ï 329, 929 ಂಆ.
19. ಎಂ.ಎಂ. ಕಲಬುರ್ಗಿ ï ಮಾರ್ಗ.
20. ಕೊಪ್ಪಳ ಜಿಲ್ಲೆಯ ಶೈವ ದೇವಾಲಯಗಳು ಮತ್ತು ಮೂರ್ತಿ ಶಿಲ್ಪಗಳಲ್ಲಿ ಶೈವಧರ್ಮ ಪರಂಪರೆ
21. ಮಹಾರಾಷ್ಟ್ರದ ಕನ್ನಡಶಾಸನಗಳು ,ಪು–25 – ಕೊಲ್ಲಾಪುರ ï 11–12ನೇ ಶತಮಾನ.
22. ಕೊಲ್ಲಾಪುರ ಜಿಲ್ಲೆಯ ಶಾಸನಗಳು, ಶಾ ಸಂ– 15, ಪು– 89

23. ಪ್ರೌಢದೇವರಾಯನ ಶಾಸನಗಳು, ಉಡುಪಿ – 1436, ಪುï 268.

24. ಅದೇ, ದ.ಕ. 1431, ಪುï 175.

25. ಕೃಷ್ಣದೇವರಾಯನ ಶಾಸನಗಳು, ಹಂಪೆ – ಸಂ 65 ï 1515, ಬಾಲಕೃಷ್ಣ ದೇವಾಲಯ.

26. ಬೀದರ್ , ಬಸವಕಲ್ಯಾಣ, 32, 1326.

27. ಮಧ್ಯಕಾಲೀನ ಕರ್ನಾಟಕ, ಪು 180

28. ದಂಡೀಶಭಕ್ತನ ರಗಳೆ ï ಹರಿಹರನ ರಗಳೆಗಳು

29. ಕ.ಶಾ.ಸಾಂ.ಅ ï ಪುï 86

30. ಪ್ರೌಢದೇವರಾಯನ ಶಾಸನಗಳು, ಮಳೂರು ಪಟ್ಟಣ ï 1432, ಪು ï 195.

31. ಎಂ.ಎಂ. ಕಲಬುರ್ಗಿ ಮಾರ್ಗ ï 3 – ಪು ï 37.

32. ಎಂ.ಎಂ. ಕಲಬುರ್ಗಿ ಮಾರ್ಗ ï 3 ïಪು ï 37.

33. ಕ.ಶಾ.ಸಾಂ.ಅ– ಚಿದಾನಂದಮೂರ್ತಿ

34. ಕ.ಶಾ.ಸಾಂ.ಅ– ಚಿದಾನಂದಮೂರ್ತಿ

35. ದಲಿತರು ಮತ್ತು ಮತಾಂತರ; ಒಂದು ಚಿಂತನೆ, ಡಾ. ಎನ್. ಚಿನ್ನಸ್ವಾಮಿ ಸೋಸಲೆ

36. ಎಂ.ಎಂ. ಕಲಬುರ್ಗಿ ಮಾರ್ಗ ï 3

37. ಎಂ.ಎಂ. ಕಲಬುರ್ಗಿ ಮಾರ್ಗ ï 3

38. ಎಂ.ಎಂ. ಕಲಬುರ್ಗಿ ಮಾರ್ಗ ï 3

39. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ

40. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಇಸಿ 7,ನಾಗಮಂಡಲ – 31.

41. ಅದೇ ,ಜಮಖಂಡಿ ï ಕೆ ಐ ವಿ 98.

42. ಕೃಷ್ಣದೇವರಾಯನ ಶಾಸನಗಳು, ಮೂಡಬಿದಿರೆ ಜೈನಮಠ, ಸಂ ï 16, ಕ್ರಿ. 1511

43. ರಾಜಾವಳೀ ಕಥಾಸಾರ, ನವಮಾಧಿಕಾರ

44. ಅದೇ

45. ಅದೇ

46. ಅಡಿಟಿಪ್ಪಣಿ ಸಿಕ್ಕಿಲ್ಲ

47. ಉಲ್ಲೇಖ ಇಲ್ಲ

48. ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ ï ಪುï 36

49. ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ–ಪು ï 195.

50. ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ ï ಮ ï 39.

51. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ ï ಖಖಖ. ಫಿಗಿ. 695.

52. ಬೀದರ್, ಬೀದರ್, 1671, ಟ ï 136.

53. ಅದೇ– ಪು ï 137, 1694.

54. ಅದೇ ï ಪು ï 193, 1679

55. ಮಾರ್ಗ, ಸಂ–ಮೂರು– ಪು ï 47.

56. ತಾಳಿಕೋಟೆ, ವಿಜಾಪುರ, ಪು ï 531, 1184.

57. ಹರಿಹರ– ನಾರಿತಂದೆಯ ರಗಳೆ

58. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ , ಸೋಮನಾಥ ಚರಿತ್ರೆ, ಸಂ– ಬಸವರಾಧ್ಯ

59. ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ

60. ಎಇ –5 ಪುಟ ï 245 ï 252 ï 1200.

61. ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಡಾ ಪಂಡಿತ ಕೆ ರಾಠೋಡ

62. ಅದೇ

63. ಅದೇ

ಜೀವ ಸೃಷ್ಟಿಯಲ್ಲಿ ಸರಿಸುಮಾರು ಅರ್ಧದಷ್ಟು ಪಾಲು ಹೆಣ್ಣಿನದು.ಸಂಖ್ಯೆಯಲ್ಲಿ ಮಾತ್ರವೇ ಈ ಅರ್ದಪಾಲು ಇರುವುದು.ಉಳಿದವುಗಳಲ್ಲಿ ಅಲ್ಲ. ಉಳಿದವುಗಳು ಎಂದಾಗ ಬಹುಮುಖ್ಯವಾಗಿ 'ಪ್ರಾಮುಖ್ಯತೆ' ಎಂಬುವ ಅಳತೆಮಾನದಲ್ಲಿ ಅಲ್ಲ ಎಂದು.ಪ್ರಕೃತಿಯನ್ನು ಹೆಣ್ಣೆಂದು ಪರಿಭಾವಿಸಿದಾಗ್ಯೂ, ಆ ಪ್ರಕೃತಿಯನ್ನು ಜಯಿಸುವಲ್ಲಿಯೇ ಮನುಷ್ಯನ ಪ್ರಯತ್ನವು, ಹೆಣ್ಣನ್ನು ಜಯಿಸುವ ಪುರುಷನ ರೀತಿಯಲ್ಲಿಯೇ ಮುಂದುವರೆದಿದೆ. ಇದರಲ್ಲಿ ಧರ್ಮದ್ದು ಬಹುಮುಖ್ಯವಾದ ಪಾಲು. ಇಲ್ಲಿಯವರೆಗೂ ಆಗಿಹೋದ, ಈಗ ಇರುವ ಹಲವು ಧರ್ಮಗಳ ಪೈಕಿ ಹೆಚ್ಚಾನೆಚ್ಚು ಧರ್ಮಗಳು ಮಹಿಳೆಯನ್ನು ಪುರುಷನ ಸಮವಾಗಿ ಕಾಣುವಲ್ಲಿ ಸೋತಿವೆ. ಶಾಸ್ತ್ರಗಳಲ್ಲಿ ಕೆಲವೊಮ್ಮೆ ಹೆಣ್ಣಿನ ಸಮಾನತೆಯನ್ನು ಬರೆಯಲಾಗಿದೆಯೆಂದರೂ, ಅದನ್ನು ಕ್ರಿಯೆಗಿಳಿಸುವಲ್ಲಿ ಸೋತಿವೆ. ಬಹುಶಃ ಹೆಣ್ಣಿನ ದೈಹಿಕ ರಚನೆಯು ಇದಕ್ಕೆ ಪ್ರಮುಖ ಕಾರಣ. ಭಾವನಾತ್ಮಕವಾಗಿ ಹೇಳುವುದಾದರೆ ಹೆಣ್ಣಿನ ತಾಳಿಕೊಳ್ಳುವ ಗುಣವೂ ಪ್ರಮುಖ ಕಾರಣವೇ.

ಮನುಷ್ಯನು ಇನ್ನೂ ಅಸಂಘಟಿತ ಜೀವನವನ್ನು ನಡೆಸುತ್ತಿದ್ದ ಸಮಯದಲ್ಲಿ ಗಂಡು ಹೆಣ್ಣಿನ ಸಮಾನತೆ ಇದ್ದಿರಬಹುದು. ಅಂದಿನಿಂದ ಇಂದಿನವರೆಗೂ ಹೆಣ್ಣು ದೈಹಿಕವಾಗಿ ಪುರುಷನಿಗಿಂತ ಎಡವಾಗಿರುವ ಕಾರಣ ಇದನ್ನು ಊಹಿಸಬಹುದಷ್ಟೇ. ಆದರೂ ದೈಹಿಕ ಮಾನದಂಡವನ್ನು ಮಾತ್ರವೇ ಇದಕ್ಕೆ ಹೊಣೆಯಾಗಿಸಲು ಸಾಧ್ಯವಿಲ್ಲ. ಆ ಅಸಂಘಟಿತ ಕಾಲದಿಂದ ಹಿಡಿದು ಇತಿಹಾಸದ ಆರಂಭದ ಕಾಲ ಎಂದು ನಾವು ಕರೆಯುವ ಅವಧಿವರೆಗೂ ಈ ಸಮಾನತೆಯನ್ನು ಅಂದಾಜಿಸಬಹುದು ಅಷ್ಟೇ. ಒಂದು ವೇಳೆ ಸಂಘಟಿತ ಬುಡಕಟ್ಟುಗಳ ಸಮಯದಲ್ಲಿ ಮಹಿಳೆಗೆ ಪ್ರಾತಿನಿಧ್ಯ ಇದ್ದರೂ, ಅದನ್ನು ಪುರುಷನು ಕೊಟ್ಟದ್ದು ಎನ್ನುವ ಸಾಕ್ಷ್ಯಗಳೇ ನಮಗೆ ಹೆಚ್ಚಾಗಿ ದೊರೆಯುತ್ತವೆ. ಕೃಷಿಯಂತಹ ಸೃಜನ ಸಂಶೋಧನೆಗಳು ಹೆಣ್ಣಿಂದ ಆದದ್ದು ಎಂದು ನಾವು ತಿಳಿದರೂ, ಅದರ ಹಿಂದೆ ಹೆಣ್ಣನ್ನು ಮನೆಯ ವಾತಾವರಣಕ್ಕೆ ಸೀಮಿತ ಮಾಡಿದ ಪುರುಷತನದ ಹಿನ್ನಲೆಯಿದೆ. ಹೆಣ್ಣಿನ ಬಗ್ಗೆ ಮತ್ತು ಪ್ರಾಚೀನ ಆದಿ ಮಾನವನ ಬಗ್ಗೆ ನಾವೆಷ್ಟೇ ಅಭಿಮಾನ ಉಳ್ಳವರಾಗಿ ಗಂಡು ಹೆಣ್ಣಿನ ಸಮಾನತೆಯನ್ನು ಬಾವಿಸಿದರೂ ಸಹ, ಅದನ್ನು ಧಾರ್ಮಿಕ ಚಟುವಟಿಕೆಗಳು ಶುರುವಾದಲ್ಲಿಗೆ ಕೊನೆಯಾಗಿಸಬೇಕಾಗುತ್ತದೆ. ಯಾಕೆಂದರೆ 'ಪುರುಷತನ'ವನ್ನು ದಾಟಿ ಮುಂದೆ ಬರಲಿಕ್ಕೆ ಯಾವ ಧರ್ಮಕ್ಕೂ ಸಾಧ್ಯವಾಗಲಿಲ್ಲ. ಕೆಲವಾದರೂ ಅದಕ್ಕೆ ಪ್ರಯತ್ನಿಸಿದರೂ ಸಹ ಸಮಕಾಲೀನ ಸಾಮಾಜಿಕ ಪರಿಸರವಾಗಲಿ, ಆನಂತರದ್ದಾಗಲಿ ಅದಕ್ಕೆ ಅವಕಾಶ ಕೊಡಲಿಲ್ಲ. ಅದಕ್ಕೆ ಇರಬೇಕು ಯಾವ ಧರ್ಮಕ್ಕೂ 'ಹೆಣ್ಣು' ಎನ್ನುವವಳು ಮೂಲವಾಗಲೇ ಇಲ್ಲ. 'ಆಧುನಿಕ'ರು ಎಂದು ಕರೆದುಕೊಳ್ಳುವ ನಮ್ಮಿಂದಲೇ ಸಮಾನತೆಯು ಸಾಧ್ಯವಾಗಿಲ್ಲ ಅಂದಮೇಲೆ, ಅಂದಿನ ಪರಿಸ್ಥಿತಿಯನ್ನು ಕಲ್ಪಿಸಿಕೊಳ್ಳಲಿಕ್ಕೆ ನಮಗೆ ಕಷ್ಟವಾಗಲಿಕ್ಕಿಲ್ಲ.

ಭಾರತದ ಸಮಯಕ್ಕೆ ಬಂದಾಗಲೂ ಈ ಮೇಲಿನ ಪರಿಸರವನ್ನು ಅನ್ವಯಿಸಬಹುದು. ಭಾರತದ ಇತಿಹಾಸದ ಯುಗವನ್ನು ಸಾಮಾನ್ಯವಾಗಿ ಸಿಂಧೂ ಸಂಸ್ಕೃತಿಯಿಂದ ಶುರುಮಾಡಲಾಗುತ್ತದೆ. ಇಲ್ಲಿಯೂ ಸಹ ಲಿಂಗ ಸಾಮರಸ್ಯವು ಅಂದಾಜಿನಿಂದ ಕೂಡಿದೆ. ಈ ಸಿಂಧೂ ಸಂಸ್ಕೃತಿಯಲ್ಲಿ ಧಾರ್ಮಿಕ ಭಾವನೆಯ ಪರಿಪಕ್ವ ಸಂಕೇತಗಳನ್ನು ಕಾಣಬಹುದು. ಶಕ್ತಿ ಪೂಜೆಯನ್ನು ಅಥವಾ ಮಾತೃ ಪೂಜೆಯನ್ನು ಈ ಸಂಸ್ಕೃತಿಯ ಅವಶೇಷಗಳಲ್ಲಿ ಅಭಿವ್ಯಕ್ತಿಸಲಾಗಿದೆ. ಇಲ್ಲಿ ದೊರಕುವ ಗರ್ಭಿಣಿಯರ ವಿಗ್ರಹಗಳು, ಕಿರೀಟದಾರಿ ಹೆಣ್ಣಿನ ಬೊಂಬೆಗಳು ಈ ಮಾತನ್ನು ಪುಷ್ಟೀಕರಿಸುತ್ತವೆ[1]. ಈ ಸಾಕ್ಷಿಗಳು ಮನುಷ್ಯನ ನಿತ್ಯಜೀವನದ ಅಭಿವ್ಯಕ್ತಿಯೇ ಇಲ್ಲವೇ ಮಾತೃ ದೇವತೆಯ ಅಭಿವ್ಯಕ್ತಿಯೇ ಎಂಬುದನ್ನು ಇನ್ನೂ ವಿವೇಚಿಸಬೇಕಿದೆ. ಇದನ್ನು ಪುರುಷ ಮತ್ತು ಪ್ರಕೃತಿ ಕಲ್ಪನೆಯ ಹಿನ್ನೆಲೆಯಲ್ಲಿ ಗ್ರಹಿಸಬೇಕಿದೆ. ಖಚಿತವಾಗಿ ಹೇಳಲಾಗದಿದ್ದರೂ, ಈ ಕಾಲದಲ್ಲಿ ಹೆಣ್ಣಿನ ಜೀವನವು ಗೌರವಯುತವಾಗಿತ್ತು ಎಂದು ಭಾವಿಸಲು ಅಡ್ಡಿಯಿಲ್ಲ. ಒಂದು ವೇಳೆ ಅವು ಮಾತೃ ದೇವತೆ'ಯೇ ಆಗಿದ್ದ ಪಕ್ಷದಲ್ಲಿ ಆಗಲೂ ಸಹ ಅದನ್ನು ಸಮಸ್ತ್ರೀತನದ ಸಮಾಜ ಎಂದು ಹೇಳಲಿಕ್ಕಾಗದು. ಕಾರಣ, ಹೆಣ್ಣುದೇವತೆಯನ್ನು ಮನೆದೇವರಾಗಿ ಉಳ್ಳ ಅಸಂಖ್ಯ ಜನರು ನಮ್ಮಲ್ಲಿದ್ದಾರೆ. ಅವರಲ್ಲಿಯ ಹೆಣ್ಣು ಮತ್ತು ಹೆಣ್ಣುದೇವತೆಯಲ್ಲಿಯ ಮಹತ್ತಿನ ಭಿನ್ನತೆಯನ್ನು ಇಲ್ಲಿ ಸಾಕ್ಷಿಯಾಗಿ ನೀಡಬಹುದು.

ಈ ಸಿಂಧೂ ಯುಗವನ್ನು ದಾಟಿ ಮುಂದೆ ಬಂದಾಗ, ನಮಗೆ ವೇದಗಳ ಯುಗವು ಆರಂಭವಾಗುತ್ತದೆ.ವೇದಗಳ ಕಾಲದಿಂದಲೂ ಸ್ತ್ರೀಯರಿಗೆ ಗೌರವ ಪೂರ್ಣವಾದ ಸ್ಥಾನವು ಸಂದಾಯವಾಗುತ್ತಲೇ ಬಂದಿದೆ. ಕ್ರಿ.ಪೂ 2500ರಿಂದ ಹಿಡಿದು ಕ್ರಿ.ಪೂ 1000 ವರೆಗಿನ ಕಾಲವನ್ನು ವೇದಗಳ ಮತ್ತು ಉತ್ತರಕಾಲಿಕ ಸಂಹಿತೆ ಮತ್ತು ಬ್ರಾಹ್ಮಣಗಳ ಕಾಲ ಎನ್ನುವರು. ಆಗ ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯವಿತ್ತು. ಹೆಣ್ಣುಮಕ್ಕಳನ್ನು ನಿರಾಕರಿಸುವ, ಹುಟ್ಟಿನಲ್ಲೇ ಕೊಲ್ಲುವ ಯಾವುದೇ ಆಧಾರಗಳಿಲ್ಲ. ಹೆಣ್ಣು ಮಕ್ಕಳಿಗೂ ಉಪನಯನ ವಿಧಿಯಿತ್ತು. ಅವರು ವೈದಿಕ ಸಾಹಿತ್ಯವನ್ನು ಅಧ್ಯಯನ ಮಾಡುತ್ತಿದ್ದರು. ಸಾರ್ವಜನಿಕ ಸಭೆಗಳಲ್ಲಿ ಅವರು ಪ್ರಕಾಶಿಸುತ್ತಿದ್ದರು[2]. ಹೀಗೊಂದು ಮಾತನ್ನು ವೇದಗಳ ಕಾಲಕ್ಕೆ ಕುರಿತಂತೆ ಹೇಳಲಾಗುತ್ತದೆ. ಈ ಮಾತುಗಳನ್ನು ಕುರಿತಂತೆ ಈ ಮುಂದಕ್ಕೆ ಹೀಗೆ ವಿವೇಚಿಸಬಹುದು.

ಕೆಲವು ವಿದ್ವಾಂಸರು ಸಿಂಧೂ ಯುಗವನ್ನು ಮತ್ತು ವೇದಯುಗವನ್ನು ಎದುರು–ಬದುರು ಇಟ್ಟು ಅಧ್ಯಸಿಸುವ ಕೆಲಸ ಮಾಡಿಕೊಂಡು ಬಂದಿದ್ದಾರೆ. ಇವುಗಳ ನಡುವಿನ ವೈಚಾರಿಕ ಅಂತರ ಇದಕ್ಕೆ ಕಾರಣವಿರಬೇಕು. ಪ್ರಮುಖವಾಗಿ ಸಿಂಧೂ ಯುಗವನ್ನು ಮಾತೃಪೂಜೆಯ, ಅವೈದಿಕ ಪರಂಪರೆಯ,

ದ್ರಾವಿಡ ನೆಲೆಗಟ್ಟಿನ ಸಂಸ್ಕೃತಿಯೆಂದು ಕರೆಯಲಾಗುತ್ತದೆ. ಇದರಿಂದ ಸಹಜವಾಗಿಯೇ ಪಿತೃಪ್ರಧಾನ ವ್ಯವಸ್ಥೆಯ ವೇದಯುಗವು ಅದಕ್ಕೆ ಎದುರಾಗಿ ನಿಲ್ಲುತ್ತದೆ. ಸುಮ್ಮನೆ ನೋಡುವುದಾದರೆ ಮಾತೃ ಸಂಸ್ಕೃತಿಯ ಅವನತಿಯೊಂದಿಗೆ, ಪಿತೃ ಸಂಸ್ಕೃತಿಯ ಈ ಆರ್ಯರು ಮೇಲೇಳುತ್ತಾರೆ. ಅಂದರೆ ಇಲ್ಲಿ ಹೆಣ್ಣುತನದ ಪರಿಸರವು ಕಮ್ಮಿಯಾಯಿತೆಂದು ಸಹಜವಾಗಿಯೇ ಭಾವಿಸಬಹುದು. ಶೈವ, ವೈಷ್ಣವ ಈ ರೀತಿಯ ಪಂತಗಳ ವ್ಯಾಪ್ತಿಯೂ ಹೆಚ್ಚಾದಷ್ಟು, ಈ ಮಾತೃದೇವತೆಗಳು, ಪುರುಷದೇವರುಗಳ ಅಧೀನಕ್ಕೆ ಸರಿದಿರಬೇಕು.  ವೇದಗಳ ಕಾಲದಲ್ಲಿ ಈ ಪಂತಗಳು ಗುರುತಿಸುವಷ್ಟರ ಮಟ್ಟಕ್ಕೆ ಇದ್ದಿಲ್ಲವಾದರೂ, ಇಂತದ್ದೇ ಲಕ್ಷಣಗಳ ಪಂತಗಳು ಇದ್ದಿರಬಹುದು. ದೇವತೆಗಳ ಮಾತೆ ಅದಿತಿಯ ಒಂದು ರೂಪವಾದ **ಉಷಸ್** ಇಂದ್ರನ ದಾಳಿಕೆ ಸಿಲುಕಿ ಹೆದರಿ ಓಡಿಹೋದಳು ಎಂಬ ವಿವರವು ಋಗ್ವೇದದಲ್ಲಿರುವುದನ್ನು ಕೋಸಾಂಬಿಯವರು ಉಲ್ಲೇಖಿಸುತ್ತಾರೆ[3]. ಇದನ್ನು ಅವರು **"ಪಿತೃ ಪ್ರಧಾನ ವ್ಯವಸ್ಥೆಯೊಂದರ ದಾಳಿಕೋರ ನಾಯಕನಾದ ಇಂದ್ರನು, ಪುರಾತನ ಮಾತೃ ದೇವತೆಯನ್ನು ಹತ್ತಿಕ್ಕಲು ಬಿಯಾಸ್ ನದಿಯ ದಂಡೆಮೇಲೆ ನಡೆಸಿದ ಕಾಳಗ"** ಎನ್ನುತ್ತಾರೆ. ಇಂತಹ ಒಂದಲ್ಲ ಹಲವಾರು ಸಂಘರ್ಷಗಳನ್ನು ನಾವು ಕಾಣಬಹುದು. ಇದು ಕೇವಲ ಮಾತೃದೇವತೆಯೊಂದಿಗಿನ ಯುದ್ಧವಲ್ಲ, ಅಲ್ಲಿಯ ಸ್ಥಳೀಯ ಸಂಸ್ಕೃತಿಯೊಂದಿಗಿನ ಆರ್ಯರ ಯುದ್ಧ.ಬಹು ಮುಖ್ಯವಾಗಿ ಆರ್ಯರು ದ್ರಾವಿಡರೊಡನೆ ಇಂತದ್ದೇ ಯುದ್ಧಗಳನ್ನು ಮಾಡಿದರು ಮತ್ತು ಗೆಲುವುಗಳನ್ನು ಪಡೆದರು. ಇಲ್ಲೊಂದು ಅನುಮಾನವನ್ನು ಹೀಗೆ ಮೂಡಿಸಿಕೊಳ್ಳಬಹುದು – ಸಿಂಧೂ ಯುಗವು ಮಾತೃ ಆರಾಧನಾ ಸಂಸ್ಕೃತಿ ಆಗಿರುವುದರಿಂದ ಅಲ್ಲಿ ಶಿವನನ್ನು ಹುಡುಕುವುದು ಕಷ್ಟವಾದೀತು. ಯಾಕೆಂದರೆ ಅಲ್ಲಿ ದೊರಕಿರುವ ಪುರುಷನ ಸುತ್ತ ಪ್ರಾಣಿಗಳಿರುವ ಚಿತ್ರವನ್ನು 'ಪಶುಪತಿ'ಯದು ಎನ್ನುವ ವಾದವನ್ನು ಹಲವಾರು ಮುಂದಿಟ್ಟಿದ್ದಾರೆ. ಸದ್ಯ 'ಪಶುಪತಿ'ಯನ್ನು ಪಕ್ಕಕ್ಕಿಡೋಣ. ಈ ಮೇಲಿನ ಯುದ್ಧಗಳನ್ನು ಗಮನಿಸಿದಾಗ ಒಂದಂತೂ ಸಿದ್ಧವಾಗುತ್ತದೆ. ಪರಸ್ಪರ ಸಾಮ್ಯದೂರತೆಯನ್ನು ಹೊಂದಿರುವ ಸಂಸ್ಕೃತಿಗಳೆರಡು ಇಲ್ಲಿ ಸೆಣಸಾಡಿವೆ. ಜೊತೆಗೆ ಪಿತೃಪ್ರಧಾನ ವ್ಯವಸ್ಥೆಯೊಂದರ ಅವನತಿಯೊಂದಿಗೆ, ಹೆಣ್ಣಿನ ಭವಿಷ್ಯದ , ಸ್ಥಾನಮಾನಗಳೂ ಪಲ್ಲಟವಾಗುವ ಸೂಚನೆಯನ್ನು ಇಲ್ಲಿ ನೋಡಬಹುದು. ಇಲ್ಲವೇ, ಈ ಕುರಿತಂತೆ ಮತ್ತದೇ ಊಹೆಯ ಆಧಾರದ ಮೇಲೆ ನಿಲ್ಲಬೇಕಾಗುತ್ತದೆ. ಕಾರಣ ಹಿಂದೆಯೇ ಹೇಳಿದಂತೆ ಹೆಣ್ಣುಮಕ್ಕಳನ್ನು ಬೇಡದೆ ಇರುವ ಮಕ್ಕಳನ್ನಾಗಿ ತ್ಯಜಿಸುತ್ತಿದ್ದರು ಎನ್ನುವುದಕ್ಕೆ ಸೂಕ್ತ ಆಧಾರಗಳು ಸಿಗುವುದಿಲ್ಲ.

ಆಧಾರಗಳು ಸಿಗುವುದಿಲ್ಲ ಎಂದ ಮಾತ್ರಕ್ಕೆ ಎಲ್ಲವೂ ಸರಿ ಇತ್ತು ಎಂದಲ್ಲ. ತೀರಾ ನಿಕೃಷ್ಟವಾಗಿತ್ತು ಎಂದೂ ಸಹ ಅಲ್ಲ. ನಮಗೆಲ್ಲಾ ತಿಳಿದಿರುವಂತೆ ಸ್ತ್ರೀಯರಿಗೆ ಮತ್ತು ಶೂದ್ರರಿಗೆ ವೇದಧ್ಯಯನ ಅವಕಾಶವಿಲ್ಲ ಎಂಬುದು. ಆದರೆ ಆಗ ಅವರಿಗೆ ಅವಕಾಶಗಳಿದ್ದವು. ಉಪನಿಷದ್ ಕಾಲಕ್ಕೇನೆ ಈ ಅಧಿಕಾರವು ಅವರಿಗೆ ಇತ್ತು. ಋಗ್ವೇದವು ಎರಡು ಬಗೆಯ ಸ್ತ್ರೀಯರನ್ನು ಗುರುತಿಸುತ್ತದೆ[4].

1. ಬ್ರಹ್ಮವಾದಿನಿ – ಇವರು ವೇದಾಧ್ಯಯನ ಮಾಡುತ್ತಾ ಬಹುಕಾಲ ಮದುವೆಯಾಗದೇ ಉಳಿದವರು.
2. ಸಧ್ಯೋವಧುಗಳು ï ಇವರು ಕೌಮಾರ್ಯದಲ್ಲಿ ಸಾಧ್ಯವಿದ್ದಷ್ಟು ವೇದಗಳ ಅಧ್ಯಯನ ಮಾಡಿ, ಪ್ರಾಪ್ತ ವಯಸ್ಸಿನಲ್ಲಿ ಮದುವೆಯಾದವರು.

ಇನ್ನೂ ಗಮನಿಸತಕ್ಕ ಅಂಶವೆಂದರೆ, ಕೆಲವು ಯಜ್ಞಗಳು ಸ್ತ್ರೀಯರಿಗಾಗಿಯೇ ಮೀಸಲಾಗಿದ್ದವು ಎಂದು ಹೇಳಲಾಗುತ್ತದೆ. ವೇದಗಳ ಕಾಲದಲ್ಲಿ ಅದರಲ್ಲೂ ಋಗ್ವೇದದ ಕಾಲದಲ್ಲಿದ್ದ ಈ ನಿಲುವು ಬ್ರಾಹ್ಮಣಗಳ ಕಾಲಕ್ಕೆ ಸಂಪೂರ್ಣವಾಗಿ ಬದಲಾಯಿತು. ಅದು ಎಷ್ಟರ ಮಟ್ಟಿಗೆಂದರೆ "ಭಾರತದಲ್ಲಿ ಎಂದಿಗೂ ನಾರಿ ಎಲ್ಲಾ ಧರ್ಮಗಳಿಂದ ತುಳಿತಕ್ಕೆ ಒಳಗಾಗಿದ್ದಾಳೆ. ಬ್ರಾಹ್ಮಣಗಳ ಕಾಲದಲ್ಲಿ ಬ್ರಾಹ್ಮಣರಿಂದ ಆದಷ್ಟು ಬೇರೆ ಯಾರಿಂದಲೂ ಆಗಿಲ್ಲ"[5]ಎನ್ನುವಷ್ಟು ಈ ಬದಲಾವಣೆ ಯಾಕಾಯಿತು. ಬಹುಶಃ ಮಾತೃಪ್ರಧಾನ ಸಂಸ್ಕೃತಿಯೊಂದು ಸಂಪೂರ್ಣವಾಗಿ 'ಪುರುಷ ಪರ'ವಾಗಿ ಬದಲಾದುದೇ ಇರಬೇಕು. ಇಲ್ಲವಾದರೆ ಸ್ತ್ರೀ ಇಷ್ಟು ಕೆಳಗಿಳಿಯಲು ಸಾಧ್ಯವೇ ಇಲ್ಲ. ಮನುಸ್ಮೃತಿ ಬರೆದ ಮನುವಂತು ಸ್ತ್ರೀಯನ್ನು ಯಾವತ್ತೂ ಇಲ್ಲದ ಅತ್ಯಂತ ಕೆಳಮಟ್ಟಕ್ಕೆ ತಳ್ಳಿಬಿಟ್ಟನು. ಅವನ ದೃಷ್ಟಿಯಲ್ಲಿ ಸ್ತ್ರೀಯರಿಗೂ – ಸ್ವಾತಂತ್ರ್ಯಕ್ಕೂ ಸಂಬಂಧವೇ ಇಲ್ಲ. ಧರ್ಮ, ಆಧ್ಯಾತ್ಮ, ಸ್ವಾತಂತ್ರ್ಯ ಇವೆಲ್ಲವೂ ಅವಳಿಗೆ ಅವಶ್ಯಕವಿಲ್ಲದಂತವು.

ಪತಿ ಸೇವೆಯಿಂದ ಮಾತ್ರವೇ ಆಕೆ ಎಲ್ಲಾ ಸಾಧನೆಗಳನ್ನು ಫಲಗಳನ್ನು ಪಡೆಯಬೇಕು. ಈತ ಸ್ತ್ರೀಯರಿಗೆ ವೇದಗಳನ್ನು ಪೂರ್ಣವಾಗಿ ನಿರಾಕರಿಸುತ್ತಾನೆ. ವೇದಗಳಲ್ಲಿ ಕೆಲವು ಭಾಗಗಳು ಸ್ತ್ರೀಯರಿಂದಲೇ ರಚಿತವಾದವುಗಳು ಎಂಬುದು ಈತನಿಗೆ ಮರೆತು ಹೋಗಿರಬೇಕು. ಸ್ತ್ರೀಯರು ಯಜ್ಞ ಮಾಡಬಾರದು ಎಂದು ಈತ ಹೇಳುತ್ತಾನೆ. ಒಂದು ವೇಳೆ ಮಾಡಿದರೂ ಅವರು ಮಾಡಿದ ಯಜ್ಞಗಳಿಗೆ ಬ್ರಾಹ್ಮಣರು ಹೋಗಕೂಡದು, ನೋಡಕೂಡದು ಎಂದು ಕಟ್ಟಳೆ ವಿಧಿಸುತ್ತಾನೆ. ಪತಿಯನ್ನು ಬಿಟ್ಟು ಸ್ತ್ರೀಗೆ ಇನ್ನಾವ ಯಜ್ಞವೇ ಇಲ್ಲ ಎಂದು ಅವನು ಘೋಷಿಸುತ್ತಾನೆ. ಸ್ತ್ರೀಯರಿಗೂ – ಪುರಷರಿಗೂ ಬೇರೆ ಬೇರೆ ಧರ್ಮಗಳನ್ನು ಇಷ್ಟು ನಿಷ್ಠುರವಾಗಿ ಪ್ರತಿಪಾದಿಸಿದವನು ಇವನೇ ಇರಬೇಕು ಇದನ್ನು ಗಮನಿಸಿ.

ಸ್ತ್ರೀಯರ ಧರ್ಮ ï "ಪತಿವ್ರತೆಯಾದ ಸ್ತ್ರೀಯು ತನ್ನ ಗಂಡನ ಮರಣಾ ನಂತರ ತಾನು

ಸಾಯುವತನಕ ನಿರಂತರ ಬ್ರಹ್ಮಚಾರಿಣಿಯಾಗಿಯೇ ಉಳಿದು, ಪರಪುರುಷ ಸಂಗ ಮಾಡದೇ, ವ್ರತಾಚಾರಣೆ ಮಾಡುತ್ತಾ ತನ್ನ ಧರ್ಮವನ್ನು ಸಂಪಾದಿಸಬೇಕು"[6]

ಪುರುಷರ ಧರ್ಮ – "ಪತ್ನಿಯು ತನಗಿಂತ ಮೊದಲು ಮೃತಳಾದರೆ ಅವಳ ಅಂತ್ಯಕರ್ಮಗಳಲ್ಲಿ ಅಗ್ನಿಗಳನ್ನು ಸಮರ್ಪಿಸಿದ ನಂತರ, ಯೋಗ್ಯ ಕಾಲದಲ್ಲಿ ಪುನರ್ವಿವಾಹ ಮಾಡಿಕೊಳ್ಳಬೇಕು.ಪುನಃ ಶ್ರೌತ–ಸ್ಮಾರ್ತಾಗ್ನಿಗಳನ್ನು ಸಂಪಾದಿಸಬೇಕು[7].

ಇದೇ ಮನುವಿನ ಸ್ತ್ರೀಯರ ಕುರಿತಾದ ಪ್ರಸಿದ್ಧ ಶ್ಲೋಕವೊಂದು ಹೀಗಿದೆ:

ಮನುವಿಧಿಸಿದ ಈ ಶಾಸ್ತ್ರಕೋಟೆಯು ಈಗಲೂ ತನ್ನ ಪ್ರಭಾವವನೇ ಉಳಿಸಿಕೊಂಡಿದೆ. ಆದರೂ ಇದನ್ನು ಮುರಿಯುವ ಪ್ರಯತ್ನಗಳು ಕಾಲಕಾಲಕ್ಕೆ ಆಗಿರುವುದನ್ನು ಗಮನಿಸಬಹುದು. ಪುರಾತನ ಮಾತೆಯರ ಕತೆಗಳಲ್ಲಿ ಅಮ್ಮವ್ವೆ ಎನ್ನುವಾಕೆಯ ಕತೆ ಬರುತ್ತದೆ[9]. ಈಕೆ ಬ್ರಾಹ್ಮಣ ಕುಲದವಳು. ಚಿಕ್ಕಂದಿನಲ್ಲೇ ವಿಧವೆಯಾದವಳು. ಆದರೂ ಸಹ ಈಕೆ ಸತಿಹೋಗುವುದಿಲ್ಲ. ತವರೂರಿಗೂ ಸಹ ಹೋಗುವುದಿಲ್ಲ. ಒಬ್ಬಂಟಿಯಾಗಿಯೇ ಜೀವನ ನಡೆಸುತ್ತಾಳೆ. ಸ್ತ್ರೀಯು ಸ್ವತಂತ್ರವಾಗಿ ಬದುಕಬಾರದೆಂಬ ಕಟ್ಟಳೆಯನ್ನು ಈಕೆ ಮುರಿದುದನ್ನು ಕಾಣಬಹುದು. ಶಿವನನ್ನು ಮಗನನ್ನಾಗಿ ಪಡೆಯಬೇಕೆಂಬ ಹಂಬಲವುಳ್ಳವಳಾಗಿರುತ್ತಾಳೆ. 'ಬಾರಯ್ಯ ಶಿವನೆ ನಾಂ ಮಕ್ಕಳಿಲ್ಲದ ಬಂಜೆ, ಬಾರಯ್ಯ ಎನ್ನ ಸಾರಲ್ಕೆ' ಎಂದು ಬೇಡುತ್ತಿರುತ್ತಾಳೆ. ಈಕೆ ಇನ್ನೊಂದು ಮಾತನ್ನು ಶಿವನಿಗೆ ಹೇಳುತ್ತಾಳೆ 'ಮನುಜರಿಗಂಜೆ' ಎಂದು.ಆಕೆಗೆ ತಾನು ವಿಧವೆಯೆಂಬ ಅರಿವಿತ್ತು.ಈಗ ಮಗುವನ್ನು ಪಡೆದರೆ ಜನರ ನಿಂದೆಗಳಿಗೆ ಒಳಗಾಗಬೇಕೆಂಬ ಅರಿವೂ ಇತ್ತು. ಅದನ್ನು ಎದುರಿಸಬಲ್ಲ ದಿಟ್ಟತನವೂ ಇತ್ತು. ಕೊನೆಗೆ ಶಿವನು ಕಾಡಿನಲ್ಲಿ ದಾರಿ ತಪ್ಪಿದ ಮಗುವಾಗಿ ಬಂದು ಆಕೆಗೆ ಸಿಗುತ್ತಾನೆ. ಅಮ್ಮವ್ವೆಯ ತಾಯಿಯ ಕುರಿತಂತೆಯೂ ಇಲ್ಲೊಂದು ಮಾತು ಹೇಳಬಹುದು. ಆಕೆ ಶಿವಪೂಜೆಯನ್ನು ಮಾಡಿ ಹೀಗೆ ಬೇಡುತ್ತಿದ್ದಳಂತೆ 'ಒಬ್ಬ ಮಗಳಾಗೆ ಮುದ್ದಾಡುವೆಂ' ಎಂದು. ಆ ಕಾಲಕ್ಕೆ ಇದು ಅಪರೂಪವೇ. ಮೋಕ್ಷಕ್ಕಾಗಿ ಎಲ್ಲರೂ ಗಂಡುಮಗುವನ್ನು ಬಯಸುತ್ತಾರೆ. ಇದು ಶಾಸ್ತ್ರಗಳಿಗೆ ಆ ಕಾಲದ ಜನರು ತೋರಿದ ಪ್ರತಿರೋಧ ಮತ್ತು ಇಂತಹ ಪ್ರತಿರೋಧವು ಆ ಸಮಯದಲ್ಲಿ ಅವಶ್ಯಕವೂ ಇತ್ತು.

ಇದು ಪ್ರಾಚೀನ ಕಾಲದ ಕತೆಯಾದರೆ, 15–16ನೇ ಶತಮಾನದ ಕುಮಾರವ್ಯಾಸನು ಸಹ ತನ್ನ ಭಾರತದಲ್ಲಿ ಹೀಗೆ ಹೇಳಿದ್ದಾನೆ.

**"ಸತಿ ಸಹಿತ ವಿರಚಿಸಿದ ಧರ್ಮ**
**ಸ್ತಿತಿ ಸಮೃದ್ಧಿವಾಗಿ ಸಲುವುದು**
**ಪತಿಗಳಲ್ಲದೆ ತನ್ನ ಸ್ವಾತಂತ್ರ್ಯದಲ್ಲಿ ಮಾಡಿದುದು**
**ಅತಿಶಯವನೆಯ್ದದು ಕಣಾ, ಭೂ**
**ಪತಿಯೇ ಕೇಳಿದ ಪರದಗತಿ ನಿಜ ಸತಿಯ**
**ದೆಸೆಯಿಂದಲ್ಲವೇ ಫಲಿಸುವುದು ಹುಸಿಯೆಂದ"**

ಇಲ್ಲಿಯೂ ಸಹ ಹೆಣ್ಣಿನ ಸ್ವಾತಂತ್ರ್ಯವನ್ನು ತಡೆಹಿಡಿಯಲಾಗಿದೆ. 'ಪತಿಗಳಲ್ಲದೆ ತನ್ನ ಸ್ವಾತಂತ್ರ್ಯದಲ್ಲಿ ಮಾಡಿದುದು ಅತಿಶಯವನೆಯ್ದುದು' ಎನ್ನುವಲ್ಲಿ ಮನುವಿನಷ್ಟು ನಿಷ್ಠುರತೆ ಕಾಣದಿದ್ದರೂ ಹೆಣ್ಣಿನ ಸ್ವಾತಂತ್ರ್ಯದ ಅಲಕ್ಷ್ಯವಂತೂ ಇದೆ. ಬಹುಶಃ ಪ್ರಾಚೀನ ಆರ್ಯರು ಈ ಮಟ್ಟಿನ ಸ್ತ್ರೀ ವಿರೋಧಿಗಳು ಇರಲಿಲ್ಲವೆಂದು ತೋರುತ್ತದೆ. ಅವರ ಪ್ರಜಾಪತಿಯ ಸಂತತಿಯ ಹೆಸರುಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಉದಾ: ಆದಿತಿ–ಆದಿತ್ಯೇಯ(ಆದಿತ್ಯಾ) ಕೃತ್ತಿಕಾ–ಕಾರ್ತಿಕೇಯ, ದನು–ದಾನವ, ವಿನತ–ವೈನತೇಯ ಇವೆ ಮುಂತಾದವು. ಈ ಸಂತತಿಗಳೆಲ್ಲವೂ ಸ್ತ್ರೀ ಹೆಸರನ್ನು ಹೊಂದಿರುವುದನ್ನು ನಾವು ಗಮನಿಸಬಹುದು. ಇದಕ್ಕೆ ವಿದ್ವಾಂಸರು ಊಹೆಯೊಂದನ್ನು ಮಾಡುತ್ತಾರೆ[10]. ಆ ಆರ್ಯ ಬುಡಕಟ್ಟು ಗುಂಪುಗಳ ಕಾಲದಲ್ಲಿ ಮಕ್ಕಳು ಸ್ತ್ರೀಯರ ಅಧೀನದಲ್ಲಿದ್ದರು. ಇದಕ್ಕೆ ಕಾರಣ ಸಮೂಹ ಸಂಬೋಗ ಇರಬೇಕು. ಆಗೆಲ್ಲಾ ಮುಕ್ತ ಲೈಂಗಿಕತೆಯು ಪ್ರಚಲಿತದಲ್ಲಿತ್ತು, ಮತ್ತು ಸ್ವ ಆಸ್ತಿ ಎನ್ನುವ ಕಲ್ಪನೆಯು ಇರಲಿಲ್ಲ. ಆ ನಂತರದಲ್ಲಿ ಕ್ರಮೇಣ ಕುಟುಂಬ ಪರಿಕಲ್ಪನೆಯು ಬಂದು, ಆಸ್ತಿ ಹೊಂದುವುದು ಶುರುವಾಯಿತು. ಆದರೂ ಲೈಂಗಿಕತೆಯಿಂದ ವಿವಾಹ ವ್ಯವಸ್ಥೆಗೆ ಬದಲಾದಾಗ, ಮುಂದುವರಿದ ಭಾಗವಾಗಿ ಬಹು ಪತಿತ್ವ ಮತ್ತು ಬಹು ಪತ್ನಿತ್ವ ರೂಢಿಯಾದವು. ಬಹುಪತಿತ್ವಕ್ಕೆ ಉತ್ತಮ ಉದಾಹರಣೆಯೆಂದರೆ ದ್ರೌಪದಿಯದು. ಆಗ ಅದು ಸಹಜವೇ ಆಗಿತ್ತು. ಆದರೆ ಕುಮಾರ ವ್ಯಾಸನ ಕಾಲದ ಬಹುಹಿಂದೆಯೇ ಇದು ಅಪರಾಧವಾಗಿತ್ತು.

**"ಲೋಕ ಸಂಮತವಲ್ಲ ಶಾಸ್ತ್ರಾ**
**ನೀಕದಭಿಮತವಲ್ಲ ಕಾಪಥ**

**ವೇಕೆ ನಿಮಗಿದು ಪಾಂಡು ಪುತ್ರರು ನೀವು ಧಾರ್ಮಿಕರು**

**ಪ್ರಾಕೃತರೇ ನೀವಕಟ ನಿಮ್ಮ ವಿ**

**ವೇಕವೇನಾಯ್ತಿಲ್ಲಿ ಇಹಪರ**

**ಲೋಕಕಿದು ಸಾಧನವೆಂದನು ದ್ರುಪದ ಭೂಪಾಲ"**

ಅರ್ಜುನನು ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದಾಗ ತಾಯಿಯ ಮಾತಿನಂತೆ ಐವರು ಮದುವೆಯಾಗಲು ಬಯಸುತ್ತಾರೆ. ಆಗ ದ್ರುಪದ ರಾಜನು ಈ ಮೇಲಿನ ಮಾತನ್ನು ಹೇಳುತ್ತಾನೆ. ನೀವೇನೂ ಪ್ರಾಕೃತರು ಅಲ್ಲವಲ್ಲ ಈ ರೀತಿ ಮಾಡಲಿಕ್ಕೆ ಅನ್ನುತ್ತಾನೆ.

ವೇದ ಕಾಲಕ್ಕೆ ಒಪ್ಪಿಗೆಯಿದ್ದದು ಈ ಕಾಲಕ್ಕಾಗಲೇ ನಿಷಿದ್ಧವಾಗಿತ್ತು. ಈ ಬಹುಪತಿ-ಪತ್ನಿತ್ವವು ಶುರುವಾದಾಗ ಗಂಡು-ಹೆಣ್ಣಿಗೆ ಸಮಾನವಾದ ಆಯ್ಕೆಗಳಿದ್ದರಬೇಕು. ಆ ನಂತರದಲ್ಲಿ ಹೆಣ್ಣು ಸಾಮಾಜಿಕವಾಗಿ ಮಹತ್ವಕಳೆದುಕೊಂಡತೆಲ್ಲಾ ಬಹು ಪತ್ನಿತ್ವವು ಮಾತ್ರವೇ ಮುಂದುವರೆದುಕೊಂಡು ಬಂದಿದೆ. ಈ ಬಹು ಪತ್ನಿತ್ವವನ್ನು ವೈದಿಕವು ಮಾನ್ಯ ಮಾಡಿದಷ್ಟೇ ಬೌದ್ಧ ಮತ್ತು ಜೈನರು ಕೂಡ ಮಾನ್ಯ ಮಾಡಿದ್ದರು. ಈ ಕುರಿತ ಪುರುಷರ ವಿಚಾರಕ್ಕೆ ಸಂಬಂಧಿಸಿದಂತೆ ಸಿ.ವೀರಣ್ಣ ಅವರು ಒಂದು ಮಾತು ಹೇಳುತ್ತಾರೆ[11] "ವೈದಿಕ ಧರ್ಮ ಗಂಡಿಗೆ ಯಾವ ಅವಕಾಶಗಳನ್ನು ಕೊಟ್ಟಿತ್ತೋ ಅದನ್ನು ಬೌದ್ಧ ಧರ್ಮ ನಿರಾಕರಿಸಲಿಲ್ಲ" ಎನ್ನುತ್ತಾರೆ. ಬೌದ್ಧರ ಅನೇಕ ಕೃತಿಗಳಲ್ಲಿ ಈ ಬಹುಪತ್ನಿತ್ವದ ಪ್ರಸ್ತಾಪವು ಆಗಾಗ್ಗೆ ಬರುತ್ತದೆ. ಸ್ವತಃ ಬುದ್ಧನೇ ಸ್ತ್ರೀಯರ ಕುರಿತು ವಿಶೇಷ ಕಾಳಜಿ ಹೊಂದಿರಲಿಲ್ಲ ಅನ್ನಿಸುತ್ತದೆ. ಸಂಘಧರ್ಮದ ವಿಷಯಬಂದಾಗ ಬುದ್ಧನು ಮಹಿಳೆಯರನ್ನು ಯಾವತ್ತು ದೂರವೇ ಇಡುತ್ತಾನೆ. ಹೆಣ್ಣು ತನ್ನ(ಬೌದ್ದ) ಧರ್ಮವನ್ನು ಸೇರುವುದರಿಂದ ಧರ್ಮದ ಆಯುಷ್ಯ ಕಡಿಮೆಯಾಗುವುದೆಂದು ಅವನು ಭಾವಿಸಿದ್ದ. ಮಹಿಳೆಯರನ್ನು ಕುರಿತಂತೆ ಎಚ್ಚರಿಕೆಯನ್ನೂ ಅವನು ನೀಡುತ್ತಿದ್ದ. ಹೆಣ್ಣಿನೊಂದಿಗೆ ಹೇಗೆ ನಡೆದುಕೊಳ್ಳಬೇಕು ಎಂದು ಆನಂದ ಕೇಳಿದ ಪ್ರಶ್ನೆಗೆ "ಸ್ತ್ರೀಯರನ್ನು ನೋಡಲೇಬಾರದು, ನೋಡಲೇಬೇಕಾಗಿ ಬಂದರೆ ಅವರೊಂದಿಗೆ ಮಾತಾಡಬಾರದು, ಅದು ಅನಿವಾರ್ಯವಾದರೆ ತುಂಬಾ ಎಚ್ಚರದಿಂದಿರಬೇಕು" ಎಂದು ಹೇಳುತ್ತಾನೆ[11].

ಮಹಿಳೆಯರನ್ನು ಕುರಿತಂತೆ ಮಹಾವೀರನದು ಹೆಚ್ಚು ಕಡಿಮೆ ಇದೇ ಅಭಿಪ್ರಾಯವಾಗಿತ್ತು. ಮುನಿಯಾಗಬೇಕಾದವನು ದೂರವಿಡಬೇಕಾದ 22 ಪರೀಷಹಗಳಲ್ಲಿ ಸ್ತ್ರೀಯರನ್ನು ಸೇರಿಸುತ್ತಾನೆ. 'ಹೆಂಗಸರು ಪಿಶಾಚಿಗಳಿದ್ದಂತೆ, ನಿರ್ಗ್ರಂಥನಾದವನು ಅವರ ಸಹವಾಸವನ್ನು ಸದಾ ದೂರವಿಡಬೇಕು' ಎನ್ನುತ್ತಾನೆ[11]. ಆದರೂ ಪುರುಷರಲ್ಲಿ ನಿಗ್ರಂಥರೂ, ಸವಣರೂ ಇರುವಂತೆ, ಸ್ತ್ರೀಯರಲ್ಲಿ ಕಂತಿಯರೂ, ಅಜ್ಜಿಯರು ಇರುತ್ತಿದ್ದರು. ಬುದ್ಧನಿಗಿಂತ ಬಹಳ ಹಿಂದೆಯೇ ಜೈನವು ಮಹಿಳೆಯರಿಗೆ ಸನ್ಯಾಸವನ್ನು

ಕೊಟ್ಟಿತ್ತು. ಆದಿ ವೃಷಭನ ಹತ್ತಿರ ಬ್ರಾಹ್ಮಿ ಮತ್ತು ಸುಂದರಿಯರ ನೇತೃತ್ವದಲ್ಲಿ ಮೂರು ಲಕ್ಷ ಸನ್ಯಾಸಿನಿಯರು ಇದ್ದರಂತೆ. ಆದರೆ ಇವರಿಗೆ ನಗ್ನತೆಯನ್ನು ವಿಧಿಸಿರಲಿಲ್ಲ. ಬಿಳಿಯ ಬಟ್ಟೆಯನ್ನು ಇವರು ತೊಡಬಹುದಿತ್ತು. ಆದರೂ ಇವರು ಈ ಜನ್ಮದಲ್ಲಿ ತಪಸ್ಸಿನಿಂದ ಕರ್ಮಕ್ಷಯ ಮಾಡಿಕೊಂಡು ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಿ ಮೋಕ್ಷ ಸಂಪಾದಿಸಬಹುದೆಂದು ಆಗ ತಿಳಿಸಲಾಗಿತ್ತು[12]. ಆದರೆ ಆ ನಂತರದಲ್ಲಿ ಅದು ತನ್ನ ತತ್ವದಲ್ಲಿ ಬದಲಾವಣೆ ಮಾಡಿಕೊಂಡಿತು. ಯಾಪನೀಯರು 'ಸ್ತ್ರೀಣಾಂ ತದ್ಭವೇ ಮೋಕ್ಷ' ಎಂದು ಘೋಷಿಸಿದರು. ಈ ಮೂಲಕ ಈ ಜನ್ಮದಲ್ಲಿಯೇ ಸ್ತ್ರೀಯರು ಮೋಕ್ಷ ಹೊಂದಬಹುದು ಎಂದು ಸಾರಲಾಯಿತು.

ಮಹಾವೀರನ ಕಾಲದಲ್ಲೂ ಸ್ತ್ರೀಯರ ಪರಿಸ್ಥಿತಿ ಹೆಚ್ಚು-ಕಡಿಮೆ ಅದೇ ರೀತಿಯಾಗಿ ಇತ್ತು. ಈತನನ್ನು 46 ಸಾವಿರ ಸಾಧ್ವಿಯರು, 3 ಲಕ್ಷ 18 ಸಾವಿರ ಶ್ರಾವಕಿಯರು ಅನುಸರಿಸುತ್ತಿದ್ದರಂತೆ. ಈ ಮಹಿಳೆಯರಿಗೆ ಕೆಲವು ಕಟ್ಟಳೆಗಳಿದ್ದವು. ಪುರಷ ಶ್ರಾವರಕ ಮುಂದೆ ಇವರು ತಲೆತಗ್ಗಿಸಿ ನಿಲ್ಲಬೇಕಿತ್ತು. ಅಲ್ಲದೆ ಅವರು ಪುರಷನಿಗಿಂತ ಕನಿಷ್ಟವಾದ್ದರಿಂದ, ಒಟ್ಟು ಸಾಧನೆಯ 14 ಹಂತಗಳಲ್ಲಿ ಮಹಿಳೆಯರು 5ನೇಯ ಇಲ್ಲವೇ 7ನೇಯ ಹಂತಕ್ಕೆ ನಿಂತು ಬಿಡಬೇಕಿತ್ತು. ಅದಕ್ಕಿಂತಲೂ ಹೆಚ್ಚಿನ ಸಾಧನೆಯ ಹಂತಗಳಲ್ಲಿ ಇವರು ಮುಂದುವರೆಯುವಂತಿರಲಿಲ್ಲ[13]. ಇದರಲ್ಲಿ ಬೇರೆಯದೇನೋ ವ್ಯತ್ಯಾಸವಿರುವಂತೆ ತೋರುತ್ತದೆ. ಕಾರಣ, 18ನೇಯ ತೀರ್ಥಂಕರನಾದ ಮಲ್ಲಿನಾಥನನ್ನು ಸ್ತ್ರೀಯೆಂದು ಹೇಳುವವರಿದ್ದಾರೆ. ಆತ ಮಲ್ಲಿನಾಥನಲ್ಲ ಬದಲಾಗಿ ಮಲ್ಲಿ ಎಂಬುದಾಗಿ ಶ್ವೇತಾಂಬರರು (?)ಇಂದಿಗೂ ವಾದಿಸಿಕೊಂಡು ಬಂದಿದ್ದಾರೆ. ಆದರೆ ಈ ವಾದವನ್ನು ದಿಗಂಬರರು (?)ಒಪ್ಪುವುದಿಲ್ಲ. ಅವರ ಪ್ರಕಾರ ಅದು ಮಲ್ಲಿನಾಥನೇ. ಒಂದು ವೇಳೆ ಅದು ಮಲ್ಲಿಯೇ ಆಗಿದ್ದ ಪಕ್ಷದಲ್ಲಿ ಸ್ತ್ರೀಯರಿಗೂ ಸಾಧನೆಯ ಹದಿನಾಲ್ಕು ಹಂತಗಳನ್ನು ಮುಟ್ಟುವ ಅವಕಾಶವಿತ್ತು ಎಂದು ಹೇಳಬೇಕಾಗುತ್ತದೆ.

ಪ್ರಾಚೀನ ಕರ್ನಾಟಕದಲ್ಲಿ ಸಾಧನೆಯ ಹಂತಗಳನ್ನು ಮುಟ್ಟಿದ್ದವರು ಹಲವು ಜನರಿದ್ದರು, ಶಾಸನಗಳಲ್ಲಿ ಅವರ ಬಗ್ಗೆ ಹೇರಳ ಮಾಹಿತಿಯು ದೊರೆಯುತ್ತದೆ. /ಕಂತಿ/ಗುರು/ಅಜ್ಜಿಯರಾಗಿದ್ದ ಹಲವು ದಾಖಲೆಗಳಿವೆ. ಪೊಲಬ್ಬೆ ಕಂತಿಯರ ಗುಡ್ಡಿ ಸಾಮಿಬ್ಬೆ[14]., ಶ್ರೀ ಮತಿಗಂತೆಯರ ಶಿಷ್ಯೆ ಮೊಕಬ್ಬೆ ಕಂತಿ[15]. ಅರಸವ್ವೆ ಗಂತಿಯರ ಶಿಷ್ಯೆನಿಯರ ಮಾಕವ್ವಗಂತಿ[16], ರಾತ್ರಿಮತಿ ಗಂತಿಯರ ಗುಡ್ಡ ಬ್ರಹ್ಮಗಾವುಂಡ[17].ಮೂಕಬ್ಬೆಗಂತಿಯ ಮಡಿಬದ ಬೀಜಗವುಡ[18], ಕನಕಶ್ರೀ ಕಂತಿಯ 28 ತಂಡದ ಶಿಷ್ಯರು[19].ಮುಂತಾದವು ಇದರಲ್ಲಿ ಮಹಿಳಾ ಕಂತಿಯರು ಪುರುಷರನ್ನು ಶಿಷ್ಯರಾಗಿ ಹೊಂದಿರುವುದನ್ನೂ ಸಹ ಕಾಣಬಹುದು.

ಈ ಅಜ್ಜಿ ಕಂತಿಯರಿಗೆ ಪ್ರತ್ಯೇಕ ಮಠಗಳೂ ಸಹ ಇರುತ್ತಿದ್ದವು. ಇವರು ಸಾಧನೆಯ ಹಾದಿಯಲ್ಲಿ ಸಮಾಧಿ ಮರಣವನ್ನು ಹೊಂದುತ್ತಿದ್ದರು. ಹಾಗೆ ಸಮಾಧಿ ಮರಣ ಹೊಂದಿದ ಹಲವರಿಗೆ ನಿಶಿದಿಗಲ್ಲನ್ನು ಹಾಕಿಸಿದ್ದನ್ನು ನಾವು ನೋಡಬಹುದು. ಪಿಟ್ಟಬ್ಬೆ ಎನ್ನುವವಳ ಸಮಾಧಿ ಮರಣದ ಬಗ್ಗೆ ಒಂದು ಶಾಸನವು ಮಾತನಾಡುತ್ತದೆ[20]. ಅದರಲ್ಲಿ **'ತನಯವಿನಯ ಸಂಪನ್ನೆಯರಪ್ಪ ದುರ್ಗ್ಗನರಸಿ ಪಿಟ್ಟಬ್ಬೆಯ ನಿಸಿಧಿಗೆ ಮಗಳಂ'** ಎಂದು ಧಾಖಲಾಗಿದೆ. ಇನ್ನೊಂದು ಶಾಸನದಲ್ಲಿ 'ಸೈದ್ಧಾಂತಿದೇವರ ಪ್ರಿಯಗುಡ್ಡಿ ಕೇಶವದೇವಿಯರು, ಆ ಕೇಶವ ದೇವಿಯರ ಅಕ್ಕ ಮಾರದೇವಿಯರು ಸ್ವರ್ಗ್ಗಂಗತರಾದರು, ಅವರ ನಿಶಿಧಿಯಂ ಮಾಡಿಸಿ .. . . .ಆ ನಿಶೀದಿಯ ಅರ್ಚನೆಗೆ ಬಿಟ್ಟಂತಹ ಕ್ಷೇತ್ರಬಸದಿಗೆ' ಎಂದು ಹೇಳಲಾಗಿದೆ[21]. ಇಲ್ಲಿ ಕೇಶವದೇವಿ ಮತ್ತು ಮಾರದೇವಿ ಎಂಬ ಇಬ್ಬರು ಸಹೋದರಿಯರು ಮರಣ ಹೊಂದಿರುವುದನ್ನು ಗಮನಿಸಬಹುದು. ಇಬ್ಬರಿಗೂ ಸೈದ್ಧಾಂತಿ ದೇವರೇ ಗುರುಗಳಾಗಿರುವಂತಿದೆ. ಇಲ್ಲಿ 'ಸ್ವರ್ಗ್ಗಂಗತರಾದರು' ಎಂಬ ಪದವು, ಸ್ತ್ರೀಯರು ಆ ಜನ್ಮದಲ್ಲಿಯೇ ಮೋಕ್ಷ ಹೊಂದಬಹುದು ಎಂಬುದರ ಸೂಚನೆಯಂತಿದೆ. ಇಲ್ಲಿ 'ಯಾಪನೀಯರ' ಪ್ರಭಾವವನ್ನು ಕಾಣಬಹುದು. ಕೊನೆಯ ಸಾಲಾದ 'ಅರ್ಚ್ಚನೆಗೆ ಬಿಟ್ಟಂತಹ ಕ್ಷೇತ್ರ ಬಸದಿಗೆ ಎಂಬುದು ಸಂಪೂರ್ಣವಾಗಿ ಅರ್ಥನೀಡುತ್ತಿಲ್ಲ. ಈಗಾಗಲೇ ಇರುವ ಬಸದಿಯನ್ನು ಅರ್ಚ್ಚನೆಗೆ ನೀಡಲಾಯಿತೋ ಅಥವಾ ಹೊಸ ಬಸದಿಯೊಂದನ್ನು ಬಿಡಲಾಯಿತೋ ಸ್ಪಷ್ಟವಾಗುವುದಿಲ್ಲ. ಆದರೂ ಮಹಿಳೆಯರಿಗೂ ಮಠಗಳಿದ್ದಂತೆ, ಬಸದಿಗಳೂ ಇರುತ್ತಿದ್ದವು ಎಂದಾಯಿತು. ಇದೇ ದಿವಾಕರ ನಂದಿ ಸಿದ್ಧಾಂತಿ ದೇವರ ಇನ್ನೊಬ್ಬ ಶಿಷ್ಯಳ ಬಗ್ಗೆ, ಇನ್ನೊಂದು ಶಾಸನವು ಮಾಹಿತಿಯನ್ನು ನೀಡುತ್ತದೆ[22]. ಅದರಲ್ಲಿ 'ದಿವಾಕರನಂದಿ ಸಿದ್ಧಾಂತಿ ದೇವರ ಶಿಷ್ಯಳಾದ ಬಸವವ್ವೆ ಕಂತಿ ನಿಷಧಿಕಲ್ಲು ನಿಲ್ಲಿಸಲು । ದಾನವನ್ನು ಮಾಡುತ್ತಾಳೆ !ಎಂದಿದೆ. ಈ ಎರಡೂ ಶಾಸನಗಳ ಊರು ಬೇರೆ ಬೇರೆಯಾಗಿದ್ದು, ಬಹುಶಃ ಬೇರೆ ಬೇರೆ ಕಡೆಯಿಂದ ಆ ಮಹಿಳೆಯರು ಗುರುವಿನ ಕಡೆ ಬರುತ್ತಿರಬಹುದು. ಇಲ್ಲವೇ ಗುರುವಿನಿಂದ ಧೀಕ್ಷೆಯನ್ನು ಪಡೆದ ತರವಾಯು ತಮ್ಮ ಸ್ವ-ಸ್ಥಾನಗಳಿಗೆ ಹಿಂತಿರುಗುತ್ತಿರಬಹುದು.

ಈ ಕಂತಿಯರಿಗೆ, ಅವರ ಮಠ । ಬಸಗಿಳಿಗೆ ದಾನಗಳನ್ನು, ದತ್ತಿಗಳನ್ನು ನೀಡಿದುದನ್ನು ಹೇಳುವ ಅನೇಕ ದಾಖಲೆಗಳು ಸಿಗುತ್ತವೆ. ಕಮಳಸಿರಿ ಕಂತಿಯರಿಗೆ 40 ಮತ್ತರು ಭೂಮಿಯನ್ನು ಕಾಲುತೊಳೆದು ಬಿಟ್ಟಂತೆ' ಬೀದರ್‌ನ ಶಾಸನವೊಂದು ಹೇಳುತ್ತದೆ[23].

ಋಗ್ವೇದದ ಕಾಲಘಟ್ಟದಿಂದ ಶುರುವಾಗಿ ನಂತರದಲ್ಲಿ ಸಾಮಾಜಿಕವಾಗಿ ಮಹಿಳೆಯ ಸ್ಥಾನ ವಸ್ತುವಾಗಿ ಬದಲಾಗಿರಬೇಕು. ಕಾರಣ, ಆ ಕಾಲದಿಂದ ಹಿಡಿದು ಮುಂದೆ ಬರುವ ಬಹುತೇಕ ಮಹಿಳೆಯರ ಪ್ರಾತಿನಿಧ್ಯತೆಗಳೆಲ್ಲವೂ ಪುರುಷನ ಅಸ್ತಿಯೆಂಬಂತೆ ಸಾಗಿಬಂದಿವೆ. ಬಹುಶಃ ಬಹುಪತ್ನಿತ್ವ

ಇದರ ಮೊದಲ ಹಂತ. ಆರಂಭದಲ್ಲಿ ಮಹಿಳೆಯರಿಗಿದ್ದ ಅದರಲ್ಲೂ 'ಕನ್ಯೆ'ಯರಿಗಿದ್ದ ಸ್ವಾತಂತ್ರ್ಯವು ಕ್ರಮೇಣ ಕಡಿಮೆಯಾಗತೊಡಗಿತು. ಇಲ್ಲಿ 'ಕನ್ಯೆ' ಎಂಬುದನ್ನು ತುಸು ವಿವರಿಸಬೇಕಾಗುತ್ತದೆ. ಆಗಿನ ಕಾಲದಲ್ಲಿ ಕನ್ಯೆ ಎಂದರೆ ಕಾಮಿಸಿದ್ದನು ಪಡೆಯುವಳು ಎಂದರ್ಥವಿತ್ತು, ಅವರನ್ನೇ ಪಡೆಯಬಹುದಿತ್ತು.ಕಾಲನಂತರದಲ್ಲಿ ಅದು ಬದಲಾಯಿತು.ಸ್ತ್ರೀಯು ಪುರುಷನ ಅಡಿಯಾಳಾದ ನಂತರ, ಆಕೆಯನ್ನು ಪಡೆಯುವ ವಿವಿಧ ಮಾರ್ಗಗಳು ಹುಟ್ಟಿದವು. ಆಗಿನ ವಿವಾಹ ಧರ್ಮವೆಂದರೆ ಮಹಿಳೆಗೆ ಮದುವೆಗೂ ಮುನ್ನ ದೈಹಿಕ ಸಂಪರ್ಕವಿದ್ದರೂ ಸಹ ಆ ನಂತರ ಬೇರೆ ಮದುವೆಯಾಗಬಹುದಿತ್ತು. ಮತ್ತಿದು ಧರ್ಮದ ಪ್ರಕಾರವೇ ಇತ್ತು. ಈ ಕನ್ಯಾ ಕುರಿತಂತೆ ಮಹಾಭಾರತದ ವನಪರ್ವದಲ್ಲಿ ಒಂದು ಘಟನೆ ಬರುತ್ತದೆ. ಸೂರ್ಯನು ಕುಂತಿಯನ್ನು ಕೂಡುವಾಸೆಯನ್ನು ಹೊಂದಿರುತ್ತಾನೆ. ಇನ್ನೂ ಬಾಲಕಿಯಾಗಿದ್ದ ಕುಂತಿಗೆ ಇದು ಭಯವನ್ನು ಮೂಡಿಸಿರುತ್ತದೆ. ಆಗ ಸೂರ್ಯನು ಹೇಳುತ್ತಾನೆ 'ಎಲೈ ಕುಂತಿಯೇ, ಕನ್ಯಾ ಶಬ್ದದ ಉತ್ಪತ್ತಿ 'ಕಮ್' ಧಾತುವಿನಿಂದ ಆಗಿದೆ. ಅದರ ಅರ್ಥವೇನೆಂದರೆ ಅವಳು ತನಗೆ ಬೇಕಾದ ಪುರುಷನನ್ನು ಇಚ್ಛಿಸುವಂತವಳಾಗಿರುತ್ತಾಳೆ. ಕನ್ಯೆ ಸ್ವತಂತ್ರಳು, ಸ್ತ್ರೀ ಪುರುಷರ ಮಧ್ಯೆ ಯಾವುದೇ ಪ್ರಕಾರದ ಅಡ್ಡತೆರೆ ಇಲ್ಲದೆ ಇರುವುದೇ ಲೋಕದ ಸ್ವಾಭಾವಿಕ ಸ್ಥಿತಿ ಆಗಿದ್ದು, ವಿವಾಹಾದಿ ಸಂಸ್ಕಾರಗಳೆಲ್ಲವೂ ಕೃತ್ರಿಮವಾಗಿವೆ'ಎಂದು ಹೇಳುತ್ತಾನೆ[24]. ಇಲ್ಲಿ ಸೂರ್ಯನ ಮಾತನ್ನು ಗಮನಿಸುವುದು ಅಗತ್ಯ. ಅವನು ವಿವಾಹ ಮುಂತಾದ ಸಂಸ್ಕಾರಾದಿ ಕಾರ್ಯಗಳೆಲ್ಲವೂ ಕೃತ್ರಿಮ ಎಂದು ಕರೆಯುತ್ತಾನೆ. ಈ ಕಾಲಘಟ್ಟವು ಮಾನವನು ಬುಡಕಟ್ಟು ಜೀವನದಿಂದ ನಗರ ಜೀವನ ಎನ್ನುವಂತದ್ದರ ಕಡೆ ಹೊರಳುವ ಕಾಲವಿರಬೇಕು. ಬಹುಶಃ ಆಗತಾನೇ ಈ ವಿವಾಹಾದಿ ಆಚರಣೆಗಳು ಜಾರಿಗೆ ಬಂದಿರಬೇಕು. ಈ ವಿವಾಹ ನೀತಿ ಬರುವುದಕ್ಕೂ ಮುನ್ನ ಮತ್ತು ಬಂದಮೇಲೂ ವಿವಾಹಕ್ಕೆ ಹೊರತಾದ ದೈಹಿಕ ಸಂಬಂಧಗಳನ್ನು ನಾವು ಕಾಣುತ್ತೇವೆ.

ಅಕ್ಕ, ತಂಗಿ, ತಾಯಿ, ಮಗಳು ಎಂಬ ಈ ಯಾವುವು ಇಲ್ಲದೇ ಅಥವಾ ನೋಡದೆ ದೈಹಿಕ ಸಂಬಂಧವನ್ನು ಮಾಡಲಾಗಿದೆ. ಇದಕ್ಕೆ ಸಾಕ್ಷಿಯಾಗಿಹಲವಾರು ಘಟನೆಗಳು ಮಹಾಭಾರತವೊಂದರಲ್ಲಿಯೇ ಅತಿಯಾಗಿ ಸಿಗುತ್ತವೆ. ಅಣ್ಣ–ತಂಗಿಯ ಸಂಪರ್ಕಕ್ಕೆ ಪ್ರಸಿದ್ಧಿವಾದ ಯಮೆ–ಯಮಿಯ ಪ್ರಸಂಗವೇ ಇದೆ. ಈ ಕತೆಯಲ್ಲಿ ತಂಗಿಯಾದ ಯಮಿಯು ಅಣ್ಣನಾದ ಯಮೆಗೆ ತನ್ನನ್ನು ಕೂಡುವಂತೆ ಕೇಳಿಕೊಳ್ಳುತ್ತಾಳೆ. ಯಮೆಯು ಇದನ್ನು ವಿರೋಧಿಸುತ್ತಾನೆ. ಈ ಕುರಿತಂತೆ ಇಬ್ಬರ ಮದ್ಯೆ ಒಂದು ವಿವಾದವೇ ನಡೆಯುತ್ತದೆ. ತಂದೆಯು ಮಗಳನ್ನು ಕೂಡುವಂತವೂ ಇವೆ. ಇದಕ್ಕೆ ಬ್ರಹ್ಮ–ಸರಸ್ವತಿಯರ ಕತೆಯೇ ಉದಾಹರಣೆ. ದೇವಚಂದ್ರನೂ ಇಂತದ್ದೊಂದು ಕತೆಯನ್ನು ಹೇಳುತ್ತಾನೆ[25]. ಅವನು ಹೇಳುವಂತೆ ಒಬ್ಬರಾಜನಿದ್ದ. ಆತನು 'ಒಂದು ದಿವಸಂ ತನ್ನ ಮಗಳ ಸ್ತನಭಾವಂಗಳಂ ನೋಡಿ ಮೋಹವಶಗತನಾಗಿ ಯಾಸ್ತಾನದೊಳೆದುಂ ಬುದ್ಧಿವಂತರಂ ಬರಿಸಿ ತಾನೂ

ಬಿತ್ತಿ ಬೆಳೆದ ಬೆಳೆಯಂ ತಾನುಣಬಹುದೇ ಎನಲ್' ಅಲ್ಲಿದ್ದವರೆಲ್ಲ ಹ್ಞೂ ಎನ್ನುತಾರೆ. ಈ ಮೂಲಕ ಆತ ಮಗಳನ್ನು ಕೂಡುತ್ತಾನೆ. ವಡ್ಡರಾಧನೆಯಲ್ಲಿ ಬರುವ ಅಗ್ನಿರಾಜನ ಕತೆಯೂ ಇಂತಹುದೇ. ಆತನು ತನ್ನ ಮಗಳನ್ನೇ ಮೋಹಿಸಿ ಮದುವೆಯಾಗಿ ಕಾಮಬೋಗದ ಜೀವನವನ್ನು ನಡೆಸುತ್ತಾನೆ. ಇದರಿಂದ ನೋಂದ ಆತನ ಹೆಂಡತಿಯು ಸಂಸಾರ ತ್ಯಜಿಸಿ ಸಂನ್ಯಾಸಿಯಾಗುತ್ತಾಳೆ. ಈ ಮೇಲೆ ಹೇಳಿದ ಮೂರು ಕತೆಯಲ್ಲಿಯೂ ಆ 'ಮಗಳ' ಒಪ್ಪಿಗೆಯೂ ಎಲ್ಲೂ ಪ್ರಸ್ತಾಪವಾಗಿಲ್ಲ. ಬಹುಶಃ ಆಕೆಯ ಒಪ್ಪಿಗೆ ಬೇಕಿದ್ದಿಲ್ಲವೆನೋ.

ಉತ್ತರ ವೇದಗಳ ಕಾಲಕ್ಕೆ ಸ್ತ್ರೀಯರ ಈ ಸ್ಥಿತಿಯು ಕೆಳ ಮಟ್ಟವನ್ನು ಮುಟ್ಟಿತ್ತು.ಅಲ್ಲೊಂದು ಶ್ಲೋಕ ಬರುತ್ತದೆ[26].

**"ಸೋಮಃ ಪ್ರಥಮೋ ವಿವೇದೇ ಗಂಧರ್ವೋ ವಿವದ ಉತ್ತರಃ**

**ತೃತಿಯೋ ಅಗ್ನಿಷ್ಟೇ ಪತಿ ಸ್ತುರಿಯಸ್ಸೇ ಮನುಷ್ಯಜಾಃ ॥**

'ಸೋಮದೇವತೆ ಮೊದಲು ಕನ್ಯೆಯನ್ನು ಪಡೆದನು. ಅನಂತರ ಗಂಧರ್ವನು ಪಡೆದನು. ಅನಂತರ ಅಗ್ನಿಯು ಮೂರನೇ ಪತಿ. ಈಕೆಯ ಪತಿಯಾದ ಈ ಮನುಷ್ಯನು ನಾಲ್ಕನೇಯವ' ಎಂಬುದು ಇದರ ಅರ್ಥ. ಈ ಸೋಮ, ಗಂಧರ್ವ, ಅಗ್ನಿಯರು ಆ ಕಾಲದ ಮೇಲ್ವರ್ಗದವರಿರಬೇಕು. ಈ ಕಾರಣಕ್ಕೆ ಹೆಣ್ಣನ್ನು ಮೊದಲು ಅವರು ಬೋಗಿಸುತ್ತಿದ್ದರು. ಆ ನಂತರದಲ್ಲಿ ಆಕೆಯನ್ನು ಮದುವೆಯಾಗ ಬಯಸುವವನು ಈ ಮೂವರಿಂದಲೂ ಆಕೆಯನ್ನು ಬಿಡಿಸಿಕೊಳ್ಳಬೇಕಿತ್ತು. ಇದಕ್ಕೆ ಪ್ರತಿಯಾಗಿ ಬೆಲೆಬಾಳುವ ವಸ್ತುಗಳನ್ನು ನೀಡಬೇಕಿತ್ತು. ಈ ಸಪ್ತಪದಿ, ಅಗ್ನಿಸಾಕ್ಷಿ ಇವೆಲ್ಲವೂ ಇದಕ್ಕೆ ಸಂಬಂಧಿಸಿದವೇ. ಒಂದಂತೂ ಸ್ಪಷ್ಟ ಮಹಿಳೆಯು ಆಗಲೇ ಪುರುಷನ ಬೋಗವಸ್ತುವಾಗಿ ಮಾರ್ಪಟ್ಟಿದ್ದಳು.

ವೇದೋತ್ತರ ಸಮಕಾಲೀನವಾದ ಉಪನಿಷತ್ತುಗಳ ಕಾಲದಲ್ಲಿಯೂ ಇಂತದ್ದೇ ಪರಿಸ್ಥಿತಿಯಿರಬೇಕು. ಇಲ್ಲವೇ ಸ್ವಲ್ಪ ಸುಧಾರಿತವಿರಬಹುದು. ಆ ಕಾಲದಲ್ಲಿ ಗಾರ್ಗಿ, ಮೈತ್ರೇಯಿ, ಕಾತ್ಯಾಯಿನಿ, ಸುಲಭಾ, ವಡಬಾ, ಪ್ರಾಚಿದೇಯೋ ಮುಂತಾದ ಮಹಿಳೆಯರು ಪಂಡಿತರಾಗಿಯೂ, ಸಮಾಜದಲ್ಲಿ ಉನ್ನತ ಸ್ಥಾನವುಳ್ಳವರಾಗಿಯೂ ಕಾಣಿಸಿಕೊಂಡಿದ್ದಾರೆ. ಬೃಹದರಣ್ಯಕ ಉಪನಿಷತ್ತಿನಲ್ಲಿ ಒಂದು ಘಟನೆ ಬರುತ್ತದೆ[27]. ಜನಕನ ಸಭೆಯಲ್ಲಿ ಗಾರ್ಗಿ ಎಂಬುವವಳು ಯಾಜ್ಞವಲ್ಕ ಎಂಬುವವನನ್ನು ಸಂವಾದದಲ್ಲಿ ಎದುರುಗೊಳ್ಳುತ್ತಾಳೆ. ಅರಸನಿಂದ ಅವನು ಪಡೆದ ಬಹುಮಾನ

ಎಷ್ಟರ ಮಟ್ಟಿಗೆ ಅರ್ಹತೆಯುಳ್ಳದ್ದು ಎಂದು ಅವನನ್ನು ತನ್ನ ಪ್ರಶ್ನೆಗಳಿಂದ ಪರೀಕ್ಷಿಸುತ್ತಾಳೆ. ಇಂತದ್ದೆ ಘಟನೆಯೊಂದು ಪಂಪನ ಜೀವನದಲ್ಲಿಯೂ ನಡೆಯುತ್ತದೆ. 'ದೋರರಾಯನಾಸ್ತಾನದ ಕನ್ನಡ ಸಂಸ್ಕೃತ ಮಹಾಕವಿಗಧಿಪಂ ಪಂಪ ಕವಿಯಂ ಕಳುಹಿಸಲಾತಂ ಬಂದು ವಿದ್ಯದಿಂ ಸಾವಿರ ಪ್ರಶ್ನೆಯೂ ಕೇಳಲುತ್ತರಮಂ ಕುಡಲಾಕೆಯಂ ರಾಜಸಭೆಗೆಯ್ದಿಸೆ ವಿದ್ವತ್ಸಮೂದದೊಳಧಿಕ ಕವೀಶ್ವರಿಯಾಗಿರ್ದಳ್' ಎಂದು ಕವಿಯು ಅದನ್ನು ದಾಖಲಿಸುತ್ತಾನೆ[28].

ಮೊದಲನೆಯದರಲ್ಲಿ ಪ್ರಶ್ನೆ ಕೇಳಿದಾಕೆ ಹೆಣ್ಣು, ಉತ್ತರ ಕೊಟ್ಟಾತ ಗಂಡು.ಎರಡನೇಯದರಲ್ಲಿ ಉತ್ತರಿಸಿದಾಕೆ ಹೆಣ್ಣು. ಈ ಉತ್ತರಗಳ ನಂತರ ಆಕೆಯನ್ನು ಸಭೆಯಲ್ಲಿ 'ವಿದ್ವತ್ಸಮೂಹದೊಳಧಿಕ ಕವೀಶ್ವರಿ' ಎಂದು ಒಪ್ಪಿಕೊಳ್ಳುತ್ತಾರೆ. ಇಂತಹ ವಿದ್ವತ್ತುಳ್ಳ ಮಹಿಳೆಯರು ಪ್ರಾಚೀನ ಕರ್ನಾಟಕದಲ್ಲಿ ಅನೇಕರಿದ್ದರು. "ಸ್ವಸ್ತಿ ಶ್ರೀನಾಗಾರ್ಜುನಯ್ಯ ನಂದಿಗಬ್ಬೆಯ ಮಗಳಾಸಾಮಿನಿರ್ಮಾಡಿ ಸರ್ವಶಾಸ್ತ್ರ ಪಸಿದ್ಧಿ ಶ್ರೀ" ಎಂದು ಕಾರಬೆಲೆಯ ಶಾಸನವೊಂದು ಹೇಳುತ್ತದೆ[29]. ಬಾಲವಿಧವೆಯಾದ ನಾರಾಯಣದತ್ತೆಯು ತರ್ಕಶಾಸ್ತ್ರ, ಸಕಲಶಾಸ್ತ್ರಗಳನ್ನು ಓದಿ ಪಂಡಿತೆಯೆನಿಸಿಕೊಂಡಿದ್ದಳೆಂದು ಧರ್ಮಾಮೃತದ ಕತೆಯೊಂದು ಹೇಳುತ್ತದೆ[30]. 12ನೇ ಶತಮಾನದ ವಚನಕಾರರ ಯುಗದಲ್ಲಿ, ಹಲವು ಮಹಿಳೆಯರು ಸಮಾಜ ವಿಮರ್ಶೆಯಲ್ಲಿ ತಮ್ಮ ಛಾಪು ಮೂಡಿಸಿದ್ದರು. ಅದರಲ್ಲಿ ಹಲವು ಜನ ಸಂಸ್ಕೃತವನ್ನು ಬಲ್ಲವರಾಗಿದ್ದರು. ಪ್ರೌಢಿಮೆಯನ್ನೂ ಸಂಪಾದಿಸಿದ್ದರು. ಅಮುಗೆ ರಾಯಮ್ಮ, ಮುಕ್ತಾಯಕ್ಕ, ಗುಂಡಯ್ಯನ ಪತ್ನಿ ಶೀತಲದೇವಿ. ಇವರೆಲ್ಲರೂ ಸಂಸ್ಕೃತವನ್ನು ಬಲ್ಲವರಾಗಿದ್ದರು. ಅಕ್ಕಮಹಾದೇವಿ ಪ್ರಾಚೀನ ಧರ್ಮಗ್ರಂಥಗಳನ್ನು ಅಭ್ಯಾಸ ಮಾಡಿದ್ದವಳು. ಬೊಂತಾದೇವಿಯು ನಾಲ್ಕುವೇದ, ಹದಿನಾರು ಶಾಸ್ತ್ರ, ಹದಿನೆಂಟು ಪುರಾಣ, ಇಪ್ಪತ್ತೆಂಟು ಆಗಮಗಳ ವಿಷಯ ತಿಳಿದವಳಾಗಿದ್ದಳು[31].

ಇಲ್ಲಿ ಅಕ್ಕಮಹಾದೇವಿಯನ್ನು ಕುರಿತು ಎರಡು ವಿಷಯಗಳ ಪ್ರಸ್ತಾಪ ಅಗತ್ಯ. ಮೊದಲನೆಯದು ಉಪನಿಷತ್‌ಕಾಲದಲ್ಲಿಯ ಸಂವಾದವನ್ನು ಹೇಳಿದಂತೆ(ಈಕೆಯೂ ಸಹ ಅಲ್ಲಮಪ್ರಭುಗಳೊಂದಿಗೆ ಅನುಭವ ಮಂಟಪ ಎನ್ನುವಲ್ಲಿ ವಾಗ್ವಾದವನ್ನು ನಡೆಸಿದಂತೆ ತಿಳಿದುಬರುತ್ತದೆ). ಎರಡನೆಯದು ಈಕೆಯ ಪತಿಭಕ್ತಿ.ವೇದಾಧ್ಯಯನಕ್ಕೆ ಶೂದರ್ರೂ ಸ್ತ್ರೀಯರೂ ಅನರ್ಹರು ಎಂಬ ಕಟ್ಟುಪಾಡನ್ನು ಮುರಿದ ಈಕೆ, ಆಗಿನ ಸಮಾಜದಲ್ಲಿದ್ದ 'ಪತಿಭಾವ'ದ ಕಟ್ಟಳೆಯನ್ನೂ ಮುರಿಯುತ್ತಾಳ.ಅಂದಿನ ವಚನಕಾರರಂತೆ 'ಸತಿಪತಿಗಳೊಂದಾದಭಕ್ತಿ'ಯನ್ನು ಪ್ರಕಟಪಡಿಸುತ್ತಾ, ಆ ಪತಿಯನ್ನು ಮಲ್ಲಿಕಾರ್ಜುನನಲ್ಲಿ ಕಾಣಲು ಯತ್ನಿಸುತ್ತಾಳೆ. ಆದಾಗ್ಯೂ ಈಕೆಯದನ್ನು ಸತಿಪತಿಗಳು ಒಂದಾದ ಭಕ್ತಿ ಎನ್ನುವುದಕ್ಕಿಂತ, ದೇವರನ್ನೇ ಪತಿಯಾಗಿ ಅರಸಿ ಹೊರಟ

ಸತಿ ಭಕ್ತಿ ಎನ್ನಬಹುದು. ಮತ್ತು ಆ ದಿಶೆಯಲ್ಲಿಯೇ ಮುಂದುವರೆಯುತ್ತಾಳೆ.ಮೀರಾಳ ಕತೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಮೀರಾಳೂ ಸಹ ಸಾಕ್ಷಾತ್ ಶ್ರೀಕೃಷ್ಣನನ್ನೇ ತನ್ನ ಪತಿಯನ್ನಾಗಿ ಭಾವಿಸಿ ಬದುಕಿದವಳು.ಈ ಇಬ್ಬರ ವಿಷಯದಲ್ಲಿಯೂ ಪ್ರಚಲಿತದಲ್ಲಿರುವ ಸಾಮಾನ್ಯ ಕತೆಯೆಂದರೆ. ಈ ಇಬ್ಬರೂ ತಮಗಿಷ್ಟವಿಲ್ಲದ ಮದುವೆಯೊಂದನ್ನು ಮಾಡಿಕೊಳ್ಳುತ್ತಾರೆ. ಕೆಲವು ಷರತ್ತುಗಳನ್ನು ಗಂಡನಿಗೆ ವಿಧಿಸುತ್ತಾರೆ.ಆ ಗಂಡಂದಿರು ಅವನ್ನು ಮೀರಲಾಗಿ, ಪತಿಯನ್ನು ತೊರೆದು ಇಬ್ಬರೂ ತಮ್ಮ ಇಷ್ಟದೈವವನ್ನು ಹುಡುಕಿಕೊಂಡು ನಡೆದುಬಿಡುತ್ತಾರೆ. ಈ ಇಬ್ಬರ ಪೈಕಿ ಅಕ್ಕಮಹಾದೇವಿಯನ್ನು ಕೊಂಚ ಗಟ್ಟಿಗಿತ್ತಿಯೆಂದು ಹೇಳಬಹುದು. ಈಕೆ 'ಜಗದ ಗಂಡರನ್ನೆಲ್ಲ ಒಲೆಯಲ್ಲಿ ಇಡುವುದಾಗಿ' ಘೋಷಿಸುತ್ತಾಳೆ. ಇದು ಆ ಕಾಲಕ್ಕೂ, ಈ ಕಾಲಕ್ಕೂ, ಹೊರತಾದ ಪ್ರಯಾಣ. ಈಕೆ ಅದರಲ್ಲಿ ಯಶಸ್ವಿಯೂ ಆಗುತ್ತಾಳೆ.

ಅಲ್ಲಮಪ್ರಭುವಿನ ಜೊತೆ ವಾಗ್ವಾದ ನಡೆಸುವುದು ಮುಕ್ತಾಯಕ್ಕ ಎನ್ನುವ ವಚನಕಾರ್ತಿ. ಈಕೆ ಈ ವಾಗ್ವಾದದಲ್ಲಿ ಜಯಿಸಿದ್ದಾಗಿ ತಿಳಿಯುತ್ತದೆ[32]. ಅಕ್ಕಮಹಾದೇವಿಯ ನಿಲುವಿನಂತೆಯೇ, ಆಕೆಗೂ ಹಿಂದೆಯೇ ಸೂಫಿಯೊಬ್ಬಳು ದೇವರನ್ನು ಪತಿಯಾಗಿ ಬಯಸಿದ್ದಳು. ಕ್ರಿ.ಶ. 8–9ನೇ ಶತಮಾನದ ರಾಬಿಯಾ ಬಸ್ರಿ ಎನ್ನುವಾಕೆ"ನಾನು ದೇವರನ್ನು ಪ್ರೀತಿಸುತ್ತೇನೆ, ಅವನಿಂದ ಏನಾದರೂ ಪಡೆಯಲ್ಲಿಕ್ಕಲ್ಲ, ಅವನನ್ನೇ ಪಡೆಯುವುದಕ್ಕಾಗಿ" ಎಂದು ಹೇಳಿಕೊಂಡಿದ್ದಾಳೆ[33]. ಈ ಸೂಫಿಗಳು ಕರ್ನಾಟಕದ ಧಾರ್ಮಿಕ ಕ್ಷೇತ್ರದಲ್ಲಿ ತುಂಬಾ ಮಹತ್ವವಾದ ಸ್ಥಾನವನ್ನು ಹೊಂದಿದ್ದವರು. ಈ ಸೂಫಿಗಳು ಮತ್ತು ವಚನಕಾರರು ಪರಸ್ಪರ ಪ್ರಭಾವವಲಯದಲ್ಲಿ ಇರುವುದನ್ನು ನಾವು ಕಾಣುತ್ತೇವೆ. ಆಗಿನ ಕಾಲದಲ್ಲಿ ಮಹಿಳಾ ಸೂಫಿಗಳು ಸಹ ಸಮಾಜದಲ್ಲಿ ತಮ್ಮದೇ ಪ್ರಭಾವವನ್ನು ಹೊಂದಿದ್ದರು. ಮಹಮ್ಮದ್ ಇಬ್ರಾಹಿಂ ರಚಿಸಿದ 'ರವುಜತುಲ್ ಜಾಲಿಯಾ ಬಿಜಾಪುರ್' ಕೃತಿಯಲ್ಲಿ ಇಂತಹ ಅನೇಕ ಮಹಿಳಾ ಸೂಫಿಗಳ ಹೆಸರುಗಳಿವೆ[33]. ಬೀಬಿ ಖಾವಂದಮಾ, ಇಬ್ರಾಹಿಂ ಆದಿಲ್ ಶಾಹಿ ಕಾಲದ ಬೀಬಿನಯಿಂ, ಗೂಗಿಯ ಸೂಫಿಚಾಂದ್ ಹುಸೇನಿಯ ಸೋದರಿ ಪಾಂಚ್ ಬೀ ಬಾಯಾï (ಈಕೆ ರಾಯಚೂರಿನ ಬೆಟ್ಟದ ಮೇಲೆ ವಾಸಿಸುತ್ತಿದ್ದದಾಗಿ ತಿಳಿದು ಬರುತ್ತದೆ) ಮುಂತಾದವರು ಪ್ರಮುಖ ಮಹಿಳಾ ಸೂಫಿಗಳು. ಇವರಿಗೆ ತಮ್ಮದೇ ಆದಂತಹ ದರ್ಗಾಗಳೂ ಸಹ ಇವೆ. ಈ ಸೂಫಿಗಳು ಆಗಿನ ಕಾಲದಲ್ಲಿ ಎಷ್ಟು ಪ್ರಭಾವವನ್ನು ಬೀರಿದ್ದರೆಂದರೆ, ಕೇವಲ ಇಸ್ಲಾಂ ಅಷ್ಟೇ ಅಲ್ಲದೇ ಇತರೆ ಮತೀಯರೂ ಕೂಡ ಸೂಫಿಗಳಾಗಿ ಬದಲಾಗಿದ್ದರು. ಮುಂಬೈನ ಕಲ್ಯಾಣ ಬೆಟ್ಟದಲ್ಲಿ ಒಂದು ದರ್ಗಾ ಇದೆ.ಅಲ್ಲಿ ಸೂಫಿ ಹಾಜಿಮಲಂಗ್ ಮತ್ತು ಅವನ ಶಿಷ್ಯಳ ಸಮಾಧಿಗಳಿವೆ. ಆಕೆಯು ಬ್ರಾಹ್ಮಣ ಸಮುದಾಯದಿಂದ ಬಂದವಳು.ಈ ಕಾರಣ ಈಗಲೂ ಆ ಸಮಾಧಿಗೆ ಬ್ರಾಹ್ಮಣ ಪೂಜಾರಿಗಳೇ ಪೂಜೆಯನ್ನು ಮಾಡುತ್ತಾರೆ.

ಈ 'ಗೃಹಸ್ಥಾಶ್ರಮ ಧರ್ಮ'ವನ್ನು ಬಸವಣ್ಣನೂ ಪಾಲಿಸುತ್ತಿದ್ದನೇ? ಎಂದು ನಾವಿಲ್ಲಿ ಕೇಳಿಕೊಳ್ಳಬೇಕಾಗುತ್ತದೆ. ಬರಿ ಈತ ಮಾತ್ರವೇ ಅಲ್ಲ ನಾವು ನೋಡುವ ಎಲ್ಲಾ ಕತೆಗಳಲ್ಲಿಯೂ ಗಂಡನು ಹೆಂಡತಿಯನ್ನು ಅರ್ಪಿಸುವುದನ್ನೇ ಕಾಣುತ್ತೇವೆ. ಎಲ್ಲಾ ಕತೆಗಳಲ್ಲಿಯೂ ಅತಿಥಿಯಾಗಿ ಬಂದವರು ಪುರುಷರೇ ಇರುತ್ತಾರೆ. ಒಂದು ವೇಳೆ ಮಹಿಳೆಯು ಅತಿಥಿಯಾಗಿ ಬಂದಿದ್ದರೆ ಆ ಪ್ರಸಂಗವನ್ನು ನಮ್ಮ ಕವಿಗಳು ಹೇಗೆ ಚಿತ್ರಿಸುತ್ತಿದ್ದರು? ಹರಿಶ್ಚಂದ್ರನ ಹಿಂದೆ ಬಿದ್ದ ಹೊಲತಿಯರಂತೆಯೇ ಇಲ್ಲವೇ ಅರ್ಜುನನಿಂದ ತಿರಸ್ಕಾರಕ್ಕೆ ಒಳಗಾದ ಊರ್ವಶಿಯಂತೆಯೆ? ಇಂತಹ ಪ್ರಸಂಗ ರಚಿಸುವ ಪರಿಸ್ಥಿತಿ ನಮ್ಮ ಕವಿಗಳಿಗೆ ಬಂದಿಲ್ಲ ಅನ್ನಿಸುತ್ತದೆ. ಇಲ್ಲವೇ ನನ್ನ ಗಮನಕ್ಕೆ ಬಂದಿಲ್ಲವೇನೋ ? ಅಂತೂ ಈ ರೀತಿಯ ಸಮರ್ಪಣೆ ಮಾಡಿಕೊಳ್ಳುವ ಸತಿಯರಿಗಿಂತಲೂ ಕೀರ್ತಿ ಅಕ್ಷಯವನ್ನು ಹೊಂದುವುದು ಪುರುಷರೇ. ಇದರ ಹಿಂದಿರುವ ಪಾರಂಪರಿಕ ಮನಸ್ಥಿತಿ ಎಂದರೆ ಹೆಣ್ಣು ಗಂಡಿನ ಸ್ವತ್ತು ಎನ್ನುವುದು. ಈ ರೀತಿಯ 'ಸತಿತ್ಯಾಗ' ದಿಂದ ಸಮಾಜದಲ್ಲಿ ಗೌರವಕ್ಕೆ ಪಾತ್ರವಾಗಬಹುದು ಎಂಬ ಅಂದಿನ ಪರಿಸ್ಥಿತಿ.

ಪುರುಷರಿಗೆ 'ಗೃಹಸ್ಥಧರ್ಮ' ವಿರುವಂತೆ ಮಹಿಳೆಯರಿಗೂ ತಮ್ಮದೇಯಾದ 'ಸತಿಧರ್ಮ'ವು ಇರಬಹುದಲ್ಲ. ತನ್ನ ಗಂಡನನ್ನು ಬಿಟ್ಟು ಬೇರೆ ಯಾವ ಪುರುಷನನ್ನು ಮುಟ್ಟುವುದಿಲ್ಲ ಎನ್ನುವ ಮನಸ್ಥಿತಿಯವರು ಅವರು ಆಗಿರಬಹುದಲ್ಲ. ಆಗಿರಬಹುದಲ್ಲ ಎನ್ನುವುದಕ್ಕಿಂತ ಆಗಿದ್ದರು ಎನ್ನುವುದೇ ಸೂಕ್ತ. ತಮ್ಮ ಜೀವಿತದ ಕೊನೆಯವರೆಗೂ ಎಷ್ಟೇ ಕಷ್ಟ ಬಂದರೂ ಈ ಪತಿವ್ರತವನ್ನು ಸಾಧಿಸಿದವರು ನಮ್ಮ ಸುತ್ತಲೂ ಅನೇಕರಿದ್ದಾರೆ. ಪುರುಷನು ತಾನು ಮಾತ್ರವೇ ಧರ್ಮಿಯನೆಂದು, ತನ್ನದು ಮಾತ್ರವೇ ಧರ್ಮವೆಂದು ಭಾವಿಸಿದಾಗ ಈ ರೀತಿಯ ಪ್ರಸಂಗಗಳಾಗುತ್ತವೆ. ಇನ್ನೊಂದು ಘಟನೆಯ ಮೂಲಕ ಇದನ್ನು ಚಂದವಾಗಿ ಅರಿಯಬಹುದು[36]. ತೀರುನೀಲನಕ್ಕರ ಒಬ್ಬ ಶಿವಭಕ್ತ, ಒಮ್ಮೆ ಈತನು ಶಿವನನ್ನು ಪೂಜಿಸುವಾಗ ಶಿವಲಿಂಗದ ಮೇಲೆ ಒಂದು ಜೇಡರ ಹುಳು ಬೀಳುತ್ತದೆ. ಆಗ ಹೆಂಡತಿ ಅದನ್ನು ಬಾಯಿಂದ ಊದಿ ನಿವಾರಿಸುತ್ತಾಳೆ. ಇದರಿಂದ ಸಿಟ್ಟಾದ ಈತ 'ಬಾಯಿಂದ ಊದಿ ಪವಿತ್ರ ಲಿಂಗವನ್ನು ಎಂಜಲು ಮಾಡಿದೆ, ನಿನ್ನನ್ನು ಬಿಟ್ಟಿದ್ದೇನೆ ಹೊರಟುಹೋಗು' ಎಂದು ಆಕೆಗೆ ಹೇಳುತ್ತಾನೆ. ಈ ಘಟನೆಯನ್ನು ನೋಡಿದಾಗ ನಮಗೆ 'ಇಸ್ಲಾಂ' ನಲ್ಲಿರುವ ಮೂರು ಕೂಗಿನ ತಲಾಖ್ ನೆನಪಾಗದೇ ಇರದು. ನಂತರದಲ್ಲಿ ಆ ದಿನ ರಾತ್ರಿ ಶಿವನು ಆತನ ಕನಸಿನಲ್ಲಿ ಬಂದು 'ನಿನ್ನ ಪತ್ನಿ ಊದಿ ಕಳೆದ ಭಾಗಬಿಟ್ಟು ಉಳಿದ ನನ್ನ ದೇಹದಲ್ಲಾದ ಬೊಕ್ಕೆಗಳನ್ನು ನೋಡು' ಎನ್ನುತ್ತಾನೆ ಇದರಿಂದ ತನ್ನ ತಪ್ಪನ್ನರಿತ ಆತ ಮತ್ತೆ ಪತ್ನಿಯನ್ನು ಕೂಡಿದ.'ಸತಿ–ಪತಿ ಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'

ಎನ್ನುವ ಮಾತು ಆತ ಕೇವಲ ಭಕ್ತನಾಗಿದ್ದರೆ ನೆನಪಿರುತ್ತಿತ್ತೇನೋ, ಆದರೆ ಆತ 'ಪುರುಷ ಭಕ್ತ' ನಾದುದರಿಂದ ಅದು ಮರೆತುಹೋಯಿತು. ಅದನ್ನು ನೆನಪಿಸಲಿಕ್ಕೆ ಸ್ವತಃ ಶಿವನೇ ಬರಬೇಕಾಯಿತು. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ಮಹಿಳೆಯ ಮೇಲೆ ಪುರುಷ ಸಿಟ್ಟಾದರೆ ಹೊರ ಬರಬೇಕಾದ್ದು ಮಹಿಳೆಯೇ ಮತ್ತು ಪುರುಷನ ತಪ್ಪಿನಿಂದ ಮಹಿಳೆ ಸಿಟ್ಟಾದರೂ ಮನೆಯಿಂದ ಹೊರ ಬರಬೇಕಾದದ್ದು ಮಹಿಳೆಯೇ. ಇಂತಹ 'ಪುರುಷ ಧರ್ಮ'ದ 'ಪುರುಷ ಭಕ್ತ'ರ ಕತೆಯು ಇವರಲ್ಲಿ ಮಾತ್ರವೇ ಅಲ್ಲ, ಜೈನರಲ್ಲಿಯೂ ಸಿಗುತ್ತವೆ.

ವೈಜಕವ್ವೆ[37]. ಒಂದು ಶಿವಭಕ್ತರ ಕುಟುಂಬದಾಕೆ.ಈಕೆಯ ತಂದೆಯ ತಂಗಿಯನ್ನು ಜೈನ ಮನೆಗೆ ಕೊಟ್ಟಿರುತ್ತಾರೆ. ಆಕೆಯ ಒತ್ತಾಯದ ಮೇರೆಗೆ ಆಕೆಯ ಮಗನಾದ 'ಬವಿ ಸವಣಗುನ್ನಿಗೆ' ವೈಜಕವ್ವೆಯನ್ನು ತಂದೆಯು ಕೊಡುತ್ತಾನೆ. ಮಗಳನ್ನು ಕಳಿಸುವಾಗ 'ಸುಧರ್ಮದಿಂದೆ ಮಗಳನ್ನು ರಕ್ಷಿಸು' ಎಂದು ತಂಗಿಗೆ ಹೇಳಿಕಳಿಸುತ್ತಾನೆ. ಇಲ್ಲಿ ಸುಧರ್ಮವೆಂದರೆ ಶೈವಧರ್ಮವೂ ಹೌದು, ಮಗಳ ಧರ್ಮವು ಹೌದು. ಇಲ್ಲಿ ಮಗಳಿಗೆ ಶಿವಪೂಜೆಗೆ ಅಡ್ಡಿಪಡಿಸದಿರಿ ಎಂಬುದರ ಜೊತೆಗೆ ಅವಳಲ್ಲಿ ಜೈನವನ್ನು ತುಂಬ ಬೇಡಿ ಎಂಬ ಎಚ್ಚರಿಕೆಯೂ ಇದೆ. ಒಲವಿಲ್ಲದ ಮದುವೆಯಾದ ವೈಜಕವ್ವೆಯು ಶಿವನ ಮೇಲೆ ಭಾರಹಾಕಿ ಗಂಡನ ಮನೆಗೆ ತೆರಳುತ್ತಾಳೆ. ಮತ್ತು ಅಲ್ಲಿ ಆಕೆ "ತರುಗಳ ನಡುವೆ ಚಂದನದಂತೆ, ತಮದ ನಡುವೆ ಚಂದ್ರನಂತೆ" ಸುಖವಾಗಿ ಇರುತ್ತಾಳೆ. ಒಮ್ಮೆ ಗಂಡನ ಮನೆಗೆ ಸವಣಮುನಿಗಳು ಬರುವರೆಂದು ಅಡುಗೆ ಮಾಡಲು ಹೇಳುತ್ತಾನೆ. ಅದರಂತೆಯೇ ಮಾಡುತ್ತಾಳೆ. ಸರಿಯಾಗಿ ಆ ಮುನಿಗಳು ಬರುವ ಸಮಯಕ್ಕೆ ಶಿವನು ಅತಿಥಿ ವೇಷದಿಂದ ಆ ಮನೆಗೆ ಬರುತ್ತಾನೆ. ಆಕೆ ಆ ಅಡುಗೆಯನ್ನು ಶಿವನಿಗೆ ಭೀಕ್ಷೆ ನೀಡಲು ಹೋಗುತ್ತಾಳೆ.ಇದನ್ನು ಕಂಡ ಮುನಿಗಳು ಅನ್ನವು ಮುಟ್ಟಪಡವಾಗಿದೆ' ಎಂದು ತಿರಸ್ಕರಿಸಿ ಹೊರಡುತ್ತಾರೆ. ಈ ಕಾರಣಕ್ಕೆ ಗಂಡ ಹೆಂಡಿರಲ್ಲಿ ಜಗಳವಾಗಿ ಆತ ಆಕೆಯನ್ನು ಬಡಿಯುತ್ತಾನೆ. ಇಲ್ಲಿ ವೈಜಕವ್ವೆ ಮಾಡಿದ್ದು ತಪ್ಪಾದರೂ, ಆತ ಆಕೆಯನ್ನು ಬಡಿಯೆಬಾರದಿತ್ತು. ಕೊನೆಗೆ ಶಿವನ ಆಗಮನವಾಗಿ ವೈಜಕವ್ವೆ ಗೆಲ್ಲುತ್ತಾಳೆ. ಗಂಡನಿಗೆ 'ಶೈವದೀಕ್ಷೆ'ಯನ್ನು ಕೊಡಿಸುತ್ತಾಳೆ. ಈಕೆಯನ್ನು ಕುರಿತಂತೆ ಕೈಲಾಸದಲ್ಲಿ ಶಿವನು ಗಿರಿಜೆಗೆ ಪರಸಮಯದಲ್ಲಿದ್ದೂ ಶಿವಭಕ್ತಿ ಪ್ರಸಾರಮಾಡಿದ ಧೀರೆ, ನಿಷ್ಠಾವಂತೆ'ಎಂದು ಹೇಳುತ್ತಾನೆ ಇಲ್ಲಿ ಬಂದಿರುವ 'ಶೈವದೀಕ್ಷೆ' ಕೊಡಿಸುವುದು ಮತ್ತು 'ಪರಸಮಯದಲ್ಲಿದ್ದು' ಎನ್ನುವುದರ ಕುರಿತು ಮುಂದೆ ಮಾತಾನಾಡುವುದಿದೆ.

ವೈಜಕವ್ವೆಯನ್ನೇ ಹೋಲುವಂತಹ ಇನ್ನೊಂದು ಕತೆ ಬರುತ್ತದೆ. ಅದು ಹೇರೂರು ಹೆಣ್ಣಿನ ಕತೆ[38]. ಶಿವಭಕ್ತೆಯಾದ ಈಕೆಯನ್ನು ಇಷ್ಟವಿಲ್ಲದ ಮದುವೆ ಮಾಡಿ ಜೈನರ ಮನೆಗೆ ಕಳಿಸಿರಲಾಗಿರುತ್ತದೆ. ಕೊನೆಗೆ ಈಕೆ ಅಲ್ಲಿಂದ ಪಾರಾಗಿ ಬಂದು ಶೈವಧರ್ಮ ಪ್ರಸಾರದಲ್ಲಿ ತೊಡಗುತ್ತಾಳೆ. ಇದೇ ರೀತಿಯಾಗಿ

ಜೈನರ ಮಧ್ಯೆ ಸಿಲುಕಿದ್ದ ಶೈವಭಕ್ತಳ ಕತೆ ಇನ್ನೊಂದಿದೆ ಅದು ಮಹಾಪುರುಷೆ ಕರಿಕಾಲಮ್ಮೆಯದು[39]. ಈಕೆಯು ಗಂಡನಿಗೂ, ಗಂಡನ ಮನೆಯವರಿಗೂ, ಊರವರಿಗೂ ತಿಳಿಯದಂತೆ ಅಡುಗೆ ಮನೆಯನ್ನು ಶಿವಮಂದಿರ ಮಾಡಿಕೊಂಡು ಪೂಜಿಸುತ್ತಿರುತ್ತಾಳೆ. ನಂತರ ಶಿವನೇ ಬಂದು ಈಕೆಯ ಶಿವ ಭಕ್ತಿಯನ್ನು ಜಗಜ್ಜಾಹಿರು ಮಾಡುತ್ತಾನೆ. ಕವಿ ಈಕೆಯನ್ನು 'ಗುಪ್ತ ಮಹೇಶ್ವರಿ' ಮತ್ತು ಶಿವಭಕ್ತಿ ಪ್ರಸಾರಕಿ ಎಂದು ಕರೆಯುತ್ತಾನೆ. ಈ ಮೇಲಿನ ಮೂರೂ ಕತೆಗಳಲ್ಲಿರುವ ಎರಡು ಪ್ರಮುಖ ಅಂಶಗಳ ಬಗ್ಗೆ ನಾವು ಹೆಚ್ಚಿಗೆ ಚರ್ಚಿಸಬೇಕಾದ ಅವಶ್ಯಕತೆಯಿದೆ. ಅವುಗಳೆಂದರೆ ಇಷ್ಟವಿಲ್ಲದಿರುವ ಮದುವೆಯಾಗಿರುವುದು ಮತ್ತು ಸ್ವಧರ್ಮ ಪ್ರಸಾರಕಿಯರಾಗಿರುವುದು.

ಮೊದಲು ಇಷ್ಟವಿಲ್ಲದಿರುವ ಮದುವೆಯ ಕುರಿತಂತೆ ಈ ರೀತಿಯಾಗಿ ವಿಚಾರಿಸಬಹುದು. ವೈಜಕವ್ವೆ, ಹೇರೂರು ಹೆಣ್ಣು ಮತ್ತು ಕರಿಕಾಲಮ್ಮೆ ಈ ಮೂವರದು ಒಂದು ರೀತಿಯಲ್ಲಿ ಇಷ್ಟವಿಲ್ಲದ ಸಂಸಾರವೇ .ಈ ಇಷ್ಟವಿಲ್ಲದಕ್ಕೆ ಕಾರಣ ಸ್ಪಷ್ಟ. ಅದು ಗಂಡನದು ಬೇರೆ ಧರ್ಮವಾಗಿರುವುದು. ವೈಜಕವ್ವೆ ಮತ್ತು ಹೇರೂರು ಹೆಣ್ಣಿನ ಕತೆಯಲ್ಲಿ ಅವರ ತಂದೆಯ ತಂಗಿಯರೇ ತಮ್ಮ ಮನೆಗೆ ಮದುವೆಮಾಡಿಕೊಳ್ಳಲು ಬಯಸುತ್ತಾರೆ. ಅವರ ತಂದೆಯ ತಂಗಿಯರಿಗೆ ಅವರ ಗಂಡನ ಮನೆಯಲ್ಲಿ ಕಾಣದ ಧರ್ಮದ ಸಮಸ್ಯೆ ಇವರಿಗೆ ಕಾಣುವುದು ವಿಚಿತ್ರವೇ ಸರಿ. ಈ ರೀತಿ ಗಂಡಹೆಂಡತಿ ಬೇರೆ ಬೇರೆ ಧರ್ಮಕ್ಕೆ ಸೇರಿದ ಹಲವು ಪ್ರಸಂಗಗಳು ಆ ಕಾಲದಲ್ಲಿದ್ದವು. ಬ್ರಹ್ಮಶಿವನು ತನ್ನ ಸಮಯಪರೀಕ್ಷೆ ಕೃತಿಯಲ್ಲಿ ಇವರನ್ನು ವಿಶೇಷವಾಗಿ ಗುರುತಿಸುತ್ತಾನೆ. ಅಂತಹ ಕುಟುಂಬವನ್ನು ಇವನು ಹೀಯಾಳಿಸುತ್ತಾನೆ ಕೂಡ. ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳು ಇವನ ಟೀಕೆಗೆ ಗುರಿಯಾಗಿದ್ದಾರೆ. ಈತ "ಅರಗುಲಿವೆಂಡಿರು" ಎಂಬ ಪದವನ್ನು ಬಳಸುತ್ತಾನೆ. ಇದಕ್ಕೆ ಹಳೆಗನ್ನಡ ನಿಘಂಟುವಿನಲ್ಲಿ 'ಧರ್ಮ ಘಾತಕರು' ಎಂದು ಕರೆಯಲಾಗಿದೆ[40]. ಇದನ್ನು ಧರ್ಮಬಾಹಿರ ಎನ್ನುವುದಕ್ಕಿಂತ ಹೆಚ್ಚಾಗಿ ಒಂದಕ್ಕಿಂತ ಹೆಚ್ಚು ಧರ್ಮಗಳನ್ನು ಅನುಸರಿಸುವವರು ಎನ್ನುವುದು ಉತ್ತಮ ಅಥವಾ ಆ ಕಾಲದಲ್ಲಿ ಹೀಗೆ ಒಂದಕ್ಕಿಂತ ಹೆಚ್ಚು ಮತ ಅನುಸರಿಸುವವರನ್ನು ಧರ್ಮಬಾಹಿರರು ಎನ್ನುತ್ತಿದ್ದರೇನೋ.

ಈ ಧರ್ಮಬಾಹಿರ ಮಹಿಳೆಯರ ಲಕ್ಷಣವೆಂದರೆ ಜಗತ್ತಿಗೆ ತೋರುವಂತೆ ಒಂದು ಧರ್ಮವನ್ನು ಪಾಲಿಸುತ್ತಿದ್ದರೆ, ಮನಸ್ಸಿನಲ್ಲಿ ಇನ್ನೊಂದು ದೇವರನ್ನು ಪೂಜಿಸುತ್ತಿದ್ದರು. ಇಲ್ಲವೇ ಬಹಿರಂಗವಾಗಿಯೇ ಹಲವು ದೇವರುಗಳನ್ನು ಪೂಜಿಸುತ್ತಲೂ ಇರುತ್ತಿದ್ದರು. ಇವರ ಈ ಪರಿಸ್ಥಿತಿಗೆ ಹಲವು ಕಾರಣಗಳನ್ನು ಊಹಿಸಬಹುದು. ಮೇಲೆ ಹೇಳಿದಂತೆ ಇಷ್ಟವಿಲ್ಲದೆಯೇ ಬೇರೊಂದು ಧರ್ಮದವರನ್ನು ಮದುವೆಯಾಗಿರುವುದು. ತನ್ನ ಧರ್ಮವಲ್ಲದ ಇನ್ನೊಬ್ಬನನ್ನು ಪ್ರೇಮಿಸಿ ಮದುವೆಯಾಗುವುದು ಇಲ್ಲವೇ ಮನೆಯವರ ಸಮ್ಮತಿಯಿಂದಲೇ ಆಗಿರುವಂತದ್ದು. ಆದರೆ ಪರುಷರ

ಬಗ್ಗೆ ಕುರಿತಂತೆ ಈತ 'ಅರಗುಲಿ. . . .' ಎಂಬ ಪದವನ್ನು ಬಳಸುವುದಿಲ್ಲ. ಕಾರಣ 'ಗಂಡ ಹೇಳಿದಂತೆ ಅರ್ಹತ್ಪೂಜೆ ಮಾಡುವ ಹೆಂಡತಿ ಪಡೆದಾತ ಸಂಪತ್ತು ಪಡೆದಂತೆ' ಎನ್ನುವುದು ಈತನ ನಿಲುವು. ಇದು ಆ ಸಮಯದ ಸಮಾಜದ ಮನಸ್ಥಿತಿಯೂ ಹೌದು. ಮತ್ತೂ ಈಗಲೂ ಇಂತಹ ಮನಸ್ಥಿತಿಯನ್ನು ಕಾಣಬಹುದು.

ಎರಡನೇಯ ಅಂಶವೆಂದರೆ 'ಸ್ವಧರ್ಮ ಪ್ರಸಾರಕಿಯರಾಗಿರುವುದು'. ಸ್ವಧರ್ಮ ಎಂದರೆ ಆ ಮಹಿಳೆಯರು ನಂಬಿ ಆಚರಿಸುತ್ತಿರುವ ಧರ್ಮ. ಸಧ್ಯ ಈ ಮೇಲಿನ ಕತೆಗಳಲ್ಲಿ ಬಂದಿರುವ ಕೆಲ ಸಾಲುಗಳು ಹೀಗಿವೆ. 'ಪರಸಮಯದಲ್ಲಿದ್ದು ಶಿವಭಕ್ತಿ ಪ್ರಸಾರ ಮಾಡಿದ ಧೀರೆ, ನಿಷ್ಠಾವಂತೆ' 'ಗುಪ್ತ ಮಹೇಶ್ವರಿ, ಶಿವಭಕ್ತಿ ಪ್ರಸಾರಕಿ' ಮುಂತಾದವು.ಅಂದಿನ ಕಾಲದಲ್ಲಿ ಪತಿಯ ಧರ್ಮವನ್ನು ಅನುಸರಿಸುವ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದರು. ತಮ್ಮ-ತಮ್ಮ ಧರ್ಮಗಳಲ್ಲಿ ತಟಸ್ಥವಾಗಿ ಉಳಿಯುತ್ತಿದ್ದವರ ಸಂಖ್ಯೆಯು ಹೆಚ್ಚಿತ್ತು. ಇವರನ್ನು ಹೊರತು ಪಡಿಸಿ ಪತಿಯನ್ನೇ ತಮ್ಮ ಧರ್ಮಕ್ಕೆ ಸೆಳೆಯಲು ಪ್ರಯತ್ನಿಸಿದವರು ಮತ್ತು ಸೆಳೆದವರೂ ಇದ್ದರು. ಈ ಮೇಲಿನ ಕತೆಗಳ ಹೊರತಾಗಿಯೂ ಇನ್ನೂ ಅನೇಕ ಉದಾಹರಣೆಗಳನ್ನು ನಾವು ಕಾಣುತ್ತೇವೆ. ವಾಗೀಶ್ವರ ದೇವರ ರಗಳೆಯಲ್ಲಿ ಒಂದು ಘಟನೆಯ ಪ್ರಸ್ತಾಪವಿದೆ[41]. ವಾಗೀಶ ಎನ್ನುವವನು ಪೂರ್ವವಾಸನೆಯಿಂದ ಜೈನದಲ್ಲಿ ನೆಲೆ ನಿಂತಿರುತ್ತಾನೆ. ಇವನನ್ನು ಶಿವಭಕ್ತನನ್ನಾಗಿ ಮಾಡಲು ಬಯಕೆ ಹೊಂದಿದ್ದ ಅವನ ಹೆಂಡತಿಯು ಈ ಕುರಿತು ಶಿನವಲ್ಲಿ ಪ್ರಾರ್ಥಿಸುತ್ತಾಳೆ. ಇದರಿಂದಾಗಿಯೇ ಎನ್ನುವಂತೆ ಈ 'ವಾಗೀಶ'ನಿಗೆ ಶೂಲೆ ರೋಗವು ಅಂಟುತ್ತದೆ. ಅದು ಎಲ್ಲಿಯೂ ವಾಸಿಯಾಗುವುದಿಲ್ಲ. ಕೊನೆಗೆ ಶಿವನ ಸಾನಿಧ್ಯದಲ್ಲಿ ವಾಸಿಯಾಗುತ್ತದೆ. ಇದರಿಂದ ಅವನು ಶಿವಭಕ್ತನಾಗಿ ದೀಕ್ಷೆಯನ್ನು ಹೊಂದುತ್ತಾನೆ. ಇಂತದ್ದೇ ಇನ್ನೊಂದು ಕತೆಯಿದೆ[42]. 'ಕರ್ಣಾಟಕ ದೊಳ್ ಕೊಳ್ಳಾಗಾಲಮೆಂಬ ಪುರದೊಳ್ ಮಾಧವ ಭಟ್ಟನೆಂಬ ಬ್ರಾಹ್ಮಣನ ಹೆಂಡತಿ ಶ್ರೀದೇವಿಯೆಂಬೊಳ್ಗೆ ಗರ್ಭಮೆಪ್ಪುದು ಆಕೆಗೆ ಜಿನಸಮಯದೊಳ್ಗ್ ಶ್ರದ್ಧೆ ಪುಟ್ಟಿ . . . . .' ಕತೆ ಹೀಗೆ ಮುಂದುವರೆಯುತ್ತದೆ.ಆಕೆಗೆ ಜಿನಸಮಯದಲ್ಲಿ ಶ್ರದೇ ಯಾಕೆ ಹುಟ್ಟಿತೆಂದು ಕತೆಯು ಹೇಳುವುದಿಲ್ಲ. ಬಹುಶಃ ವಾತಾವರಣದ ದೆಶೆಯಿಂದ ಇರಬೇಕು. ಹೀಗೆ ಹೆಂಡತಿಯಲ್ಲಿ ಹುಟ್ಟಿದ ಆ ಶ್ರದ್ಧೆಯು ಕಾಲಕ್ರಮೇಣ ಗಂಡನನ್ನು ಆವರಿಸಿಕೊಳ್ಳುತ್ತದೆ. ಕೊನೆಗೆ ಅದು 'ದೀಕ್ಷಾನ್ವಯಕ್ರಿಯೆವಿಡಿದು ಜಿನಮತಮನಾಚರಿಸಲ್' ಎನ್ನುವಲ್ಲಿಗೆ ಮುಗಿಯುತ್ತದೆ. ಹೀಗೆ ಮಾಧವಭಟ್ಟನೆಂಬ ಬ್ರಾಹ್ಮಣನು, ತನ್ನ ಹೆಂಡತಿಯಲ್ಲಿ ಹುಟ್ಟಿದ ಶ್ರದ್ಧೆಯ ಮೂಲಕವಾಗಿ ಜಿನಮತಕ್ಕೆ ಮತಾಂತರವಾಗುತ್ತಾನೆ.

ಮಹಿಳೆಯರು ಹೀಗೆ ಕೇವಲ ಮತಾಂತರದ ಪರಿಸರಕ್ಕೆ ಮಾತ್ರವೇ ಕಾರಣವಾಗುತ್ತಿದ್ದಿಲ್ಲ. ಅನೇಕ ಮಹಿಳೆಯರು ದೀಕ್ಷೆಯನ್ನು ನೀಡುವ ಮಟ್ಟಕ್ಕೂ ಸಾಧನೆಯನ್ನು ಮಾಡಿದ್ದರು. ಪ್ರಭಾವತಿ

ದೇವಿ ಎಂಬಾಕೆಯು 'ಸುವ್ರತಕಂತಿ' ಎನ್ನುವವರಲ್ಲಿ ದೀಕ್ಷೆಯನ್ನು ಕೊಂಡು, ಧೀರ್ಘಕಾಲ ತಪಸ್ಸಿನಲ್ಲಿ ನಿಂತುದ್ದಾಗಿ ಒಂದು ಕತೆಯು ಹೇಳುತ್ತದೆ[43]. ಇನ್ನೊಂದು ಕತೆಯಿದೆ[44]. ಇದರಲ್ಲಿ ಪ್ರಿಯದತ್ತ ಸೆಟ್ಟಿ ಎನ್ನುವವನು ತನ್ನ ಮಗಳಾದ ಅನಂತಮತಿಗೆ ಚಿಕ್ಕವಯಸ್ಸಿನಲ್ಲೆ 'ಬ್ರಹ್ಮಚರ್ಯ' ವ್ರತವನ್ನು ಕೊಡಿಸಿರುತ್ತಾನೆ. ಈಕೆಯು ಈ ವ್ರತವನ್ನು ಚಾಚೂ ಬಿಡದಂತೆ ಪಾಲಿಸುಕೊಂಡು ಬಂದು ಕೊನೆಯಲ್ಲಿ ಕಮಲಶ್ರೀ ಎನ್ನುವ ಕಂತಿಯಲ್ಲಿ ಜಿನದೀಕ್ಷೆಯನ್ನು ಪಡೆಯುತ್ತಾಳೆ.

ಈ ಅನಂತಮತಿಯದು ಸ್ವಲ್ಪ ವಿಚಿತ್ರವಾದ ಕತೆ. ಆಕೆಯ ತಂದೆಯು ಆಕೆಗೆ ಬ್ರಹ್ಮಚರ್ಯ ವ್ರತವನ್ನು ನೀಡಿದ ಕೆಲವು ದಿನಗಳಲ್ಲೇ ಕುಂಡಲ ಮಂಡಿತನೆಂಬ ವಿದ್ಯಾಧರನೊಬ್ಬ ಆಕೆಯನ್ನು ಹೊತ್ತೊಯ್ಯುತ್ತಾನೆ. ಅವನ ಬಳಿಯಿಂದ ಆಕೆಯನ್ನು ಶಂಖಪುರದ ಬೇಡರ ಅರಸನು ಹೊತ್ತೊಯ್ಯುತ್ತಾನೆ. ಅಲ್ಲಿ ಅರಸನ ಪತ್ನಿಯಿಂದ ಈಕೆಯ ಕುರಿತಾಗಿ ಜಗಳವಾಗಿ ನಂತರದಲ್ಲಿ ಆ ಅನಂತಮತಿಯು ಕುಂಟಳಿ ಎಂಬಾಕೆಯ ಕೈ ಸೇರುತ್ತಾಳೆ. ಈ ಕುಂಟಳಿಯು ಆಕೆಯನ್ನು ವೇಶ್ಯೆಯನ್ನಾಗಿ ಮಾಡುವ ಪ್ರಯತ್ನ ಮಾಡುತ್ತಾಳೆ. ಇದರಲ್ಲಿ ಯಶಸ್ವಿಯಾಗದ ಆ 'ಕುಂಟಳಿ'ಯು ಆಕೆಯನ್ನು ಸಿಂಹರಥ ರಾಜನಿಗೆ ಒಪ್ಪಿಸಿ ಬಿಡುತ್ತಾಳೆ. ಕೊನೆಗೆ ಅಲ್ಲಿಂದ ತಪ್ಪಿಸಿಕೊಂಡ ಅನಂತಮತಿಯು ಕಮಲಶ್ರಿ ಕಂತಿಯ ಜೊತೆಯಾಗುತ್ತಾಳೆ. ಆಕೆಯಲ್ಲಿಯೇ ಜಿನದೀಕ್ಷೆಯನ್ನೂ ಪಡೆಯುತ್ತಾಳೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಅಷ್ಟೆಲ್ಲಾ ಕೈಗಳು ಬದಲಾದರೂ ಆಕೆ 'ಕನ್ಯೆ'ಯಾಗಿಯೇ ಉಳಿದಿರುತ್ತಾಳೆ. ಇದಕ್ಕೆ 'ಯಾವ ಕಾರಣಕ್ಕೂ ಬ್ರಹ್ಮಚರ್ಯ ವ್ರತವನ್ನು ಬಿಡುವುದಿಲ್ಲ' ಎಂಬ ಆಕೆಯ ಗಟ್ಟಿ ನಿಲುವೇ ಕಾರಣ. ಈ ಬ್ರಹ್ಮಚರ್ಯ ವ್ರತವು ಪುರುಷರಲ್ಲಿಯೂ ಸಹ ಪಾಲನೆಯಲಿತ್ತು. ಇದಕ್ಕೆ ಸಂವಾದಿಯಾಗಿ ನಾವು ಇನ್ನೊಂದು ಕತೆಯನ್ನು ನೋಡಬಹುದು ಅದು ಮಾಧವಿಯ ಕತೆ[45].

ಇದು ಮಹಾಭಾರತದ ಕತೆ ಇಲ್ಲಿ ಹೇಳಬೇಕಾದ ಒಂದು ವಿಷಯವೆಂದರೆ ಆಗ ಸ್ತ್ರೀಯರನ್ನು ಮಾರುತ್ತಲೂ ಇದ್ದರೂ, ಬಾಡಿಗೆಗೂ ಕೊಡುತ್ತಿದ್ದರು. ಎಷ್ಟೆಂದರೂ ಹೆಣ್ಣೆಂದರೆ ವಸ್ತುತಾನೆ. ಈ ಮಾಧವಿ ಎನ್ನುವಾಕೆ ಯಯಾತಿ ಎನ್ನುವವನ ಮಗಳು. ಈತ ತನ್ನ ಗುರು ಗಾಲವನಿಗೆ ಗುರುದಕ್ಷಿಣೆಯಾಗಿ ಮಗಳು ಮಾಧವಿಯನ್ನೇ ಕೊಡುತ್ತಾನೆ. ಆ ಗಾಲವನು ಅವಳನ್ನು ಕ್ರಮವಾಗಿ ಮೂರು ರಾಜರಿಗೆ ಒಂದೊಂದು ಮಗುವಾಗುವವರೆಗೆ ಬಾಡಿಗೆಗೆ ಕೊಡುತ್ತಾನೆ. ಕೊನೆಗೆ ತನ್ನ ಗುರುವಾದ ವಿಶ್ವಾಮಿತ್ರನಿಗೆ ಭಾರ್ಯೆಯಾಗಿ ಅರ್ಪಿಸುತ್ತಾನೆ. ಆತನಿಗೂ ಒಂದು ಮಗುವಾದ ಮೇಲೆ ಗಾಲವನು ಅವಳನ್ನು ತಂದೆಯಾದ ಯಯಾತಿಗೆ ಮರಳಿಸುತ್ತಾನೆ. ಈ ಎರಡೂ ಕತೆಗಳಲ್ಲಿ ಕಾಣುವ ಸುಮಾನ ಅಂಶವೆಂದರೆ, ಹೆಣ್ಣು ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಹಸ್ತಾಂತರವಾಗುವುದು. ಒಂದು

ವ್ಯತ್ಯಾಸವೆಂದರೆ ಅನಂತಮತಿಯು ಕನ್ಯೆಯಾಗಿದ್ದು ಕೊಂಡೇ ಅವರೆಲ್ಲರ ಕೈಗಳನ್ನು ದಾಟುತ್ತಾಳೆ. ಮಾಧವಿಗೆ ಆ ಅವಕಾಶವಿಲ್ಲ. ಮಹಾಭಾರತದ ಈ ಕಾಲಘಟ್ಟದಲ್ಲಿ ಹೆಣ್ಣು ಹೆಚ್ಚಾಗಿ ಸಂಭೋಗದ ವಸ್ತುವಾಗಿಯೇ ಕಾಣಸಿಗುತ್ತಾಳೆ. ಈ ಮಾಧವಿಯದು ಅದಕ್ಕೆ ಒಂದು ಉದಾಹರಣೆಯಷ್ಟೇ. ಇಲ್ಲಿ ಮಹಿಳೆಯರನ್ನು ಕಟ್ಟಿಹಾಕಲು ಧರ್ಮಶಾಸ್ತ್ರಗಂಥಗಳು ಯಥೇಚ್ಚವಾಗಿಯೇ ತಮ್ಮ ಉಡುಗೊರೆಯನ್ನು ನೀಡಿವೆ. ಆದರೆ ಆ ಕಾಲಘಟ್ಟಕ್ಕೂ, ನಂತರದ ಕಾಲ ಘಟ್ಟಕ್ಕೂ ಹಲವು ಮಹತ್ವದ ಬದಲಾವಣೆಗಳಾಗಿವೆ. ಈ ಧರ್ಮಶಾಸ್ತ್ರ ಎಂದಾಗ ಹೆಣ್ಣಿನ ಧರ್ಮವಾಗಿ ನಮಗೆ ಮೊದಲು ಕಾಣುವುದು 'ಪತಿವ್ರತ ಧರ್ಮ' ಎನ್ನುವುದು ಇದನ್ನು ಕುರಿತು ಸ್ವಲ್ಪ ವಿವೇಚಿಸೋಣ.

'ಪತಿವ್ರತೆ' ಎಂದರೆ ಕಾಯಾ, ವಾಚ, ಮನಸ ಪತಿಯಲ್ಲಿ ನಿಷ್ಠಳಾಗಿರುವವಳು ಎಂದು ಅರ್ಥ. ಇದು ಮಹಿಳೆಯರನ್ನು ಶಾಸ್ತ್ರಗಳಲ್ಲಿ ಕಟ್ಟಿಹಾಕುವ ಮಾರ್ಗಗಳಲ್ಲಿ ಪ್ರಥಮವಾದುದು. ಅಹಲ್ಯೆ, ಸೀತೆ, ತಾರಾ, ದ್ರೌಪದಿ, ಮಂಡೋದರಿ ಇವರನ್ನು ಪಂಚ ಪತಿವ್ರತೆಯರು ಎಂದು ಕರೆಯಲಾಗುತ್ತದೆ. ಕೆಲವೊಮ್ಮೆ ಈ ಪಟ್ಟಿಯಲ್ಲಿ ಕುಂತಿಯನ್ನು ಸೇರಿಸಲಾಗುತ್ತದೆ. ಮಂಡೋದರಿ ಮತ್ತು ಸೀತೆ ಪರವಾಯಿಲ್ಲ. ಅವರನ್ನು ಪತಿವ್ರತೆಯರ ಪಟ್ಟಿಯಲ್ಲಿ ಸೇರಿಸಬಹುದು. ಆದರೆ ಅಹಲ್ಯೆ, ಕುಂತಿಯರನ್ನು ಸೇರಿಸುವುದು ಸ್ವಲ್ಪ ಕಷ್ಟ.ಅಹಲ್ಯೆ, ಪತಿ ಇಲ್ಲದ ಸಮಯದಲ್ಲಿ ಇಂದ್ರನನ್ನು ಕೂಡಿದವಳು.ದ್ರೌಪದಿ ಐದು ಗಂಡರ ಹೊರತಾಗಿಯೂ ಕರ್ಣನನ್ನು ಬಯಸಿದವಳು. ಕುಂತಿಯು ಮದುವೆಗೆ ಮೊದಲೇ ತಾಯಿಯಾದವಳು. ಆದರೆ ಇಲ್ಲಿ ಇವರನ್ನು ಈ ಕಾರಣಕ್ಕೆ ಹೀಯಾಳಿಸುವಂತಿಲ್ಲ. ಆ ಕಾಲಮಾನಕ್ಕೆ ಅವರ ವರ್ತನೆಗಳಿದ್ದವು. ಅವನ್ನು ಶಾಸ್ತ್ರದ ಹಿನ್ನೆಲೆಯಲ್ಲಿ ಈಗಿನದಕ್ಕೆ ಹೋಲಿಸಿದಾಗ ಅವರು ನಮಗೆ ತಪ್ಪಾಗಿ ಕಾಣಿಸುತ್ತಾರೆ. ಅಲ್ಲದೆ ಅವರನ್ನು ಪತಿವ್ರತೆಯರ ಪಟ್ಟಿಯಲ್ಲಿ ಸೇರಿಸಲು ಯಾವುದಾದರೂ ಧಾರ್ಮಿಕರಾಜಕಾರಣದ ಕಾರ್ಯವಿದ್ದರೂ ಇರಬಹುದು.

ಈ ಪತಿವ್ರತ ಧರ್ಮಕ್ಕೆ ತಪ್ಪಿ ನಡೆದರು ಎಂಬುದಕ್ಕಾಗಿ ಹಲವು ಮಹಿಳೆಯರು ಶಿಕ್ಷೆಗೆ ಒಳಗಾದುದನ್ನು ನಾವು ಕಾಣುತ್ತೇವೆ. ಇಂದ್ರನೊಂದಿಗೆ ಸಂಭೋಗಿಸಿದಕ್ಕಾಗಿ ತನ್ನ ಪತ್ನಿಯನ್ನು ವಧಿಸಲು ಗೌತಮನು ಮಗನಾದ ಚಿರಕಾರಿಗೆ ಆದೇಶವನ್ನು ನೀಡುತ್ತಾನೆ. ಹೆಂಡತಿ ರೇಣುಕೆಯು ಗಂಧರ್ವ ಚಿತ್ರರತನಲ್ಲಿ ಮೋಹಗೊಂಡಿದ್ದಕ್ಕೆ ಜಮದಗ್ನಿಯು ತನ್ನ ಮಗನಾದ ಪರಶುರಾಮನಿಂದ ಆಕೆಯನ್ನು ವಧಿಸುತ್ತಾನೆ. ರಾವಣನ ಮನೆಯಲ್ಲಿ ಇದ್ದು ಬಂದುದಕ್ಕಾಗಿ ರಾಮನು ಸೀತೆಯನ್ನು ಅನುಮಾನಿಸಲು ಆಕೆಯು ಪಾತಾಳಕ್ಕೆ ಹಾರಿ ಪ್ರಾಣ ಬಿಡುತ್ತಾಳೆ. ಹೀಗೆ ಇನ್ನೂ ಅನೇಕ ಉದಾಹರಣೆಗಳನ್ನು ನಾವು ನೋಡಬಹುದು. 'ಧರ್ಮೇಚ ಅರ್ಥೇಚ ಕಾಮೇಚ ನಾತಿಚರಾಮಿ'

ಧರ್ಮ ಅರ್ಥ ಕಾಮಗಳಲ್ಲಿ ನಾನು ಈ ವಧುವನ್ನು ಮೀರುವುದಿಲ್ಲ ಎಂದು ಸತಿಧರ್ಮವನ್ನು ಪಾಲಿಸಿದವರ ಕತೆಯಿದು.

ಈ ಪತಿವ್ರತಾ ಧರ್ಮವನ್ನು ಪಾಲಿಸುವುದರ ಜೊತೆಗೆ, ಧರ್ಮವನ್ನು ಪಾಲಿಸಬೇಕಾದದ್ದು ಪ್ರಾಚೀನ ಕರ್ನಾಟಕದ ಮಹಿಳೆಗೆ ಅವಶ್ಯಕವಾಗಿತ್ತು. ಇಲ್ಲವೇ ಅವರು ವಿರೋಧಭಾಸಕ್ಕೆ ಒಳಗಾಗುತಿದ್ದರು. ಧರ್ಮದ ದಾರಿಯಲ್ಲೇ ಹೇಳುವುದಾದರೆ ಮಹಿಳೆಯರು ಆ ಧರ್ಮದ ಏಳಿಗೆಗೆ ಕಾರಣವಾದರೆ ಅವರನ್ನು ಹೊಗಳಲಾಗುತ್ತದೆ. ಇಲ್ಲವಾಗಿ ಆಕೆ ಸತಿ ಧರ್ಮವನ್ನು ಮಾತ್ರವೇ ಪಾಲಿಸುತ್ತಿದ್ದರೆ ಆ ಹೆಣ್ಣನು ಮಾಯೆ ಎಂದು ಕರೆಯಲಾಗುತ್ತದೆ. ಇಲ್ಲಿ 'ಮಾಯೆ' ಎಂದರೆ ಪುರುಷನ ಧಾರ್ಮಿಕ ಉನ್ನತಿಗೆ ಅಡ್ಡಿಯಾದ ಹೆಂಗಸರು ಎಂದರ್ಥ, ಹೆಣ್ಣು-ಹೊನ್ನು-ಮಣ್ಣು ಮಾಯೆ ಎಂದು ಹೇಳುವಲ್ಲಿ ಮಹಿಳೆಯನ್ನು ವಸ್ತುವಾಗಿ ಕಂಡಿರುವ ಸಾಧ್ಯತೆಯೆ ಹೆಚ್ಚು. ಈ ರೀತಿ ಧರ್ಮದ ಪ್ರಕ್ರಿಯೆಯಲ್ಲಿ 2 ರೀತಿಯಲ್ಲಿ ಹೆಣ್ಣನ್ನು ನೋಡಿರುವುದನ್ನು ಕಾಣುತ್ತೇವೆ.

ಮೊದಲೆಯದು 'ಮಾಯೆ'ಯಾಗಿ. ಹೀಗೊಂದಿಷ್ಟು ಮಾತುಗಳು ಆಗ ಪ್ರಚಲಿತದಲ್ಲಿದ್ದವು. ಜೈನಿಯರ ಕಾವ್ಯಗಳಲ್ಲಿ ಇತರರಿಗಿಂತ ಇದು ಹೆಚ್ಚು ಬಳಕೆಯಾಗಿದೆ. "ಪೆರ್ಮೊಲೆ ಧರ್ಮಮಾಂಸಭರಿತ ಪೊರಗಾಗೊಳಗಂ ವಿಚಾರಿಸಲ್ ಸೋರ್ಮಡಿ ಸೀರ ಪೇನಪುಳು ಪುತ್ತು ನಿರೀಕ್ಷಿಸುವಕ್ಷಿಪಕ್ಕು ಸಿಳ್ಳುಣ್ಮವ ಕಾಣ ತಾಣವಧರಾವೃತಮಂ ರುಧಿರದ್ರವಂ ಜಡರ್ ಕೆಮ್ಮನವಕ್ಕೆ ಪೆರ್ಮತನಮಂ ಬಜಿದೇಜಿಸಿ ಸೂಜಿವೋದಪರ್[46]ಎಂದೊಂದು ವರ್ಣನೆ ಬರುತ್ತದೆ. ಹೊರಗಿನಿಂದ ನೋಡಲಿಕ್ಕೆ ಮಾತ್ರ ಅಂದವಾಗಿ ಕಾಣುವ ಹೆಣ್ಣಿನ ದೇಹ, ಒಳಗಡೆ ಹೇಸಿಗೆಯಿಂದ ಕೂಡಿದೆ. ಈ ಸತ್ಯವನ್ನು ಅರಿತು ಹೆಣ್ಣಿನ ಮೋಹದಿಂದ ದೂರ ಉಳಿಯಬೇಕು ಎಂಬುದು ಇದರ ಹೊರಾರ್ಥ. ಪುರಷರು ಸಹ ಇಂತದ್ದೇ ದೇಹರಚನೆಯುಳ್ಳವರು ಎಂಬುದು ಬಹುಶಃ ಅವರಿಗೆ ಮರೆತುಹೋಗಿರಬೇಕು. ಧಾರ್ಮಿಕ ಇತಿಹಾಸದ ಯಾವುದೇ ಪುಟವನ್ನು ನಾವು ನೋಡಿದರೂ ಹೆಣ್ಣು ಮಾತ್ರವೇ ಈ ರೀತಿಯ ಅಡ್ಡಿ ಎಂದು ಬಿಂಬಿಸಿಕೊಂಡು ಬರಲಾಗಿದೆ. ಯಾವಾಗಲೂ ಹೆಂಗಸರು ಪುರಷರ ಮುಕ್ತಿಗೆ ಅನುಕೂಲಕರ ವಾತಾವರಣವನ್ನು ನಿರ್ಮಾಣ ಮಾಡುವವರಾಗಿಯೇ ಕಂಡುಬುರತ್ತಾರೆ. ಯಾವ ಕತೆಯನ್ನೇ ಓದಲಿ ಅಲ್ಲಿ ಸಂಸಾರದಿಂದ ನಿರುತ್ಸಾಹ ಹೊಂದಿ ಸಂನ್ಯಾಸವನ್ನು ಕೊಳ್ಳುವವರು ಪುರುಷರೇ ಆಗಿರುತ್ತಾರೆ. ಸ್ತ್ರೀಯರು ಅವರ ಹಿಂದೆಯೇ ಅನುಸರಿಸಿ ಸಂನ್ಯಾಸವನ್ನು ಕೈಗೊಳ್ಳಬೇಕು ಇಲ್ಲವೇ ಅವರ ನೆನಪಿನಲ್ಲಿ ಮನೆಯಲ್ಲಿಯೇ ಉಳಿಯಬೇಕು. ಆಕೆ ಎಷ್ಟೇ ಯವ್ವನವಂತೆಯಾಗಿದ್ದರೂ ಏಕಾಂಗಿಯಾಗಿಯೇ ಉಳಿಯಬೇಕು. ಹಾಗಾದಾಗ ಮಾತ್ರವಲ್ಲವೇ ಆಕೆಯನ್ನು ಪತಿವ್ರತೆ ಎನ್ನುವುದು. ಪುರುಷರಂತೆ

ದೈಹಿಕವಾಗಿ ಕಠಿಣ ವ್ರತಾಚರಣೆಗಳನ್ನು ಮಹಿಳೆಯರು ಸಹಿಸಿದ ಕತೆಯು ಎಲ್ಲಿಯೂ ಬರುವುದಿಲ್ಲ. ಪುರಷನು ಮಾತ್ರವೇ ಸಂಸಾರವನ್ನು ತ್ಯಜಿಸಿ ಆ ವ್ರತಗಳಲ್ಲಿ ಯಶಸ್ವಿಯಾಗುವುದು.

ಕೆಲವೊಮ್ಮೆ ಒಂದು ಕನಿಷ್ಠ ಮಿತಿಯಲ್ಲಾದರೂ ಗಂಡಸಾದವನು ಧರ್ಮಶಾಸ್ತ್ರಗಳನ್ನು ಪಾಲಿಸುವುದಿಲ್ಲ. ವಿವಾಹಿತನಾದವನು ಸಂಸಾರ ತ್ಯಜಿಸಲು ಶಾಸ್ತ್ರಗಳ ಕನಿಷ್ಠ ಮಿತಿಯೆಂದರೆ ಒಂದು ಮಗುವನ್ನು (ಪುತ್ರನನ್ನು) ಪಡೆದ ಬಳಿಕ.ತನ್ನ ಆಸ್ತಿಯನ್ನು ಆ ಮಗುವಿಗೆ ವಹಿಸಿಕೊಟ್ಟು, ಇಲ್ಲವೇ ರಾಜನಾಗಿದ್ದರೆ ಆ ಮಗುವಿಗೆ ಪಟ್ಟವನ್ನು ಕಟ್ಟಿ ತಾನು ಸಂನ್ಯಾಸವನ್ನು ಸ್ವೀಕರಿಸಬಹುದಿತ್ತು. ಇದನ್ನು ಎಲ್ಲರೂ ಪಾಲಿಸುತ್ತಿದ್ದಿಲ್ಲ. ಮುಖ್ಯವಾಗಿ ಇಂತಹ ಶಾಸ್ತ್ರಗಳನ್ನು ರಚಿಸುತ್ತಿದ್ದ ಮುನಿಗಳೇ ಪಾಲಿಸುತ್ತಿದ್ದಿಲ್ಲ. ಧರ್ಮಾಮೃತದಲ್ಲಿ ಒಂದು ಕತೆ ಬರುತ್ತದೆ[47]. ವಾರಿಷೇಣ ಎನ್ನುವ ರಾಜಕುಮಾರನು ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸ ಸ್ವೀಕರಿಸಿ ಆಚಾರ್ಯನಾಗಿರುತ್ತಾನೆ. ಇವನು ತನ್ನ ಬಾಲ್ಯಗೆಳೆಯನಾದ ಬ್ರಾಹ್ಮಣ ಪುಷ್ಪದಾಡನಿಗೂ ಸಹ ಬಲವಂತವಾಗಿ ದೀಕ್ಷೆ ಕೊಡಿಸುತ್ತಾನೆ. ಹೊಸದಾಗಿ ಮದುವೆಯಾಗಿದ್ದ ಅವನು ಹೆಂಡತಿಯನ್ನು ಅಗಲಿ ಇರಲಾರದೆ ಮನೆಗೆ ವಾಪಸ್ಸು ಓಡುತ್ತಾನೆ. ಮತ್ತೆ ಅವನನ್ನು ಹಿಡಿದು ತಂದ ವಾರಿಷೇಣನು ಅವನನ್ನು ಮುಂಚಿನ ತನ್ನ ಅರಮನೆಗೆ ಕೊಂಡೊಯ್ದು, ತನ್ನ 500 ಜನ ಸುಂದರಿಯರಾದ ಹೆಂಡತಿಯರನ್ನು ತೋರಿಸುತ್ತಾನೆ. ಅವರ ಸಾಲಿನಲ್ಲಿ ಪುಷ್ಪದಾಡನ ಹೆಂಡತಿಯನ್ನು ನಿಲ್ಲಿಸಿ ಆಕೆಯ ಕುರೂಪವನ್ನು ಉತ್ಪ್ರೇಕ್ಷಿಸುತ್ತಾನೆ. ಈ ಮೂಲಕ ಅವನಲ್ಲಿಸಂಸಾರದಲ್ಲಿ ನಿರುತ್ಸಾಹವನ್ನು ಉಂಟುಮಾಡುತ್ತಾನೆ. ನಾನು 500ಜನ ಸುಂದರಿಯರನ್ನು ಬಿಟ್ಟಿರುವಾಗ ನೀನು ಒಬ್ಬ ಕುರೂಪಿಯನ್ನು ಬಿಡಲಾರೆಯಾ ಎಂಬುದು ಅವನ ಪ್ರಶ್ನೆ. ಮುನಿಯಾದವನು ಯಾವ ಸೌಂದರ್ಯ ಗ್ರಹಿಕೆಯಿಂದ ಹೊರಗಾಗಬೇಕಿತ್ತೋ, ಅದೇ ಕುರೂಪಿತನವನ್ನು ಅವನು ತೋರಿಸುತ್ತಾನೆ. ಆ 500 ಜನರ ಮುಂದಿನ ಜೀವನದ ಬಗ್ಗೆಯೂ ಯೋಚನೆಯಿಲ್ಲದ ಆ ವಾರಿಷೇಣ ಒಬ್ಬ ಪುರುಷ ಸ್ನೇಹಿತನ ಜೀವನ ಕುರಿತು ಚಿಂತಿತನಾಗುತ್ತಾನೆ. ಇದು ಆ ಕಾಲದ ಧಾರ್ಮಿಕ ಮೌಲ್ಯವೆಂದರೆ ಯಾವ ಕಾಲಕ್ಕಾದರೂ ಒಪ್ಪಿಕೊಳ್ಳಲಾದೀತೆ.

ಧರ್ಮಗಳು ಮೇಲ್ನೋಟಕ್ಕೆ ಮಹಿಳೆಗೆ ಗೌರವವನ್ನು ಹೇಳಿದರೂ ಸಹ ಅವುಗಳ ಅಂತರ್ಯದಲ್ಲಿ ಅವರ ಬಗ್ಗೆ ವಿರೋಧಭಾಸವೇ ಇರುತ್ತದೆ. ಸುಕುಮಾರ ಸ್ವಾಮಿಯ ಈ ಕತೆಯನ್ನು ನೋಡಿ[48]. ತನ್ನ ಮಾವನಾದ ಬ್ರಾಹ್ಮಣ ಸೂರ್ಯಮಿತ್ರಾಚಾರ್ಯನು ಜೈನದೀಕ್ಷೆ ಪಡೆದುಬಂದಿದ್ದಕ್ಕಾಗಿ ವಾಯುಬೂತಿಯು ಅವನನ್ನು ಹಂಗಿಸುತ್ತಾನೆ. ಈ ಕಾರಣಕ್ಕೆ ಅವನಿಗೆ ಔದುಂಬರ ಕುಷ್ಠವಾಗಿ ಸತ್ತು ಮರುಜನ್ಮದಲ್ಲಿ ಹೆಣ್ಣು ಕತ್ತೆಯಾಗಿ ಹುಟ್ಟುತ್ತಾನೆ. ಇನ್ನೂ ಮುಂದುವರೆದ ಮರುಜನ್ಮಗಳಲ್ಲಿ ಹೆಣ್ಣು ಹಂದಿಯಾಗಿ, ಹೆಣ್ಣುನಾಯಾಗಿ, ಕೊನೆಗೆ ಹೊಲೆಯರ ಮನೆಯಲ್ಲಿ ಹೆಣ್ಣುಮಗಳಾಗಿ ಹುಟ್ಟುತ್ತಾನೆ. ಈ

ಹೊಲೆಯ ಜನುಮದಲ್ಲಿ ರಿಸಿಗಳಿಂದ ಸದ್ದರ್ಮವನ್ನು ಕೇಳಿದ್ದಕ್ಕಾಗಿ ಮುಂದಿನ ಸದ್‌ಜನ್ಮದಲ್ಲಿ ಉತ್ತಮಕುಲದಲ್ಲಿ ನಾಗಶ್ರೀಯಾಗಿ ಜನಿಸುತ್ತಾಳಂತೆ. ಆಗ ಪಂಚಾಣುವ್ರತ ದೀಕ್ಷೆ ಪಡೆದು ಮುಂದಿನ ಜನ್ಮದಲ್ಲಿ ಸುಕುಮಾರಸ್ವಾಮಿಯಾಗಿ ಹುಟ್ಟಿ ಮುಕ್ತಿಯನ್ನು ಹೊಂದುತ್ತಾಳಂತೆ.

ಪ್ರಾಣಿ ಜನ್ಮ ಅದರಲ್ಲೂ ಕತ್ತೆ–ಹಂದಿ–ನಾಯಿಗಳ ಜನ್ಮವನ್ನೇ ನಾವು ಸಾಮಾನ್ಯವಾಗಿ ಕನಿಷ್ಟವೆಂದು ತಿಳಿಯುತ್ತೇವೆ. ಅಂತದ್ದರಲ್ಲಿ ಆ ಪ್ರಾಣಿ ಜನ್ಮದಲ್ಲು ಹೆಣ್ಣಾಗಿ ಹುಟ್ಟಿಸುವುದು ಇನ್ನೂ ಕನಿಷ್ಟವೆಂದು ಅವರ ಭಾವನೆಯಿರಬೇಕು. ಇಲ್ಲಿ ನೀಡಿರುವ ಶಿಕ್ಷೆಗಳೆಲ್ಲವೂ ಹೆಣ್ಣು ಜನ್ಮಕ್ಕೆ ಮೀಸಲಾಗಿವೆ. ಕೊನೆಯ ಮೂರು ಜನ್ಮಗಳನ್ನು ನಾವು ವಿಶೇಷವಾಗಿ ನೋಡಬೇಕಾಗುತ್ತದೆ. ಪ್ರಾಣಿಗಳ ಹಂತವನ್ನು ದಾಟಿದ ಮನುಷ್ಯನೆಂದರೆ ಹೊಲೆಯರು ಎಂಬ ಸೂಕ್ಷ್ಮ ವಿಷಯ ಇಲ್ಲಿದೆ.ಅದರಲ್ಲೂ ಹೊಲೆಯ ಹೆಣ್ಣುಮಗಳು ಅದೂ ಸಹ ಆಕೆ ಕುರೂಪಿ ಹೆಣ್ಣು ಮಗಳಾಗಿ ಹುಟ್ಟುತ್ತಾಳೆ. ಇದು ಪ್ರಾಣಿ ಹಂತದಿಂದ ಒಂದುಹಂತ ಮೇಲೆ  ಬಂದಂತೆ. ಈ ಜನ್ಮದಲ್ಲಿ ಸದ್ಧರ್ಮವನ್ನು ಕೇಳಿದ್ದ ಸಲುವಾಗಿ ಮುಂದಿನ ಜನ್ಮದಲ್ಲಿ ಸ್ಥಿತಿವಂತರ ಮನೆಯಲ್ಲಿ ಸುಂದರ ಹೆಣ್ಣು ಮಗಳಾಗಿ ಹುಟ್ಟುತ್ತಾಳೆ. ಇದು ಮತ್ತೊಂದು ಹಂತ. ಈ ಜನ್ಮದಲ್ಲಿ ಧಾರ್ಮಿಕವಾಗಿಯೂ ಆಕೆ ಎರಡನೇ ಹಂತವನ್ನು ಮುಟ್ಟುತ್ತಾಳೆ. ಈ ಜನ್ಮದಲ್ಲಿ ಆಕೆ ಪಂಚಾಣು ವ್ರತಗಳ ದೀಕ್ಷೆಯನ್ನು ಕೈಗೊಳ್ಳಬಹುದು. ಮೋಕ್ಷಕ್ಕಾಗಿ ಇನ್ನೂ ಮುಂದಿನ ಹಂತವೊಂದಿದೆ. ಅದು ಪರುಷ ಜನ್ಮವನ್ನು ಪಡೆಯುವುದು. ಪುರಷ ಜನ್ಮ ಪಡೆದಾಗಲೇ ಮುಕ್ತಿಗೆ ಅರ್ಹರು ಎಂಬ ನಿಯಮವಿತ್ತು. ಅದರಂತೆಯೇ ಮುಂದಿನ ಜನ್ಮದಲ್ಲಿ ಸುಕುಮಾರ ಸ್ವಾಮಿಯಾಗಿ ಹುಟ್ಟಿ ಮೋಕ್ಷವನ್ನು ಹೊಂದುತ್ತಾಳೆ.

ಇದು ವಡ್ಡಾರಾಧನೆ ಕಾಲದ ಕತೆಯಾಯಿತು.ಸ್ತ್ರೀಯರನ್ನು ಈ ಒಂದು ಪ್ರಕಾರವಾಗಿ ಮಾತ್ರವೇ ಕಾಣುತ್ತಿದ್ದರು ಎಂದು ಹೇಳಲಿಕ್ಕೆ ಬರುವುದಿಲ್ಲ. ಯಾಕೆಂದರೆ ಧರ್ಮಾಮೃತದ ಕಾಲಕ್ಕಾಗಲೇ ಮನಸ್ಥಿತಿ ಬದಲಾಗಿರುವಂತೆ ಕಾಣುತ್ತದೆ. ವೇಶ್ಯೆಯರನ್ನು ಕುರಿತಂತೆ ಒಂದು ಮಾತನ್ನು ಇಲ್ಲಿ ಗಮನಿಸಬಹುದು **"ವೇಶ್ಯಾಯಾಃ ದರ್ಶನಂ ಪುಣ್ಯಂ ಸ್ಪರ್ಶನಂ ಪಾಪನಾಶನಮ್"** ಚುಂಬನಂ ಸರ್ವತೀರ್ಥ ಸ್ನಾನ್ಮೈಥುನಂ ಮೋಕ್ಷಸಾಧನಮ್॥[49] ಎಂದು ಹೇಳಲಾಗಿದೆ. ಇದನ್ನು ಬರೆದಾತ ರಸಿಕರಿಸಿಯೇ ಇರಬೇಕು. ಹೆಣ್ಣು ಮೋಕ್ಷಕ್ಕೆ ಅಡ್ಡಿಯೆಂಬ ಆ ಮಾತೆಲ್ಲಿ, ವೈಶ್ಯೆಯೊಂದಿಗಿನ ಮೈಥುನವೇ ಮೋಕ್ಷಸಾಧನೆ ಎಂದು ಘೊಷಿಸುವ ಈ ಮಾತೆಲ್ಲಿ. ಇಷ್ಟಕ್ಕೆ ನಿಲ್ಲದೆ ಕವಿ ಇನ್ನೂ ಮುಂದಕ್ಕೆ ಹೇಳುತ್ತಾನೆ. ಗಂಡಕೀ ನದಿಯಂ ದೇವತಾ ಸ್ವರೂಪಂ ಸೂಳೆಯೆಂಬೀ ಭಾವದಿಂ ಕೂಡಿದೊಡೆ ವೇಶ್ಯಾಗಮನ ಫಲಪ್ರಾಪ್ತಿಯಪ್ಪುದು'. . . . ..ಎನ್ನುತ್ತಾನೆ. ಇಷ್ಟೆಲ್ಲಾ ಅಂದಿದ್ದಾನೆಂದರೆನೆ ಈ ಮಾತಲ್ಲಿಯೂ ನಮಗೆ ಯಾವುದೋ ಅನುಮಾನ ಕಾಡದಿರದು. 'ಎಲ್ಲಿ ನಾರಿಯರನ್ನು ಪೂಜಿಸುತ್ತಾರೆಯೋ ಅಲ್ಲಿ ದೇವತೆಗಳು ನೆಲೆಸಿರುತ್ತಾರೆ' ಎಂದು

ಹೇಳುತ್ತಲೇ ಹೆಣ್ಣಿನ ಸ್ವಾತಂತ್ರ್ಯವನ್ನು ಕಸಿಯುವ ಮನುವಿನ ಮಾತುಗಳಂತೆಯೇ ಇಲ್ಲಿಯೂ ಅಂತದ್ದೇನೂ ಇರದಿರಲಿ ಎಂದು ಹಾರೈಸಬಹುದಷ್ಟೆ.

ಈಗ ಧರ್ಮವೀರನಾರಿಯರ ಬಗ್ಗೆ ಮಾತಾನಾಡೋಣ. ಅತ್ತಿಮಬ್ಬೆಯು ಪ್ರಾಚೀನ ಕರ್ನಾಟಕದಲ್ಲಿ ತುಂಬ ಜನಪ್ರಿಯವಾದ ಹೆಂಗಸು. ವಿಶೇಷವಾಗಿ ಜೈನರಿಗೆ ಈಕೆ ಪೂಜ್ಯಳು. ಈಕೆಯನ್ನು ಕುರಿತಂತೆ ಹಲವು ಕವಿಗಳು ತಮ್ಮ ಕಾವ್ಯಗಳಲ್ಲಿ, ಶಾಸನಗಳಲ್ಲಿ ಬಹಳವಾಗಿಯೇ ಹೊಗಳಿದ್ದಾರೆ. ಜೈನಧರ್ಮವು ಅವನತಿಯನ್ನು ಹೊಂದುತ್ತಿದ್ದಂತಹ ಕಾಲದಲ್ಲಿ ಅದನ್ನು ಎತ್ತಿಹಿಡಿದವಳು. ಈಕೆಯು ರನ್ನನ ಅಜಿತನಾತಪುರಾಣವನ್ನು 1000 ಪ್ರತಿ ಈ ಮಾಡಿಸಿ ಹಂಚಿದಳಂತೆ.ಸುಮಾರು 1000 ಬಸದಿಗಳನ್ನು ಈಕೆ ಕಟ್ಟಿಸಿದ್ದಾಗಿ ತಿಳಿಯುತ್ತದೆ. ಈಕೆಯನ್ನು ಕುರಿತಂತೆ ಒಂದುಕಡೆ ಹೀಗೆ ಬರುತ್ತದೆ.

**ಗುಣದ ಕಣಿ ದಾನಚಿಂತಾ**
**ಮಣಿ ವಿಮಳ ಚರಿತ್ರ ಜೈನಶಾಸನರಕ್ಷಾ**
**ಮಣಿ ಸಜ್ಜನೈಕ ಚೂಡಾ**
**ಮಣಿಯೆಂದೆಂದತ್ತಿಮಬ್ಬೆಯಂ . . . . ಪೊಗಳದರಾರ್**[50].

ಈ ಹಿಂದೆಯೇ ಹೇಳಿದಂತೆ ಜೈನಧರ್ಮವು ಮಹಿಳೆಯರಿಗೆ ಗೌರವವನ್ನು ಕೊಡುತ್ತದೆಯಾದರೂ, ಪರುಷರ ಮಟ್ಟಕ್ಕೆ ಅಲ್ಲ. ಈಕೆಯು ತಾನು ಮಾಡಿದ ಕೆಲಸಗಳಿಂದಲೇ ಈ ಮಟ್ಟಿನ ಮನ್ನಣೆಯನ್ನು ಪಡೆದುಕೊಂಡಳು. ಶ್ರೀಮಂತ ಕುಟುಂಬದವಳಾದ ಈಕೆಯು ತನ್ನ ಗಂಡನು ಕಾಲವಾದ ಬಳಿಕ ತನ್ನ ಇಡೀ ಜೀವನವನ್ನು, ಆಸ್ತಿಯನ್ನು ಜೈನ ಧರ್ಮದ ಏಳ್ಗೆಗಾಗಿಯೇ ಮೀಸಲಿಟ್ಟಳು. ಈ ಮೂಲಕ ಕರ್ನಾಟಕದ ಚರಿತ್ರೆಯಲ್ಲಿ ಎಂದೂ ಮರೆಯದ ಸ್ಥಾನವನ್ನು ಪಡೆದುಕೊಂಡಳು. ಈಕೆಯಂತೆಯೇ ಪುರುಷರಿಗಿಂತ ಮಿಗಿಲಾಗಿ ಧಾರ್ಮಿಕ ಕ್ಷೇತ್ರದಲ್ಲಿ ತೊಡಗಿಕೊಂಡವರು ಹಲವಾರು ಆಗಿನ ಕರ್ನಾಟಕದಲ್ಲಿ ಇದ್ದರು. ಅವರು ಪುರುಷರಿಗೆ ಯಾವ ರೀತಿಯಲ್ಲೂ ಕಮ್ಮಿ ಇಲ್ಲದಂತೆ ಧರ್ಮಯಾತ್ರೆ ಮಾಡಿದರು.ಧರ್ಮಪ್ರಸಾರ ಮಾಡಿದರು. ಧರ್ಮಯುದ್ಧಗಳನ್ನು ಮಾಡಿದರು.ದೇವಾಲಯಗಳನ್ನು ಕಟ್ಟಿಸಿದರು. ಅವರಲ್ಲಿ ಒಬ್ಬಾಕೆ ಊರೊಡತಿ ವೆಣ್ಣಲಸೆಟ್ಟಿಕವ್ವೆ[51]

ಈಕೆ ಕೋಣವತ್ತಿ ಪ್ರದೇಶವನ್ನು ಆಳುತ್ತಿದ್ದವಳು. ಈಕೆಯನ್ನು ಕುರಿತ ಒಂದು ಶಾಸನವು ಹೀಗೆ ಹೇಳುತ್ತದೆ."ಭೂಮಿಗೊಪ್ಪುವಂತ ಶಿಲಾದೇಗುಲ ನಿರ್ಮಿಸಿ, ಹರಿಹರ ವಿಗ್ರಹಗಳನ್ನು ಪ್ರತಿಷ್ಠಾಪನೆಯನ್ನು ವೆಣ್ಣಲನಾರಿಯಂತೆ ಮಾಡಿಸಿದ ನಾರಿಯರುಂಟೇ ಜಗದೊಳಗೆ[52].ಎನ್ನುತ್ತದೆ. ಈ ಶಾಸನವು ಧರ್ಮಸಮನ್ವಯಕ್ಕೂ ಸರಿಯಾಗುತ್ತದೆ. ಒಂದೇ ದೇವಾಲಯದಲ್ಲಿ ಹರಿಹರ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡುತ್ತಾಳೆ. ಬಹುಶಃ ಆಕೆಯ ಸಮಯದಲ್ಲಿ ಶೈವ–ವೈಷ್ಣವರ ಪ್ರಭಾವ ಮತ್ತು ಸಂಘರ್ಷವು ಅಧಿಕವಾಗಿಯೇ ಇರಬೇಕು. ಈ ಕಾರಣಕ್ಕೆ ಈಕೆ ಇಬ್ಬರ ಮೂರ್ತಿಗಳನ್ನು ಮಾಡಿಸುತ್ತಾಳೆ. ಈ ಶಾಸನವು ಇಷ್ಟು ಮಾತ್ರವೇ ಹೇಳಿ ಸುಮ್ಮನಾಗಿದ್ದರೆ ಇದೊಂದು ಸಾಮಾನ್ಯ ಶಾಸನವಾಗಿಬಿಡುತ್ತಿತ್ತು. ಮುಂದುವರೆದು ಈ ಶಾಸನ ಹೇಳುತ್ತದೆ 'ಮಡದಿಯರಾವಗಂ (ಕೆ)ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರಲ್ಲದೇಂ ಮ್ರಿಡನ ಸ್ವ ಪ್ರತಿಷ್ಠೆಯನೆ ಮಾಡಿಸಿ ಕಲ್ವೆಸದಿಂದೆ ಗೇಹಮಂ ಪಡವಿಯೊಳೊಪ್ಪೆ ಮಾಡಿಪರೆ ಸನ್ನುತೆ ವೆಂಣ್ಣಲೆಸೆಟ್ಟಿಕವ್ವೆವೊಲುಂ" ಎಂದು ಹೇಳುತ್ತದೆ. ಇದು ಆ ಕಾಲದ ಸಾಮಾನ್ಯ ತಿಳುವಳಿಕೆಯಾಗಿತ್ತು. ಹೆಣ್ಣಾದವಳೂ ಕೇವಲ ಅಡುಗೆಮನೆಗಷ್ಟೆ ಸೀಮಿತವಾಗಿದ್ದಳು. ಇಲ್ಲಿ ಹೆಸರಿಸಿರುವ ವಸ್ತುಗಳೆಲ್ಲವೂ ಅಡುಗೆಮನೆಗೆ ಸಂಬಂಧಿಸಿದುವೆ ಆಗಿವೆ. ಹೆಣ್ಣು ಇದನ್ನು ಮೀರಿ ಮುಂದೆ ಹೋಗಬೇಕೆಂಬುದು ಶಾಸನಕಾರರ ಆಶಯವಾಗಿದೆ. ಅದು ಯಾವ ರೀತಿಯೆಂದರೆ 'ವೆಂಣ್ಣಲೆಸೆಟ್ಟಿಕವ್ವೆವೊಲುಂ' ಎಂದು.ಆಧುನಿಕತೆಯ ಈ ಕಾಲಘಟ್ಟದಲ್ಲೇ ಇನ್ನೂ ಹೆಣ್ಣನ್ನು ಅಡುಗೆ ಮನೆಯಿಂದ ಪೂರ್ತಿಯಾಗಿ ಬಿಡಿಸುವುದು ನಮ್ಮಿಂದಾಗುತ್ತಿಲ್ಲ. ಇನ್ನೂ ಆ ಕಾಲಕ್ಕೆ ಇದು ಕ್ರಾಂತಿಕಾರಕ ವಿಚಾರವೇ ಹೌದು. ಮತ್ತು ಈ ಕ್ರಾಂತಿಕಾರರ ವಿಚಾರವನ್ನು ವೆಣ್ಣಲಸೆಟ್ಟಿಕ್ವೆಯು ಸಾಧಿಸಿಯು ಇದ್ದಳು. ವೆಣ್ಣಲಸೆಟ್ಟಿಕವ್ವೆಯಂತೆಯೇ ಸರ್ವಧರ್ಮಗಳನ್ನು ಸಮಾನವಾಗಿ ಆಳ್ವಿಕೆ ಮಾಡಿದಂತಹ ಇನ್ನೊಬ್ಬ ಮಹಿಳೆಯೆಂದರೆ ಮಾಳಲದೇವಿ. ಈಕೆಯು ವೀರನೊಳಂಬನ ಪತ್ನಿ.ಈಕೆಯ ಕುರಿತು ಶಾಸನವೊಂದು ಹೀಗೆ ಹೇಳುತ್ತದೆ[53].

**'ನೆಗಮ್ವಿತ್ತುಂಗ ಶಿವಾಲಯ ಪ್ರತತಿಯಾದಿತ್ಯಾಲಯಂ**
**ಸಾಲೆ, ವಿಷ್ಣುಗೃಹಂ ಬುದ್ಧವಿಹಾರ, ಮಹಾಭವನಂ ನಾಗಾಲಯಂ**
**ಬಾವಿ (ದಿ)ಗ್ಗಿದೆ ಶತ್ರಂ ಕೆರೆ ದೀಪ ಮಾಲೆಯನೆ**
**ನಾನಾ ಧರ್ಮಮಂ ಮಾಡಿಸಲ್ ಜಗದೊಳ್**
**ಮಾಳಲ ದೇವಿಯಂತು ಪೆರರಾರ್ನ್ನೋರ್ಂತಮ್ಮದಾದಾನಿಗಳ್'. . . . .**

**ಹೀಗೆ ಮಹಿಳೆಯರು ಕಟ್ಟಿಸಿದ ದೇವಾಲಯಗಳ ಇತರೆ ದಾಖಲೆಗಳೆಂದರೆ.**

**ಶ್ರೀ ಮನ್ಮದಾಪ್ರಧಾನ ಪೆರ್ಗ್ಗಡೆ ದೇವಪಯ್ಯನ ಸತಿ**

**ಚಾಮವ್ವೆ ಮಾಡಿಸಿಕೊಟ್ಟರೀ ಚಂದ್ರಪ್ರಭ ಜಿನಾಲಯ[54].**

**ಕಲ್ಲೂರಿನಲ್ಲಿ ಸಾತಿಕವ್ವೆ ಎನ್ನುವವಳು ಕೇಶವದೇವರ ದೇವಾಲಯ**

**ಕಟ್ಟಿಸಿದಾಗಿ ತಿಳಿಯುತ್ತದೆ[55].**

ಕ್ರಿ.ಶ. 1120ರ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನನ ಮಂತ್ರಿಯಾದ ಗಂಗರಾಜ ದಂಡಾದೀಪನ ಮಡದಿ ಲಕ್ಷ್ಮಿದೇವಿಯ ಸಹೋದರಿಯನ್ನು ಕುರಿತಂತೆ ಒಂದು ಶಾಸನವು ಬೆಳಕು ಚೆಲ್ಲುತ್ತದೆ.

**'ರಾಜಮಾನ ರಾಜಹಂಸ ವತಿತಾ ಕಲ್ಪೆಯಂ**

**ಪರಮ ಜಿನಮತ ಪರಿತ್ರಾಣಕರಣ**

**ರಣೀಭೂತ ಜಿನಾಶಾಸನ ದೇವತಾಕಾರಕಲ್ಪೆ**

**ಯುಂ ಅಭಿರಾಮ ಗುಣಿವಶೀಕರಣಿ**

**ಯು ತಾನು ಕರಣೀಯಧರಣಿ ಸುತೆಯಂ**

**ಶ್ರೀ ಸಾಹಿತ್ಯ ಸತ್ಯಾಪಿತಕ್ಷಿರೋದಪು**

**ತೆಯುಂ ಮೆನಿಸಿದ ದೇವಿಯಕ್ಕಂ[56].**

ಎಂದು ಶಾಸನವು ಹೇಳುತ್ತದೆ. ಇಲ್ಲಿ ಕೇವಲ ಆಕೆಯ ಧಾರ್ಮಿಕತೆಯನ್ನು ಮಾತ್ರವೇ ಹೇಳದೆ ಆಕೆಯ ಸಾಹಿತ್ಯ– ಶಿಕ್ಷಣ ಪ್ರೇಮಕುರಿತಂತೆಯೂ ಹೇಳಲಾಗಿದೆ.

ಹೀಗೆ ದೇವಾಲಯ ಕಟ್ಟಿಸುವುದು ಮತ್ತು ಧರ್ಮವನ್ನು ಕುರಿತ ಸಾಮರಸ್ಯವನ್ನು ಬೆಳೆಸುವುದಷ್ಟೇ ಅಲ್ಲದೇ ಅನೇಕ ಮಹಿಳೆಯರು ಸಮಯ ಬಂದಾಗ ತಮ್ಮ ಸಮಯದ ಪರನಿಂತು ಹೋರಾಡಿದ್ದೂ ಉಂಟು. ಪೋಡಶಗಣದಲ್ಲಿ ಗುಡ್ಡವ್ವೆ ಎಂಬ ಶರಣೆಯ ಹೆಸರು ಬರುತ್ತದೆ. ಈಕೆಯು ವೈಷ್ಣವರು ಕಿತ್ತೊಗೆದ ಅಣುಪುರದ 'ಬಾಲಬ್ರಹ್ಮೇಶ್ವರ ಲಿಂಗ'ವನ್ನು ತನ್ನ ಪೋಡಶಗಣದ ಸಹಾಯದಿಂದ ಪುನಃ ಸ್ಥಾಪಿಸುತ್ತಾಳೆ[57]. ಮತ್ತು ಈ ವೀರ ಮಹಿಳೆಯ ಕುರಿತಂತೆ ತಾಳಿಕೋಟೆ, ಇಂಗಳಗಿ ಮುಂತಾದ ಹಲವು ಕಡೆಯ ಶಾಸನಗಳಲ್ಲಿ ಮಾಹಿತಿಸಿಗುತ್ತದೆ. ಈಕೆಯಂತೆಯೇ ಧರ್ಮವೀರೆಯಾದ ಇನ್ನೊಬ್ಬಾಕೆಯೆಂದರೆ ಪರಿಯಳಿಗೆಯ ವೈಜಕವ್ವೆ. ಈಕೆಯು ಶಿವಭಕ್ತಗಳಾಗಿದ್ದರೂ ಕೂಡ ಅನಿವಾರ್ಯ ಪ್ರಸಂಗವೊಂದರಲ್ಲಿ ಜಿನಭಕ್ತನೊಬ್ಬನನ್ನು ಗಂಡನಾಗಿ ಪಡೆಯುತ್ತಾಳೆ. ಈತ ಈಕೆಗೆ ಹಲವಾರು ತೊಂದರೆಗಳನ್ನು ಕೊಡುತ್ತಾನೆ. ಇದನ್ನು ಆಕೆಯು ಶಿವನಲ್ಲಿ ಮೊರೆಯಿಡಲು ಊರ ಬಸದಿಯ ಬಾಗಿಲು ಮುಚ್ಚುತ್ತದೆ. ಯಾರು ಎಷ್ಟೇ ಪ್ರಯತ್ನಿಸಿದರೂ ತೆಗೆಯದ ಬಾಗಿಲು ಇವಳ ಹಸ್ತಸ್ಪರ್ಶದಿಂದ ತೆಗೆಯುತ್ತದೆ. ಆಗ ಜಿನಬಿಂಬ ಒಡೆದು ಉದ್ಭವಿಸಿದ ಶಿವಲಿಂಗದಲ್ಲಿ ಐಕ್ಯವಾದಳು

ಎಂದು ಪುರಾಣದ ಕತೆಯಿದೆ[58]. ಬಹುಶಃ ಇದು ಹೀಗೆ ನಡೆದಿರಬಹುದು. ಈಕೆಗೆ ಜೈನನು ಕಿರುಕುಳ ಕೊಟ್ಟ ಕಾರಣಕ್ಕೆ, ಈಕೆಯು ತನ್ನವರೊಂದಿಗೆ ಬಂದು ಅಲ್ಲಿಯ ಜಿನಾಲಯದ ಜಿನನನ್ನು ಕಿತ್ತೊಗೆದು ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿರಬಹುದು. ಧರ್ಮಾಮೃತದಲ್ಲಿಯೂ ಈಕೆಯ ಕತೆಯು ಇದೆಯಾದರೂ ಅಲ್ಲಿ ಬೇರೆಯದೇ ರೂಪದಲ್ಲಿ ಸಿಗುತ್ತದೆ.

ಮತ್ತು ಮಹಿಳೆಯರು ಕೇವಲ ಧರ್ಮವೀರರು ಮಾತ್ರವೇ ಆಗಿರದೇ ರಾಜಕೀಯವಾಗಿಯೂ ಸಾಕಷ್ಟುಪ್ರಬಲರಾಗಿದ್ದರು.

ಜಯಸಿಂಹನು ಚೋಳರೊಂದಿಗೆ ಯುದ್ಧದಲ್ಲಿ ತೊಡಗಿದ್ದಂತ ಸಮಯವನ್ನು ನೋಡಿಕೊಂಡು, ಗೋಕಾಕ್ ಕೋಟೆಯ ಅಧಿಪತಿಯಾದ ಬರಮನು ಬಂಡೇಳುತ್ತಾನೆ. ಇವನನ್ನು ಅಕ್ಕಾದೇವಿ ಎನ್ನುವಾಕೆಯು ಸೋಲಿಸುತ್ತಾಳೆ. ಅವಳನ್ನು ಕುರಿತ 1072ರ ಬೇಲೂರು ಶಾಸನ.

**'ಶ್ರೀವನಿತೆಯೆನಿಸಿದ ಅಕ್ಕಾದೇವಿಗೆ. . . .**
**. . . . ರಣ ಭೈರವಿಯೆನೆ ಶೌರ್ಯದ ಗುಣವುನದೇನೆಂದು**
**ಬಣ್ಣಿಪೆಂ ನೃಪಸುತೆಯೊ[59].**
**ಎಂದು ಶಾಸನವು ಆಕೆಯನ್ನು ವರ್ಣಿಸುತ್ತದೆ.**

ಈ ರೀತಿಯಾಗಿ ಮಹಿಳೆಯರು ರಾಜಕೀಯವಾಗಿಯೂ, ಧಾರ್ಮಿಕವಾಗಿಯೂ, ಸಾಮಾಜಿಕವಾಗಿಯೂ ಪ್ರಾಚೀನ ಕರ್ನಾಟಕದಲ್ಲಿ ಉತ್ತಮ ಸ್ಥಿತಿಯಲ್ಲಿದ್ದರು ಎನ್ನಬಹುದು. ಆದರೂ ಆಗಿನಿಂದ ಈಗಿನವರೆಗೂ ಇತಿಹಾಸವು ಒಂದೇ ಅಳತೆಯಲ್ಲಿ ಮುಂದುವರೆದು ಬಂದಿಲ್ಲವೆಂಬುದನ್ನು ನಾವು ಗಮನಿಸಬೇಕಾಗುತ್ತದೆ. ಇದಕ್ಕೆ ಹೊಂದಿಕೊಂಡಂತೆಯೇ ಮಹಿಳೆಯ ಸ್ಥಿತಿಗತಿಗಳೂ ಸಹ ಏರುಪೇರಾಗುತ್ತಾ ಸಾಗಿ ಬಂದಿವೆ. ಸಧ್ಯದ ಸ್ಥಿತಿಯಲ್ಲಿ ಮಹಿಳೆಯರು ಉತ್ತಮವಾದ ವಾತಾವರಣಕ್ಕೆ ಇನ್ನೂ ಸಾಗಬೇಕಿದೆ.

**ಅಡಿ ಟಿಪ್ಪಣಿಗಳು**

1. ವಚನಕಾರರ ದೃಷ್ಠಿಯಲ್ಲಿ ಸ್ತ್ರೀ, ಶೈಲಜಾ ಉಡಚಣ
2. ಬೇಂದ್ರೆ ಸಾಹಿತ್ಯ ಅಧ್ಯಯನ ,ಸ್ತ್ರೀ ï 1 ಅಧ್ಯಾಯ – ಪು ï 6
3. ಡಿ.ಡಿ. ಕೋಸಂಬಿ – ಅನು ವೇಣುಗೋಪಾಲ್ ಮತ್ತು ಶೈಲಜಾ ï 2003 ಒಯ ï 91.
4. ವಚನಕಾರರ ದೃಷ್ಠಿಯಲ್ಲಿ ಸ್ತ್ರೀ, ಶೈಲಜಾ ಉಡಚಣ
5 . ವಚನಕಾರರ ದೃಷ್ಠಿಯಲ್ಲಿ ಸ್ತ್ರೀ, ಶೈಲಜಾ ಉಡಚಣ, ಪುಟ 8.
6. ಮನುಸ್ಮೃತಿ ï 5 ï 158.
7. ಮನುಸ್ಮೃತಿ ï 5 ï 168.
8. ಮನುಸ್ಮೃತಿ ï 5 ï 148.
9. ಹರಿಹರನ ಕಾವ್ಯದಲ್ಲಿ ಸ್ತ್ರೀ ಪಾತ್ರ ದರ್ಶನ, ಅಧ್ಯಾಯ 10
10. ವಿವಾಹ ಒಂದು ಅಧ್ಯಯನ, ಗಂಗರಾಂ ಚಂಡಾಳ, ಪುಟ–
11. ಕನ್ನಡ ಕಾವ್ಯ ಕಂಡ ಹೆಣ್ಣು ï ಡಾ.ಸಿ.ವೀರಣ್ಣ.
12. ಕ.ಶಾ. ಸಾ. ಅ. ï ಚಿದಾನಂದ ಮೂರ್ತಿ ï ಪು ï 91.
13. ಕ.ಶಾ. ಸಾ. ಅ. ï ಚಿದಾನಂದ ಮೂರ್ತಿ ï ಪು ï 81.
14. ಎಕ – ಸಂ–2 ಶ್ರಬೆ, ಪುಟ ï 203, 10ನೇ ಶತಮಾನ (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)
15. ಎಕ, 2–ಶ್ರ.ಬೆ, 484, ಕ್ರಿ.ಶ. 1119 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)
16. ಎಕ– 8 , ಸುಳ್ಳಗೋಡ, 2ನೇ ಶತಮಾನ (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)
17. ಇ.ಆಯ್, ಸಂ–13, ಕೊಲ್ಲಾಪುರ – ಪು–102 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)
18. ಎಮ್.ಎ.ಆರ್, 1942, ಕ್ರಿ.ಶ. 1013 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)
19. ಎ.ಕ. ಸಂ–2, ಶ್ರ.ಬೆ, 378, ಕ್ರಿ.ಶ. 1118 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)

20. ಎ ಕ 5. ಪು.272, ವರಕೋಡು.

21. ಎ ಕ 5. ಪು.300, ಹಡಜನ ï ಕ್ರಿ.ಶ. 1384.

22. ಎ ಕ 5. ಪು.15, ಚಿಕ್ಕಹನಸೋಗೆ.

23. ಬೀದರ್ ಜಿಲ್ಲೆ ಶಾಸನಗಳು, ಅಳವಾಯಿ, ಪು–104, ಕ್ರಿ,ಶ, 1077.

24. ವಿವಾಹ ಒಂದು ಅಧ್ಯಯನ, ಗಂಗರಾಂ ಚಂಡಾಳ, ಪುಟ–22

25. ರಾಜಾವಳೀ ಕತಾಸಾರ, ದಶಮಾಧಿಕಾರ, ಪು 229

26. ವಿವಾಹ ಒಂದು ಅಧ್ಯಯನ, ಗಂಗರಾಂ ಚಂಡಾಳ, ಪುಟ– 20.

27. ಬೃಹದಾರಣ್ಯಕ ಉಪನಿಷದ್ – ನಾಲ್ಕನೆಯ ಅಧ್ಯಾಯ.

28. ರಾಜಾವಳಿ ಕತಾಸಾರ, ನವಮಾಧಿಕಾರಂ, ಪು ï 157.

29. ಎ.ಕ. 11. ಕಾರಬೇಲೆ, ಬಂಗಾರಪೇಟೆ, ಪು ï 75, ಕ್ರಿ,ಶ, 0000.

30. ನಿರ್ವಿಚಿಕಿತ್ಸೆ ಕತೆ, ಧರ್ಮಾಮೃತ

31. ಭಾರತೀಯ ಸಂಸ್ಕೃತಿ ï ವೀರಶೈವ ಧರ್ಮ.

32. ರಹಮತ್ ತರೀಕೆರೆ ï ಕರ್ನಾಟಕದ ಮಹಿಳಾ ಸೂಫಿಗಳು ï ಕನ್ನಡದೊಳ್ ಭಾವಿಸಿದ ಜನಪದ – ಪುಟ ï 150.

33. ರಹಮತ್ ತರೀಕೆರೆ ï ಕರ್ನಾಟಕದ ಮಹಿಳಾ ಸೂಫಿಗಳು ï ಕನ್ನಡದೊಳ್ ಭಾವಿಸಿದ ಜನಪದ – ಪುಟ ï 150.

34..

35..

36. ತಿರುನೀಲನಕ್ಕರ ರಗಳೆ, ಮಹಾಕವಿ ಹರಿಹರನ ಪುರಾತನ ಶರಣರು

37. ನೂತನ ಪುರಾತನರ ರಗಳೆ – ಪುಟ –228 (ಹರಿಹರನ ಕಾವ್ಯದಲ್ಲಿ ಸ್ತ್ರೀಪಾತ್ರ ದರ್ಶನ, ಅಧ್ಯಾಯ 8)

38. ನೂ.ಪು. ರಗಳೆ (ಹರಿಹರನ ಕಾವ್ಯದಲ್ಲಿ ಸ್ತ್ರೀಪಾತ್ರ ದರ್ಶನ, ಅಧ್ಯಾಯ 10)

39. ನೂ.ಪು. ರಗಳೆ (ಹರಿಹರನ ಕಾವ್ಯದಲ್ಲಿ ಸ್ತ್ರೀಪಾತ್ರ ದರ್ಶನ, ಅಧ್ಯಾಯ 10)

40. ಹಳಗನ್ನಡ ಸಾಂಸ್ಕೃತಿಕ ಪದಕೋಶ, ಪ್ರೋ ಕೇಶವ ಶರ್ಮ

41. ವಾಗೀಶ್ವರದೇವರ ರಗಳೆ, ಹರಿಹರನ ರಗಳೆಗಳು

42. ಅಷ್ಟಮಾಧಿಕಾರ, ರಾಜಾವಳೀ ಕತಾಸಾರ

43. ಅಮೂಢ ದೃಷ್ಟಿತ್ವ ಕತೆ, ಧರ್ಮಾಮೃತ

44. ನಿಷ್ಕಾಂಕ್ಷೆ ಕತೆ ï ಧರ್ಮಾಮೃತ

45. ಉದ್ಯೋಗ ಪರ್ವ ï ಮಹಾಭಾರತ (ವಿವಾಹ ಒಂದು ಅಧ್ಯಯನ, ಗಂಗರಾಂ ಚಂಡಾಳ)

46. ಸಮಯ ಪರೀಕ್ಷೆ 5–64?

47. ಸ್ತಿತೀಕರಣ ಕತೆï ಧರ್ಮಾಮೃತ

48. ಸುಕುಮಾರಸ್ವಾಮಿಯ ಕತೆï ವಡ್ಡಾರಾಧನೆ.

49. ಸಪ್ತಮಾಧಿಕಾರಂ, ರಾಜಾವಳೀ ಕತಾಸಾರ, ಪು 114

50. ಸಮಯ ಪರೀಕ್ಷೆ, 5–60?

51. ಸಂಕೀರ್ಣ ಸಂಕಲನಗಳು, ಸಂಪುಟ 4, ಮಹಿಳಾ ಸಂಶೋಧನೆ, ಸಂ ï ಮಹೇಶ್ ಚಿಂಬಗಿ

52. ಕೆ.ಇ. 14, ಕ್ರಿ.ಶ. 1204, ಪುಟ ï 8–9. (ಸಂಕೀರ್ಣ ಸಂಕಲನಗಳು, ಸಂಪುಟ 4, ಮಹಿಳಾ ಸಂಶೋಧನೆ)

53. ಎಸ್. ಆಯ್.ಆಯ್. ಸಂಪುಟ – ಪು ï 49, ಕ್ರಿ.ಶ. 1076.(ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)

54. ಮ.ಕ.ಶಾ. ಪುಟ ï 67, ಗಂಡಹಿಂಗ್ಲಜ.

55. ಕಲ್ಲೂರು, ರಾಯಚೂರು – ಪುಟ ï 690, 1142.

56. ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ, ಈರಣ್ಣಪತ್ತಾರ, ಪುಟ ï 244 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)

57. ಶಾಸನಗಳಲ್ಲಿ ಶಿವಶರಣರು ï ಎಂ.ಎಂ. ಕಲಬುರ್ಗಿ, ಪು ï 41.

58. ಶಾಸನಗಳಲ್ಲಿ ಶಿವಶರಣರು ï ಎಂ.ಎಂ. ಕಲಬುರ್ಗಿ, ಪು ï 41.

59. ಎ.ಇ. ಸಂ–15, ಪುಟ ï 76 ï 1072 (ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಬಾಬುರಾಯ. ಡಿ)

ಧರ್ಮವೆಂಬುದು ಪ್ರಶ್ನೆಗಳಿಂದ ಕೂಡಿದುದು.ಅದು ಪ್ರಶ್ನೆಗಳಿಂದಲೇ ಮೊದಲಾಗುತ್ತದೆ. ಆ ಪ್ರಶ್ನೆಗಳಿಗೆ ನೈತಿಕವೆಂದು ಭಾವಿಸಿದ ಮಾರ್ಗಗಳಿಂದ ಉತ್ತರ ಕಂಡುಕೊಳ್ಳುವುದೇ ಧಾರ್ಮಿಕ ಪಠ್ಯಗಳ ಬುನಾದಿ. ಧರ್ಮದ ಬೆಳವಣಿಗೆಯನ್ನು ಅಥವಾಧರ್ಮದ ಸ್ವರೂಪವನ್ನು ಮೂರುರೀತಿಯಲ್ಲಿಗುರುತಿಸಬಹುದು. ಅವುಗಳು ಆಚರಣೆ– ಪಂಥ– ಮತಧರ್ಮ. ಆಚರಣೆಗಳೆಂದರೆ ನೈತಿಕ ಪಠ್ಯಗಳು ಯಾವುದೇ ಬಂಧಕ್ಕೊಳಪಟ್ಟ ಹೆಸರಿನಲ್ಲಲ್ಲದೆ ವಿಸ್ತಾರವಾಗಿ ಜನರಜೀವನದಲ್ಲಿ ಹರಡಿಕೊಂಡಿರುತ್ತವೆ. ಪ್ರತಿಯೊಂದು ಆಚರಣೆಯು ತನ್ನದೇ ಹಿಂದಿನ ಉದ್ದೇಶವನ್ನು ಒಳಗೊಂಡಿರುತ್ತದೆ. ಮತ್ತು ಕೆಲವೊಮ್ಮೆ ಅವುಗಳಿಗೆ ಒಂದೊಂದಕ್ಕೆ ದೇವತೆಗಳ ಆರೋಪಣೆಯೂ ಇರುತ್ತದೆ. ಪಂಥವೆಂಬುದು ಒಂದು ಸಾಂಸ್ಥಿಕ ರೀತಿಯ ಚೌಕಟ್ಟಿಕೊಳಪಟ್ಟು, ನಿರ್ದಿಷ್ಠ ಆಚರಣೆಗಳಿಂದ ಕೂಡಿರುತ್ತದೆ. ಮತಧರ್ಮವೆಂಬುದು ಈ ಎರಡನ್ನೂ ಒಳಗೊಂಡಂತದು. ಬಹುತೇಕ ಧರ್ಮಗಳಿಗೆ ಪಂಥಗಳೇ ಮುನ್ನುಡಿಯಾಗಿರುತ್ತವೆ.

ಒಂದುಕಾಲದಲ್ಲಿಧರ್ಮದ ವ್ಯಾಪ್ತಿ ವಿಶಾಲವಾಗಿತ್ತು. ಕಾನೂನು, ಅರ್ಥ, ರಾಜಕೀಯ, ಕಲೆ, ವಿಜ್ಞಾನ ಮುಂತಾದವುಗಳೆಲ್ಲವೂ ಅದರ ವ್ಯಾಪ್ತಿಯಲ್ಲಿದ್ದವು. ಸಾಮಾನ್ಯ ಅರ್ಥದಲ್ಲಿ ಅದರ ಹಿಡಿತದಲ್ಲಿದ್ದವು. ಇವೇ ಮುಂತಾದ ಎಲ್ಲಾ ವಿಷಯಗಳಲ್ಲಿಯೂ ಅದುತನ್ನ ಹಸ್ತಕ್ಷೇಪವನ್ನು ಆರಂಭಿಸಿದ್ದರಿಂದ, ಅನೇಕ ಕ್ರಾಂತಿಗಳಿಗೆ ಕಾರಣವಾಯಿತು. ಈ ಕ್ರಾಂತಿಯ ಹರಡುವಿಕೆಯು ತನ್ನ ಸುದೀರ್ಘ ಇತಿಹಾಸವನ್ನು ಕ್ರಿಪೂ 6ನೇ ಶತಮಾನದಿಂದ, ಕ್ರಿಶ 6ರವರೆಗೆ ಹೊಂದಿದೆ. ಈ ಸಮಯದಲ್ಲಿಯೇ ಜಗತ್ತು ಅನೇಕ ಧರ್ಮಗಳ ಹುಟ್ಟುವಿಕೆಗೆ ಸಾಕ್ಷಿಯಾಯಿತು. ಈ ಸಮಯದಲ್ಲಿಯೇ ವೈಚಾರಿಕತೆಯುತನ್ನ ಕೊಂಬೆಗಳನ್ನು ಸತ್ವದಲ್ಲಿಯೂ ಸಂಖ್ಯೆಯಲ್ಲಿಯೂ ವಿಸ್ತರಿಸಿಕೊಂಡಿತು. ಇಂದು ಜಗತ್ತಿನಲ್ಲಿ ಗುರುತಿಸಬಹುದಾದ ದೊಡ್ಡವು ಎಂದು ಕರೆಯಿಸಿಕೊಳ್ಳುವ ಧರ್ಮಗಳ ತವರುಕಾಲವಿದು.

ಧರ್ಮದಲ್ಲಿ ಪ್ರಮುಖವಾಗಿ ಗುರುತಿಸಬಹುದಾದದ್ದು ಅರ್ಥದ ಅಸ್ತಿತ್ವ. ಇದು ಯಾವತ್ತು ಕಮ್ಮಿಯಿಲ್ಲದಂತೆ ಧರ್ಮದಲ್ಲಿ ತನ್ನ ಪ್ರಭಾವವನ್ನು ಹೊಂದಿದೆ. ಮತ್ತೊಂದು ರಾಜಕೀಯ. ಪ್ರಾಚೀನ ಭಾರತದಲ್ಲಿಯೂ ಸಹ ಅರ್ಥವನ್ನು ಧರ್ಮದ ಚೌಕಟ್ಟಿನಲ್ಲೇ ಪ್ರಯತ್ನಿಸಲಾಗಿದೆ[1]. ಧರ್ಮ–ಅರ್ಥ–ಕಾಮ–ಮೋಕ್ಷ ಈ ಕ್ರಮವೂ ಅರ್ಥದ ಮಹತ್ವವನ್ನು ಅರಿಯುವಲ್ಲಿ ಸಹಕಾರಿ. ಧರ್ಮದ ಕುರಿತ ವ್ಯಾಖ್ಯಾನವೊಂದರಲ್ಲಿ ತಿರುವಳ್ಳುವರ್ ಸಹ ಇದನ್ನೇ ಅನುಮೋದಿಸುತ್ತಾರೆ. ಅವರ ಪ್ರಕಾರ "ಸಂಪತ್ತಿನ ಸಮಾನ ವಿತರಣೆಯಿಂದ ಮಾತ್ರಆರ್ಥಿಕಶಾಂತಿ ನೆಲೆಸಲು ಸಾಧ್ಯ. ಸಂಪತ್ತನ್ನು ಸಮಾನವಾಗಿ ಹಂಚಲು ಸಾಧ್ಯವಾಗುವ ಅರ್ಥವ್ಯವಸ್ಥೆಯೊಂದನ್ನು ರೂಪಿಸಿವುದು ನಿಜವಾದ ಧರ್ಮ"[2]ಎನ್ನುತ್ತಾರೆ. ಕ್ರಿಪೂ 3000 ಸಾವಿರದಿಂದ ಅಸ್ತಿತ್ವದಲ್ಲಿ ಇದ್ದಿರಬಹುದಾದ ಹಿಬ್ರೂಗಳ ಅರ್ಥವ್ಯವಸ್ಥೆಯೂ ಸಹ ಧರ್ಮದ ನೈತಿಕತೆಗೆ ಮಹತ್ವ ನೀಡಿತ್ತು.ಅಲ್ಲಿ ಬಡವರನ್ನುದೋಚಬಹುದಾದ ಬಡ್ಡಿ ವ್ಯವಹಾರ, ಲಾಪದ ವ್ಯಾಪಾರ ಮುಂತಾದವು ನಿಷೇಧಿತವಾದಂತೆ ಬದುಕಿದ್ದವು[3].ಗ್ರೀಕರಅರ್ಥವ್ಯವಸ್ಥೆಯೂ ಸಹ ಇದಕ್ಕೆ ಹೊರತಲ್ಲ. ಅವರುಅರ್ಥಶಾಸ್ತ್ರ ಮತ್ತು ನೀತಿಶಾಸ್ತ್ರದ ಅಂಗವಾಗಿ ಪರಿಗಣಿಸಿದ್ದರು. ಪ್ಲೆಟೋನ ಆದರ್ಶ ರಾಜ್ಯದಧರ್ಮವು ಸಂಪತ್ತಿನ ಸಮಾನ ವಿರತಣೆಯನ್ನು ನಂಬಿತ್ತು[4].

ಇವೆಲ್ಲವೂಅರ್ಥಕ್ಕೆ ಇಷ್ಟು ಮಹತ್ವವನ್ನು ಕೊಡುತ್ತವೆಂದಾದರೆ, ಸಮಾಜವನ್ನು ಸ್ವಸ್ಥವಾಗಿಡುವಲ್ಲಿ ಅದರ ನಿರ್ವಹಣೆಯು ಅಷ್ಟೇ ಪ್ರಾಮುಖ್ಯತೆಯಿಂದ ಕೂಡಿರಬೇಕು. ಕ್ರಿಪೂ 6ನೇ ಶತಮಾನದ ನಂತರದ ಬೆಳವಣಿಗೆಗಳು ಇದರಲ್ಲಿ ಹೊಸದಾಗಿ ಕೂಡಿಕೊಂಡವು. ಇದೇ ಶತಮಾನದಲ್ಲಿ ರೋಮ್ ಸಾಮ್ರಾಜ್ಯವು ವಿಸ್ತರಣೆಗೆ ಮುಂದಾಯಿತು. ಗುಲಾಮರ ವಿತರಣೆಯು ಹೆಚ್ಚಿದ್ದು ಈ ಕಾಲದಲ್ಲಿಯೇ. ಈ ವಿಸ್ತಾರದಿಂದಾಗಿ ಅದು ಅನೇಕ ಗುಂಪುಗಳ ಆಚರಣೆಯನ್ನು ತನ್ನೊಳಗೆ ಹೊಂದಿತು. ಒಂದು

ಮತ್ತೊಂದರ ಪ್ರಭಾವದಿಂದಾಗಿ ಧಾರ್ಮಿಕ ಆಚರಣೆಗಳು ಹೆಚ್ಚುತ್ತಾ ಹೋದವು. ಜೀವನದ ಪ್ರತಿಯೊಂದು ಘಟನೆಗಳಿಗೂ ದೇವತೆಗಳು ಹುಟ್ಟತೊಡಗಿದರು. ಗ್ರೀಕ್ ಮತ್ತುರೋಮ್ ಮಧ್ಯೆ ಈ ದೇವತೆಗಳ ಅದಲುಬದಲು ಸಹ ನಡೆಯಿತು[5]. ಆಚರಣೆಗಳ ಹೆಚ್ಚಾದಂತೆ ನಂಬಿಕೆಗಳೂ ಮೂಢನಂಬಿಕೆಗಳು ಅಧಿಕವಾಗತೊಡಗಿದವು. ಕೆಲವೊಮ್ಮೆ ಆಯಾ ದೇಶಗಳು ಇಂತಹ ವಿಪರೀತಗಳನ್ನು ತಡೆಯಲು ತನಗೆ ಏನು ಸಾಧ್ಯವೋ ಅಷ್ಟನ್ನು ಮಾಡಿತು. ಅವುಗಳನ್ನು ಮೂಢನಂಬಿಕೆಗಳೆಂದು ಕರೆಯಿತು. ಆದರೆ ಅದು ಜನರ ಗಾಢ ಧರ್ಮಶ್ರದ್ಧೆಯನ್ನು ಸಮಾಜದ ಮತ್ತು ಸರ್ಕಾರದ ಸುಭದ್ರತೆಯನ್ನು ಹೆಚ್ಚಿಸಲು ಚೆನ್ನಾಗಿಯೇ ಉಪಯೋಗಿಸಿಕೊಂಡಿತು[6]. ದೇವತೆಗಳು ಹೆಚ್ಚಾದಂತೆ ಅಧೀಕೃತ ಪರೋಹಿತರುಗಳು ಹುಟ್ಟಿದರು. ಇದರ ದೀರ್ಘಕಾಲದ ನಂಬಿಕೆಯಲ್ಲಿ ಕ್ರಮೇಣ ರೋಮಿನ ಸುಶೀಕ್ಷಿತ ಜನತೆಯನ್ನು ಏಕದೇವ ನಂಬಿಕೆಗಳಾದ ಸ್ಟೋಯಿಸಿಸಂ, ಜುದಾಯಿಸಂ, ಕ್ರೈಸ್ತಿಸಂಗಳಿಗೆ ಸಿದ್ಧಗೊಳಿಸಲಾಯಿತು[7].

ಈ ಕಾಲದಲ್ಲಿಯೇ ಹಲವು ಹೊಸ ಹೊಸ ಮತಪಂಥಗಳು ಭಾರತದಲ್ಲಿ ಜನ್ಮತಾಳಿದವು. ಪ್ರಮುಖವಾಗಿ ಉತ್ತರಭಾರತದಲ್ಲಿ. ಅದೂ ಸಹ ಗಂಗಾ ಬಯಲಲ್ಲಿ. ಈ ಮತಧರ್ಮಗಳ ಉದಯಕ್ಕೆ ಮೂಲಕಾರಣ, ಈಶಾನ್ಯಭಾರತದಲ್ಲಿ ರೂಪಗೊಂಡ ನವೀನ ಕೃಷಿವ್ಯವಸ್ಥೆ[8]. ಭಾರತದ ಇತಿಹಾಸದಲ್ಲಿ ತೀವ್ರತರದ ಸಂಘರ್ಷಗಳು ಕಾಣಿಸಿಕೊಳ್ಳುವುದು ಇವಾಗಲೇ. ಒಂದೇ ಮಾತಿನಲ್ಲಿ ಹೇಳುವುದಾದರೆ ಕೃಷಿವ್ಯವಸ್ಥೆಗೂ ಯಜ್ಞವ್ಯವಸ್ಥೆಗೂ ನಡುವೆ ಸಂಘರ್ಷಎದುರಾಯಿತು. ಇದರೊಟ್ಟಿಗೆ ಬೆಸೆದುಕೊಂಡ ಇನ್ನಿತರ ಅಂಶಗಳಿಂದ ವೈಚಾರಿಕತೆಯ ವಿವಧ ಮಾರ್ಗಗಳು ಮತಗಳ ಹೆಸರಲ್ಲಿ ಹುಟ್ಟತೊಡಗಿದವು. ಸ್ವೀಕೃತ ವ್ಯವಸ್ಥೆಗಳ ಬಗ್ಗೆ ಅನುಮಾನಗಳು ಶುರುವಾದವು. ಈ ಕಾಲದಲ್ಲಿ ಅನೇಕ ವಾದಗಳು ಪ್ರಚುರವಿದ್ದವು. ಪರಲೋಕ, ಸತ್ತನಂತರ ಅಸ್ಥಿತ್ವ, ಕರ್ಮ, ಕರ್ಮಫಲ ಮುಂತಾದವು[9]. ಮತ್ತಿವು ಎಷ್ಟರಮಟ್ಟಿಗಿನ ಜಗಳಗಳೆಂದರೆ ಒಂದೇ ತಾತ್ವಿಕತೆಯ ಪಂಥಗಳೂ ಕೂಡ ವಿಭಿನ್ನ ವಾದಗಳನ್ನು ಹೂಡುತ್ತಿದ್ದವು. ಆ ಕಾಲದಎಲ್ಲಾ ವಾದಗಳನ್ನು ತನ್ನದೇ ನೆಲೆಯಲ್ಲಿ ಚರ್ಚಿಸಿದ ಬುದ್ದನು ಕೆಲವು ವಿಷಯಗಳನ್ನು ಚರ್ಚಿಸಲೂ ಸಹ ನಿರಾಕರಿಸಿದನು. ಅವುಗಳೆಂದರೆ[10]–

1. ಈ ವಿಶ್ವ ಶಾಶ್ವತವೋಅಲ್ಲವೋ
2. ಆತ್ಮ ಮತ್ತುದೇಹಒಂದೇ ಹೌದೋಅಲ್ಲವೋ
3. ಕರ್ಮ, ಪುನರ್ಜನ್ಮ ಮುಂತಾದವುಇರುವವೋಇಲ್ಲವೋ
   ಇವೇ ಮುಂತಾದವುಗಳು.

ಆ ಯುಗವನ್ನು ಕೆಲವು ಮಾತುಗಳ ಮೂಲಕ ಹೀಗೆ ವಿವರಿಸಬಹುದು–

ಧರ್ಮವು ಎಲ್ಲಾ ಕಾಲದಲ್ಲಿಯೂ ಧರ್ಮವೇ ಆಗಿರುವುದಿಲ್ಲ. ಮತ್ತು ಧರ್ಮ ಸಂಬಂಧೀ ಅನಾಹುತಗಳೆಲ್ಲವಕ್ಕು ಯಾವಾಗಲೂ ಧರ್ಮವೇ ಕಾರಣವಾಗಿರುವುದಿಲ್ಲ. ಆ ಕಾಲದ ಭಾರತದ ಪರಿಸ್ಥಿತಿಯನ್ನು ನೋಡಿದರೆ, ಎಲ್ಲವಕ್ಕೂ ವೇದಗಳನ್ನು ಆರೋಪಿಸಲಾಗುತ್ತಿತ್ತು ಮತ್ತು ಎಲ್ಲರಿಂದಲೂ ವೇದಗಳನ್ನು ಮುಚ್ಚಿಡಲಾಗಿತ್ತು. ಮತ್ತು ಈ ಎಲ್ಲವೂ ಧರ್ಮದ ಹೆಸರಿನಲ್ಲಿಯೇ ನಡೆಯುತ್ತಿದ್ದವು. ಈ ಮುಂಚೆಯೆ ಅರ್ಥದ ಬಗ್ಗೆ ಹಿಂದೊಮ್ಮೆಯೆ ನಾವು ಮಾತಾಡಿದೆವು. ಅದನ್ನೀಗ ವಿಸ್ತಾರವಾಗಿ

ಮುಂದುವರೆಸೋಣ. ಉತ್ತರದ ಬಯಲುಗಳಲ್ಲಿ ಯಾವಾಗ ಕೃಷಿಯು ಬಲಯುತವಾಗಿ ಶ್ರೀಮಂತವಾಯಿತೋ, ಆಗ ನಾಗರೀಕತೆಯ ಆವರಣವು ಸಿಂಧೂ ನದಿಯಿಂದ ಗಂಗಾ ನದಿಗೆ ಬದಲಾಯಿತು. ರಾಜರು ಮತ್ತು ಪುರೋಹಿತರು ವಿಪರೀತವಾಗಿ ತಮ್ಮ ಸುಖಜೀವನವನ್ನು ಸೃಷ್ಠಿ ಮಾಡಿಕೊಂಡರು. ಈ ಇಬ್ಬರ ಕಾರಣದಿಂದಾಗಿಯೇ ಅಂದಿನ ಸಮಾಜದಲ್ಲಿ ಶಾಂತಿಯುತವಾಗಿ ಇರಬಹುದಾದ ವ್ಯವಸ್ಥೆಯೊಂದು ನಾಗರೀಕತೆಗೂ ತನಗೂ ಸಂಬಂಧವೇ ಇಲ್ಲದಂತೆ ಬದುಕಬೇಕಾಯಿತು. ಈ ಕಾರ್ಯಕ್ಕೆ ರಾಜರ ಯುದ್ಧಗಳಿಗಿಂತಲೂ, ಪುರೋಹಿತರ ಯಜ್ಞಗಳೇ ಬಹುವಾದ ಕೊಡುಗೆಯನ್ನು ನೀಡಿವೆ. ಕಾಡುಗಳ ನಾಶದಿಂದ ಕೃಷಿಯು ವಿಸ್ತಾರವಾದಂತೆ, ಜ್ಞಾನದ ನಾಶದಿಂದ ಯಜ್ಞವು ವಿಸ್ತಾರವಾಯಿತು. ಅವ್ಯಾಹತ ಪಶುಬಲಿಯು ಇದರ ಪ್ರಧಾನ ಪರಿಣಾಮಗಳಲ್ಲಿ ಒಂದು. ನಂತರದಲ್ಲಿ ದಾನದ ಹೊದಿಕೆ ಹೊದ್ದ ಸಂಪತ್ತಿನ ನಾಶವನ್ನು ಹೆಸರಿಸಬಹುದು.

6 ಶತಮಾನದವರೆಗೆ ಇವು ಯಾವುವು ಇದ್ದಿಲ್ಲವೇ ಎಂಬ ಪ್ರಶ್ನೆಯೊಂದು ಇಲ್ಲಿ ಬರಬಹುದು. ಬಹುಶಃ ಇದ್ದಿರಬಹುದಾದರೂ ವಿಪರೀತ ಮಟ್ಟವನ್ನು ಮುಟ್ಟಿರಲಿಲ್ಲ. ಇಲ್ಲವೇ ಇವೆಲ್ಲವಕ್ಕೂ ಕಾರಣರಾದ ಆರ್ಯರು ಇನ್ನು ವ್ಯವಸ್ಥಿತವಾಗಿ ಮತ್ತು ವಿಸ್ತಾರವಾಗಿ ಭಾರತದಲ್ಲಿ ನೆಲೆಯಾಗಿರಲಿಲ್ಲ ಎನ್ನಬಹುದು. ಆಗಲೇ ಹೇಳಿದಂತೆ ಧಾರ್ಮಿಕ ಆಚರಣೆಗಳು ಸಮಾಜದ ಎಲ್ಲವನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿತ್ತು. ಇದಕ್ಕಾಗಿ ಹಲವು ತರ್ಕರಹಿತ ಆಚರಣೆಗಳನ್ನು ಅದು ಹೇರಿತ್ತು. ಯುರೋಪಿನಲ್ಲಿ ಇದ್ದಂತೆ ಇದಕ್ಕೆ ಇಲ್ಲಿ ಒಂದು ಕೇಂದ್ರ ಅಂತ ಇರಲಿಲ್ಲ. ಅಲ್ಲಾದರೇ ಚರ್ಚು ಈ ಎಲ್ಲಾ ಅನಾಹುತಗಳಿಗೂ ಕೇಂದ್ರವಾಗಿತ್ತು. ಅದು ವಿಪರೀತ ಆಸ್ತಿ ಶೇಖರಣೆಯನ್ನು ಹೊಂದಿತ್ತು. ತನ್ನಿಂದ ಸಾಧ್ಯವಾಗಹುದಾದ ಎಲ್ಲಾ ಮೂಢ ವೈಚಾರಿಕಗಳನ್ನು ಜನರ ಮೇಲೆ ಹೇರಿತ್ತು. ಈ ಎಲ್ಲದರಿಂದ ಚರ್ಚಿನ ವಿರುದ್ಧ ಕ್ರಾಂತಿಗಳು ಆದವು. ಕ್ರಿಸ್ತನಿಗಿಂತಲೂ ಮುಂಚೆ ವಿಸ್ತಾರವಾಗಿದ್ದ ಯಹೂದಿ ಧರ್ಮವು ಈ ಎಲ್ಲಾ ರೀತಿಯ ಅನಾಚಾರಗಳನ್ನು ಆಗಲೇ ಹೊಂದಿತ್ತು. ಕ್ರಿಸ್ತನದನ್ನು ಧಾರ್ಮಿಕ ಎನ್ನುವುದಕ್ಕಿಂತಲೂ ಹೆಚ್ಚಾಗಿ ರಾಜಕೀಯ ಕ್ರಾಂತಿ ಎನ್ನಬಹುದು.

ಹಾಗೆ ನೋಡಿದರೆ ಧರ್ಮವನ್ನು ಸ್ಥಾಪನೆ ಮಾಡಲೆಂದು ಯಾವ ಕ್ರಾಂತಿಯೂ ನಡೆದಿಲ್ಲ ಎನ್ನಬಹುದು. ನಡೆದಂತವು ಎಲ್ಲವೂ ವೈಚಾರಿಕ ಕ್ರಾಂತಿಗಳು. ಆ ನಂತರದಲ್ಲಿ ಅವು ಧರ್ಮದ ಸ್ವರೂಪವನ್ನು ಪಡೆದುಕೊಂಡವು. ಈ ವಿಷಯದಲ್ಲಿ ಇಸ್ಲಾಂ ಕತೆಯು ಸ್ವಲ್ಪ ಬೇರೆ. ಪ್ರವಾದಿ ಮಹಮ್ಮದನು ಒಂದು ಧರ್ಮವನ್ನು ಸ್ಥಾಪಿಸಲು ಎಂಬಂತೆ ತನ್ನ ಪ್ರಯತ್ನವನ್ನು ನಡೆಸಿರುವಂತೆ ತೋರುತ್ತದೆ. ಆತನು ಆ ಕಾಲದ ಅರಬ್ ಪ್ರದೇಶದಲ್ಲಿ ಅಸ್ಥಿತ್ವದಲ್ಲಿದ್ದ ಸಣ್ಣ ಸಣ್ಣ ದೇವರು ಮತ್ತು ಧರ್ಮಗಳೆಲ್ಲವನ್ನೂ ಏಕದೇವೋಪಾಸನೆಯ ವ್ಯಾಪ್ತಿಯಲ್ಲಿ ತಂದನು. ಇದನ್ನು ಮುಂದೆ ಇಸ್ಲಾಂ ಧರ್ಮ ಕುರಿತಲ್ಲಿ ವಿವರವಾಗಿ ಹೇಳಲಾಗಿದೆ. ಮತ್ತೆ ಭಾರತದ ವಿಷಯಕ್ಕೆ ಬರುವುದಾದರೆ, ಬುದ್ದ ಮತ್ತು ಮಹಾವೀರರು ಸಹ ಮಾಡಿದ್ದು ವೈಚಾರಿಕ ಕ್ರಾಂತಿಯೇ. ಇವುಗಳ ಜೊತೆಗೆ ಭೌತವಾದಿ ಪಂಥಗಳಾದ ಇತರವೂ ಸಹ ತಾತ್ವಿಕತೆಯಲ್ಲಿ ಒಂದೇ ಬುನಾದಿಯನ್ನು ಹೊಂದಿದ್ದರೂ ಸಹ, ಒಂದನ್ನೊಂದು ಎದುರುಗೊಂಡವು. ವೇದಗಳನ್ನು ವಿರೋಧಿಸುವಲ್ಲಿ ಒಂದೇತನವನ್ನು ತೋರಿದರೂ ಸಹ, ಉಳಿದಂತೆ ಒಂದಾಗಲಿಲ್ಲ.

ಇದುವರೆಗೂ ಧರ್ಮದಲ್ಲಿ ಆರ್ಥಿಕತೆಯ ಸ್ವರೂಪವನ್ನು ನೋಡಲಾಯಿತು. ಈಗ ಧರ್ಮದಲ್ಲಿ ಅತ್ಯಂತ ಪ್ರಮುಖವಾದ ಮತ್ತೆರೆಡು ಮುಖಗಳ ಕುರಿತು ನೋಡೋಣ. ಅವುಗಳೆಂದರೆ ಧಾರ್ಮಿಕ ಪ್ರಭುತ್ವ ಹಾಗೂ ರಾಜಪ್ರಭುತ್ವ. ಈ ಎರಡು ಯಾವಾಗಲೂ ಧರ್ಮವನ್ನು ನಿಯಂತ್ರಿಸುವ ಕೆಲಸವನ್ನು ಮಾಡುತ್ತವೆ. ಅರ್ಥಾತ್ ಧರ್ಮವನ್ನು ತಮ್ಮ ಉಪಯೋಗಕ್ಕೆ ತಕ್ಕಂತೆ ಒದಗಿಸಿಕೊಳ್ಳುವ ಕೆಲಸವನ್ನು

ಮಾಡುತ್ತವೆ. ಧರ್ಮದ ಮೇಲೆ ಅಧಿಕಾರ ಸ್ಥಾಪಿಸುವ ಪ್ರಯತ್ನ ಇವುಗಳದು. ಬರ್ಟಂಡ್ ರಸೆಲ್ ಹೇಳುವಂತೆ **"ಮನುಷ್ಯನ ಅಸಂಖ್ಯ ಬಯಕೆಗಳಲ್ಲಿ ಮುಖ್ಯವಾದವುಗಳೆಂದರೆ ಅಧಿಕಾರ ದಾಹ ಮತ್ತು ವೈಭವದ ಆಕಾಂಕ್ಷೆ"**[11]. ಈ ಅಧಿಕಾರ ದಾಹವನ್ನು ನಾವು ತೀರ ಕೆಳಗಿನ ಹಂತದಿಂದ ನೋಡಬಹುದು. ಅಂದರೆ ವ್ಯಕ್ತಿಯ ಕುಟುಂಬ ಹಂತದಿಂದ. ಕುಟುಂಬದಲ್ಲಿ ಒಬ್ಬ ಯಜಮಾನಿಕೆ ನಡೆಸುವ ವ್ಯಕ್ತಿಯನ್ನು ನಾವು ನೋಡುತ್ತೇವೆ. ಇದು ಕುಟುಂಬ ಮಟ್ಟದ ಅಧಿಕಾರ. ನಂತರ ಒಂದು ಊರಿನದು ಅದರ ಮೇಲಿನದು. ನಂತರ ರಾಜ್ಯ, ನಂತರ ದೇಶ.. ಹೀಗೆ ಬೆಳೆಯುತ್ತದೆ ಅಧಿಕಾರದ ಹಂತಗಳು. ಇಲ್ಲಿ ಈ ಹಂತಗಳಿಗೆ ಯಾವುದೇ ಮಿತಿ ಇರುವುದಿಲ್ಲ. ವ್ಯಕ್ತಿ ಒಂದೊಂದು ಹಂತವನ್ನು ದಾಟಿದಾಗಲೂ ಮತ್ತೊಂದಕ್ಕೆ ಪ್ರಯತ್ನಿಸುತ್ತಲೇ ಇರುತ್ತಾನೆ. ಇದಕ್ಕೆ ಯಾವ ನಿಲುಗಡೆ ಮತ್ತು ತೃಪ್ತಿ ಎಂಬುದು ಇರುವುದಿಲ್ಲ.

ಇದೇ ಅಧಿಕಾರ ದಾಹದ ಪರಿಸ್ಥಿತಿಯು ರಾಜ್ಯ ಆಳುವವನಿಗೂ, ಧರ್ಮ ಆಳುವವನಿಗೂ ಅನ್ವಯ. ಇವರು ಪರಸ್ಪರ ಒಬ್ಬರಿಗೊಬ್ಬರು ಪೂರಕವಾಗಿದ್ದು, ತಮ್ಮ ತಮ್ಮ ಅವಶ್ಯಕತೆಗಳನ್ನು ಈ ಮೂಲಕ ತೀರಿಸಿಕೊಳ್ಳುತ್ತಾರೆ. ಪುರೋಹಿತನು ತನಗೆ ಬೇಕಾದ ಸಂಪತ್ತು, ಅಧಿಕಾರ ಮುಂತಾದುವನ್ನು ರಾಜನ ದೆಸೆಯಿಂದ ಪಡೆದರೆ, ರಾಜನೂ ಅವರನ್ನು ಧರ್ಮದ ಹೆಸರಿನಲ್ಲಿ ಜನರನ್ನು ನಿಯಂತ್ರಿಸಲು ಬಳಸುತ್ತಾನೆ. ಪ್ರಾಚೀನ ಭಾರತದಲ್ಲಿ ವರ್ಣಾಶ್ರಮ ಪದ್ದತಿಯಿತ್ತು. ಆಗ ಕ್ಷತ್ರಿಯ ಕುಲದವರು ಮಾತ್ರವೇ ರಾಜರಾಗಬೇಕೆಂಬುದು ಪುರೋಹಿತಶಾಹಿಯು ಪ್ರಚಾರ ಮಾಡಿದ ನಂಬುಗೆಯಾಗಿತ್ತು. ಈ ಕಾರಣಕ್ಕೆ ಬ್ರಾಹ್ಮಣ ಮೂಲವಲ್ಲದ, ಕ್ಷತ್ರಿಯ ಮೂಲವಲ್ಲದ ಅನೇಕ ರಾಜಕುಟುಂಬಗಳು ರಾಜ್ಯಾಧಿಕಾರ ವಹಿಸಿಕೊಂಡವು. ಇವರೆಲ್ಲರೂ ಧಾರ್ಮಿಕ ಮುಖಂಡರ ಮೂಲಕ ತಮ್ಮ ಕುಲಮೂಲವನ್ನು ಪುರಾಣಕ್ಕೋ ಮತ್ತೊಂದಕ್ಕೆ ಅಂಟಿಸಿ ಅವನ್ನು ಪ್ರಚಾರ ಮಾಡುತ್ತಿದ್ದರು. ಇದಕ್ಕೆ ಸಾಹಾಯ ಮಾಡುತ್ತಿದ್ದುದು, ರಾಜನಿಂದ ಸಂಪತ್ತನ್ನು ಪಡೆದ ಪುರೋಹಿತರು. ಈ ಕಾರಣಕ್ಕೆ ಕರ್ನಾಟಕದ ಅನೇಕ ರಾಜಮನೆತನಗಳು ತಮ್ಮನ್ನು ಯಾದವ ವಂಶದವರೆಂದೋ ನಾಗಾವಂಶದವರೆಂದೋ ಕರೆದುಕೊಳ್ಳುತ್ತಿದ್ದುದು. ವಾಸ್ತವವಾಗಿ ಅವರೆಲ್ಲರೂ ಇಲ್ಲಿಯವೇ ಆದ ಸ್ಥಳೀಯ ಕುಲಗಳವರಾಗಿರುತ್ತಿದ್ದರು.

ಸಾಮಾನ್ಯವಾಗಿ ಧಾರ್ಮಿಕ ಪ್ರಭುತ್ವವೆಂದರೆ, ಧರ್ಮವನ್ನು ಸಾಧನ ಮಾಡಿಕೊಂಡು ಆ ಮೂಲಕ ಸಮಾಜದಲ್ಲಿ ಅಧಿಕಾರವನ್ನು ನಡೆಸುವುದು. ತುಂಬಾ ಹಿಂದಿನ ಕಾಲದಲ್ಲಿ ಈ ಧಾರ್ಮಿಕ ಪ್ರಭುತ್ವವು ರಾಜಪ್ರಭುತ್ವಕ್ಕಿಂತಲೂ ದೊಡ್ಡದಾದ ಅಧಿಕಾರವನ್ನೂ ಪ್ರಭಾವವನ್ನೂ ಹೊಂದಿತ್ತು. ಹಿಂದಿನ ಅಧ್ಯಾಯಗಳಲ್ಲಿ ನೋಡಿದಂತೆ ಅವರು 'ರಾಜಪುರೋಹಿತ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಿದ್ದರು. ಮೊದಲೆಲ್ಲಾ ಇವರೇ ಆಳ್ವಿಕೆಯನ್ನು ಮಾಡುತ್ತಿದ್ದರು. ಇವರು ದೈವಾಂಶ ಸಂಭೂತರೆಂಬುದು ಇವರು ಅಧಿಕಾರ ಮಾಡಲು ಉಪಯೋಗಿಸುತ್ತಿದ್ದ ಸಾಧನ. ಕ್ರಮೇಣ ರಾಜಪ್ರಭುತ್ವಗಳು ಬೆಳೆದಂತೆ ಇವರು ಅಧಿಕಾರ ವ್ಯಾಪ್ತಿಯು ಕಡಿಮೆಯಾಯಿತಾದರೂ, ಸಮಾಜದ ಮೇಲಿನ ನಿಯಂತ್ರಣವನ್ನು ಇವರು ಬಿಟ್ಟುಕೊಡಲಿಲ್ಲ. ಹಲವಾರು ಬಾರಿ ರಾಜರಂತೆಯೇ ಸಮಸಮವಾಗಿ ಇವರು ಸಮಾಜದ ಮೇಲೆ ಅಧಿಕಾರ ನಡೆಸಿದರು. ರಾಜರುಗಳನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಲೂ ಸಹ ಇವರು ಯಶಸ್ವಿಯಾದರು. ಯುರೋಪಿನ ಚರ್ಚುಗಳನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದು. ತೀರಾ ಇತ್ತೀಚಿನವರೆಗೂ ಸಹ ಇವುಗಳು ಇವು ಜನರ ಮೇಲೆ ಕಾನೂನುಗಳನ್ನು ಹೇರುತ್ತಿದ್ದವು. ಈಗ ಈ ಮಟ್ಟಿನ ಪರಿಸ್ಥಿತಿಯು ಇಲ್ಲವಾದರೂ ಸಹ,

ಪ್ರಭುತ್ವದ ಜೊತೆ ಸೇರಿ ತಮ್ಮ ಕೆಲಸಗಳನ್ನು ಅನಾಯಾಸವಾಗಿಯೇ ಈ ಧಾರ್ಮಿಕಪ್ರಭುತ್ವಗಳು ಮುಂದುವರೆಸಿಕೊಂಡು ಬಂದಿವೆ.

ಧಾರ್ಮಿಕಮುಖಂಡರುಗಳೇ ಯಾವಾಗಲೂ ಪ್ರಭುತ್ವವನ್ನು ಅರಸಿ ಹೋಗುತ್ತಿದ್ದರು ಎಂದಲ್ಲ. ರಾಜರುಗಳಿಗೂ ಸಹ ಇವರು ಅನಿವಾರ್ಯವಾಗಿದ್ದರು. ಜನರನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಇವರ ಸಹಾಯವು ರಾಜರಿಗೆ ಬೇಕಾಗಿತ್ತು. ಮತ್ತು ಇದೊಂದು ಪರಿಣಾಮಕಾರಿಯಾದ ಅಸ್ತ್ರವೂ ಸಹ ಆಗಿತ್ತು. ಬಹುಶಃ ಈ ಹಿನ್ನೆಲೆಯಲ್ಲಿಯೇ ರಾಜರುಗಳ ಧರ್ಮಸಾಮರಸ್ಯವನ್ನು ನಾವು ನೋಡಬೇಕಾಗುತ್ತದೆ. ರಾಜರುಗಳು ಎಲ್ಲಾ ಧರ್ಮದವರನ್ನು ಸಮಾನವಾಗಿ ನೊಡುತ್ತಿದ್ದುದು ಇದೇ ಉದ್ದೇಶಕ್ಕೆ ಇರಬೇಕು. ಸಮನಾಗಿ ಎನ್ನುವುದಕ್ಕಿಂತ ಆಯಾ ಸಂಖ್ಯೆಗೆ ತಕ್ಕಂತೆ ಎಂದೂ ಸಹ ಅನ್ನಬಹುದು. ಈ ಕುರಿತಂತೆ ಎರಡು ಘಟನೆಗಳು ಉದಾಹರಣೆಯಾಗಿ ನಾವೀಗ ನೋಡೋಣ.

ಈ ಕತೆಯನ್ನು ಮತಾಂತರ ಅಧ್ಯಾಯದಲ್ಲಿ ವಿವರವಾಗಿ ನೋಡಲಾಗಿದೆ. ಈಗ ಸುಮ್ಮನೆ ನೋಡೋಣ. ಇದು ಇರಿಭಕ್ತಯ್ಯ ಎಂಬುವವನ ಕುರಿತಾದದ್ದು. ಈತನು ವೈಷ್ಣವನೊಬ್ಬನನ್ನು ನಾಮವಿಟ್ಟುಬರುತ್ತಿದ್ದುದನು ಕಂಡು ಅವನನ್ನು ಕೊಲ್ಲುತ್ತಾನೆ. ಇದು ರಾಜನ ಬಳಿಗೆ ಹೋಗಲು, ರಾಜನೂ ಸಹ ಈ ಇರಿಭಕ್ತಯ್ಯನ ಪರವಾಗಿಯೇ ತೀರ್ಪನ್ನು ನೀಡುತ್ತಾನೆ. ಅನ್ಯಾಯಕ್ಕೊಳಗಾದವರೇ ಮತ್ತೊಮ್ಮೆ ಅನ್ಯಾಯಕ್ಕೊಳಗಾದ ಕತೆ ಇದು. ಇದನ್ನೇ ಹೋಲುವಂತದ್ದು ಬುಕ್ಕರಾಯನ ಘಟನೆ. ಇವನೂ ಸಹ ಜೈನರ ಮೇಲೆ ದಾಳಿ ಮಾಡಿದ ವೈಷ್ಣವರ ಪರವಾಗಿಯೇ ತೀರ್ಪು ನೀಡುತ್ತಾನೆ. ಇಲ್ಲಿ ರಾಜರುಗಳು ಬಹುಸಂಖ್ಯಾತ ಧರ್ಮವೊಂದರ ಪರ ಇರುವುದನ್ನು ಕಾಣಬಹುದು. ಮತ್ತು ತಮ್ಮದೇ ಸ್ವಧರ್ಮಗಳ ಪರ ಇರುವುದನ್ನೂ ಸಹ. ಇಂತಹ ಘಟನೆಗಳ ಹೊರತಾಗಿಯೂ ಸಹ, ಸಾಮಾನ್ಯವಾಗಿ ಅರಸರುಗಳು ಎಲ್ಲಾ ಧರ್ಮಗಳೊಂದಿಗೆ ಒಳ್ಳೆಯ ಸಂಬಂಧಗಳನ್ನು ಹೊಂದಲು ಬಯಸುತ್ತಿದ್ದರು ಮತ್ತು ಪ್ರಯತ್ನಿಸುತ್ತಿದ್ದರು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ವಿಷ್ಣುವರ್ಧನ. ಇವನು ಇವನು ವಿವಿಧ ಧರ್ಮಗಳಿಗೆ ಸೇರಿದ ರಾಜಕುಮಾರಿಯರನ್ನು ಮದುವೆಯಾಗಿದ್ದನು. ಇದಕ್ಕೆ ದಾಖಲೆಗಳಾಗಿ ಸೊರಬದ ಎ.ಕ ಶಾಸನ ಸಂಖ್ಯೆ 132, 140, 73, 125 ಗಳನ್ನು ನೋಡಬಹುದು[12].

ಇದಕ್ಕೆ ಸಂಬಂಧಿಸಿದಂತೆ ಮೋಹನಕೃಷ್ಣ ರೈಯವರು ಹೀಗೆ ಹೇಳುತ್ತಾರೆ "ಅರಸರು ಅನ್ಯಧರ್ಮ ಸಹಿಷ್ಣುಗಳಾಗಿದ್ದರು ಎನ್ನುವುದು ಧರ್ಮವು ಹೊಂದಿದ್ದ ಸ್ಥಾನ ಹಾಗೂ ರಾಜಪ್ರಭುತ್ವಕ್ಕೆ ಅದರ ಅನಿವಾರ್ಯತೆ ಈ ಎರಡನ್ನೂ ಸೂಚಿಸುತ್ತದೆ. ಇದರಿಂದಾಗಿ ಧಾರ್ಮಿಕ ಸಾಮರಸ್ಯ ನೀತಿಯು ಪ್ರಭುತ್ವದ ಅಗತ್ಯಗಳನ್ನು ಪೂರೈಸುತ್ತಿತ್ತೇ ಹೊರತು ಪ್ರಜೆಗಳದ್ದಲ್ಲ ಎನ್ನುವುದು ತಿಳಿದುಬರುತ್ತದೆ[13]. ಅವರೇ ಮುಂದುವರೆದು ಹೇಳುವಂತೆ ಈ ಕೆಲಸಕ್ಕೆ ದೇವಾಲಯಗಳು ಸಾತ್ ನೀಡಿದವು. ಪ್ರಜೆಗಳಲ್ಲಿ ಭಯ ಭಕ್ತಿ ಮೂಡುವಂತೆ ಮಾಡಿ, ಆ ಮೂಲಕ ಪ್ರಭುತ್ವವನ್ನು ಒಪ್ಪಿಕೊಳ್ಳುವಂತೆ ಮಾಡುವ ಕೆಲಸವನ್ನು ದೇವಾಲಯಗಳು ಮಾಡುತ್ತಿದ್ದವು. ಈ ಕಾರಣಕ್ಕಾಗಿಯೇ ರಾಜರುಗಳು ದೇವಾಲಯ ನಿರ್ಮಾಣಕ್ಕೆ ಅಷ್ಟೊಂದು ವಿಶೇಷ ಗಮನ ಕೊಡುತ್ತಿದ್ದರು ಮತ್ತು ದಾರಾಳವಾಗಿ ದಾನಗಳನ್ನು ಮಾಡುತ್ತಿದ್ದರು. ಅದೂ ಅಲ್ಲದೇ ಈ ದೇವಾಲಯಗಳು ಅವರ ಸಂಪತ್ತಿನ ಕೇಂದ್ರಗಳೂ ಸಹ ಆಗಿದ್ದವು. ಶತ್ರುಗಳಿಗೆ ದಾಳಿ ಮಾಡುವಾಗ ದೇವಾಲಯಗಳು ಅವರ ಪ್ರಮುಖ ಆಕರ್ಷಣೆಯ ಕೇಂದ್ರಗಳಾಗಿದ್ದುದು ಇದೇ ಕಾರಣಕ್ಕೆ.

**ಅಡಿ ಟಿಪ್ಪಣಿಗಳು**

1. ಧರ್ಮ, ಕನ್ನಡ ವಿವಿ ವಿಶ್ವಕೋಶ, ಸಂ 3, ಪು 22

2. ಅದೇ

3.....

4.....

5. ನಾಗರಿಕತೆಇತಿಹಾಸ ಸಂ 3, ಪು 66

6. ಅದೇ, ಪು 67

7. ಅದೇ, ಪು 69

8. ಪ್ರಾಚೀನ ಭಾರತ, ಆರ್ಯಸ್ ಶರ್ಮಾ

9. ಭೌದ್ದಧರ್ಮದರ್ಶನ, ಆಚಾರ್ಯ ನರೇಂದ್ರದೇವ

10. ಕಬ್ಬಿಣಯುಗ ಮತ್ತುಧಾರ್ಮಿಕಕ್ರಾಂತಿ, ಕೃಷ್ಣಮೋಹನ್ ಶ್ರೀಮಾಲಿ, ಪು 148

11. ಅಧಿಕಾರ ಮೀಮಾಂಸೆ, ರಸೆಲ್

12. ಪ್ರಭುತ್ವ ಮತ್ತು ಜನತೆ, ಮೋಹನಕೃಷ್ಣ ರೈ, ಪು 142

13. ಅದೇ

ಸಮನ್ವಯ ಎನ್ನುವುದು ಜೀವ–ನಿರ್ಜೀವಗಳಿಗೆ ಒಳಗೊಂಡಂತೆ ಬಹುಮುಖ್ಯವಾದ ಅಂಶ. ಎಲ್ಲಿ ಸಮನ್ವಯವಿರುತ್ತದೋ ಅಲ್ಲಿ ಮುಂದುವರೆಕೆಯಿರುತ್ತದೆ. ಸಮನ್ವಯ ಇಲ್ಲದಿದ್ದಲ್ಲಿ ಸಂಘರ್ಷ ಇರುತ್ತದೆ. ಸಮನ್ವಯ ಎನ್ನುವುದೊಂದು ನಿಯಮ. ಅದು ಎಲ್ಲಾವನ್ನೂ ತಾಳಿಕೊಂಡು ಹೋಗುವುದು ಎನ್ನುವುದಕ್ಕಿಂತ ಹೆಚ್ಚಾಗಿ ಎಲ್ಲವುಗಳೊಂದಿಗೆ ಹೊಂದಿಕೊಂಡು ಹೋಗುವುದೇ ಆಗಿದೆ. ಇಂದು ಭೂಮಿಯೂ ಮತ್ತದರ ಜೀವಪರಿಸರವು ಅಪಾಯದ ನೆಲೆಯಲ್ಲಿರುವ ಪ್ರಮುಖ ಕಾರಣ ಈ ಸಮನ್ವಯದ ಕೊರತೆ. ಮನುಷ್ಯನು ಪ್ರಕೃತಿಯೊಂದಿಗೆ ಸಂಘರ್ಷಕ್ಕೆ ಇಳಿದಾಗ ಅನಿವಾರ್ಯವಾಗಿ ಅಂತ್ಯವನ್ನು ಹೊಂದಬೇಕಾಗುತ್ತದೆ. ಇದು ಸಮನ್ವಯದ ಮಹತ್ವ. ಇದರ ಕೊರತೆಯಿಂದಲೇ ಒಂದು ದೇಶ ಇನ್ನೊಂದು ದೇಶದೊಡನೆ ಹೊಡೆದಾಡುತ್ತಿರುವುದು. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯೊಡನೆ ಹೊಡೆದಾಡುತ್ತಿರುವುದು. ಅಹಿಂಸೆಯನ್ನೂ ಶಾಂತಿಯನ್ನೂ ಸಾಧಿಸುವ ಮೂಲ ಬೇರುಗಳು ಈ ಸಮನ್ವಯವನ್ನು ಅರ್ಥಮಾಡಿಕೊಳ್ಳುವುದರಲ್ಲಿಯೇ ಅಡಗಿವೆ. ಈ ಪರಿಸರವು ಧರ್ಮಕ್ಕೂ ಅನ್ವಯವಾಗುತ್ತದೆ. ಮನುಷ್ಯನನ್ನು ಎತ್ತಿಹಿಡಿಯಲು ಹುಟ್ಟಿಕೊಂಡ ಧರ್ಮಗಳು ಆ ಮನುಷ್ಯತ್ವವನ್ನೇ ನಾಶ ಮಾಡುವಂತಹ ಪರಿಸರವನ್ನು ನಿರ್ಮಿಸಿರುವುದು ದುರಂತವೇ ಸರಿ. ಇದನ್ನು ನಿವಾರಿಸುವ ಮಾರ್ಗಗಳೆಂದರೆ ಧರ್ಮವನ್ನು ಸಾಧಿಸುವುದು ಇಲ್ಲವೇ ಧರ್ಮಗಳನ್ನು ದಾಟುವುದು ಅಂದರೆ ಮೀರುವುದು .ಧರ್ಮವನ್ನು ಸಾಧಿಸುವುದು ಎಂದರೆ ಸಮನ್ವಯವೇ ಆಗಿದೆ.

'ಬೇರಿಲ್ಲದ ಮರ, ಪ್ರಾಣವಿಲ್ಲದ ದೇಹ, ನೀರಿಲ್ಲದ ಬಾವಿ ಇವುಗಳಂತೆ ದಯೆಯಿಲ್ಲದ ಧರ್ಮ' ಎಂದು ಧರ್ಮಾಮೃತವು ಘೋಷಿಸುತ್ತದೆ[1]. ಬಹುತೇಕ ಧರ್ಮಗಳು ದಯೆಯನ್ನು ಪ್ರತಿಪಾದಿಸಿ ಧರ್ಮಗಳಾಗಿ ರೂಪಗೊಂಡದ್ದು ಇತಿಹಾಸ. ಮತ್ತು ಅದೇ ದಯೆಯನ್ನು ಮುಂದಿಟ್ಟುಕೊಂಡು ಇತರ ಧರ್ಮಗಳೊಂದಿಗೆ ಜಗಳ ಮಾಡಿದ್ದೂ ಸಹ ಇತಿಹಾಸದಲ್ಲಿ ದಾಖಲಾಗಿದೆ. ಹೀಗೆ ದಯೆಯನ್ನು ಪ್ರತಿಪಾದಿಸುವ ಧರ್ಮಗಳನ್ನು ದೂರುವುದು ತಪ್ಪು.ಆ ಧರ್ಮಗಳನ್ನು ಅಳಿಸುವುದಂತೂ ಅಸಾಧ್ಯವೇ ಸರಿ. ಇದಕ್ಕೆ ಕಾರಣವೂ ಇದೆ.'ಭೀತಿಯೆಂಬುದು ಮಾನವನ ಜನ್ಮದಿಂದಲೇ ಬಂದಿರುವುದು. ಈ ಭೀತಿಯೇ ಧರ್ಮದ ಉದಯಕ್ಕೆ ಕಾರಣ. ಮತ್ತು ಮಾನವ ಕುಲದಲ್ಲಿ ನಾಶ ಮಾಡಲಾಗದಂತಹ ಧರ್ಮಶ್ರದ್ಧೆಯ ಮೂಲಗಳಿವೆ'[2]. ಇದನ್ನು ನಾಶಮಾಡುವುದು ಅಸಾಧ್ಯ. ಅಸಾಧ್ಯ ಎನ್ನುವುದಕ್ಕಿಂತ ಕಷ್ಟಸಾಧ್ಯ ಎನ್ನುವುದು ಉತ್ತಮ. ಯಾಕೆಂದರೆ ಈ ಧರ್ಮದ ಅಳಿವಿನ ಬಗ್ಗೆ ವಿದ್ವಾಂಸರು ತಮ್ಮದೇ ಆದ ಒಂದು ವಾದವನ್ನು ಹೊಂದಿದ್ದಾರೆ. ಅದೇನೆಂದರೆ "ಧರ್ಮವೆಂದರೆ ಒಂದು ಚಿತ್ತಭ್ರಮೆ, ಒಂದು ವಿಕಲ್ಪ, ಒಂದು ಮೋಸ. ಜಗತ್ತನ್ನು ವಿವರಿಸಲು ದೇವರ ಪ್ರಮೇಯವು ನಿಷ್ಪ್ರಯೋಜಕ. ಜನರಿಗೆ ಧರ್ಮವು ಅಗತ್ಯವೇಕೆಂದು ಅನ್ನಿಸುವುದೆಂದರೆ ಅದಕ್ಕೆ ಒಗ್ಗಿಹೋಗಿ, ಅವು ಹೆಚ್ಚಿದಂತೆಲ್ಲ ಆ ನಂಬಿಕೆ ಕಳೆದುಕೊಂಡಾಗ, ಒಂದು ರೀತಿಯ ಸತ್ಯ ಮತ್ತು ಅನಪೇಕ್ಷಿತ ಶೂನ್ಯ ಅವರಲ್ಲಿ

ಸೃಷ್ಟಿಯಾಗುವುದರಿಂದ"[3]. ವೈಚಾರಿಕತೆಯನ್ನು ಉತ್ತಮ ಮಟ್ಟದಲ್ಲಿ ಪಡೆದಾಗ ಧರ್ಮಗಳು ಮನುಷ್ಯನಿಂದ ತಾವಾಗಿಯೇ ದೂರವಾಗುತ್ತವೆ. ಅದಕ್ಕೆ ಭಗವದ್ಗೀತೆಯಲ್ಲಿಕೃಷ್ಣ ಹೇಳುವುದು 'ಸರಿಯಾದ ಜ್ಞಾನವೇ ಎಲ್ಲಾ ಸಮಸ್ಯೆಗಳಿಗೆ ಪರಿಹಾರ' ಎಂದು. ಆಧುನಿಕತೆಯ ಈ ಕಾಲದಲ್ಲಿ ಒಂದು ಉದಾಹರಣೆಯನ್ನು ಕೊಡುವುದಾದರೆ ದೇವರನ್ನು ನಂಬದಿರುವವರಲ್ಲಿ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಜಪಾನ್‌ನಲ್ಲಿ ಅಪರಾಧ ಪ್ರಕರಣಗಳು ತೀರವೇ ಕಮ್ಮಿಯೆಂದು ಹೇಳಲಾಗುತ್ತದೆ. ಅಲ್ಲಿ ಯಾವುದೇ ಹೆಸರಿನ ಧರ್ಮವಿಲ್ಲ. ವೈಚಾರಿಕತೆಯಲ್ಲಿ ಧರ್ಮಗಳು ಇದ್ದಲ್ಲಿ ಮಾತ್ರವೇ ನೈತಿಕತೆ ಇರುತ್ತದೆ ಎನ್ನುವುದು ಸುಳ್ಳು. ಧರ್ಮವೇ ಹಲವು ಪ್ರಕರಣಗಳಲ್ಲಿ ನೈತಿಕತೆಯನ್ನು ಮರೆತಿರುವುದನ್ನು ನಾವು ಕಾಣುತ್ತೇವೆ. ಬಹುಶಃ ಮನುಷ್ಯ ವೈಚಾರಿಕತೆಯ ಮುಂದಿನ ಹಂತ ಧರ್ಮಗಳನ್ನು ತಿರಸ್ಕರಿಸುವುದೇ ಇರಬೇಕು.

ನಾವು ಸಹಿಷ್ಣುತೆಯ ಮುನ್ನೆಲೆಗೆ ಯತ್ನಿಸುವುದು ಸಂಘರ್ಷವು ಮುನ್ನಲೆಯಲಿದ್ದಾಗ. ಈ ಸಂಘರ್ಷವು ಮುನ್ನೆಲೆಗೆ ಬರಲು ಪ್ರಮುಖ ಕಾರಣ ಧರ್ಮಕ್ಕಿಂತಲೂ ಧರ್ಮಾಧಿಕಾರಿಗಳಿಂದ. ಇವರ ವಿಚಾರ ರಹಿತ ವ್ಯಾಖ್ಯಾನಗಳಿಂದಾಗಿ ಒಂದು ಧರ್ಮದವರು, ಮತ್ತೊಂದು ಧರ್ಮದವರೊಂದಿಗೆ ಗುದ್ದಾಡಬೇಕಾಗುತ್ತದೆ. ಇಂತಹ ಧರ್ಮಗುರುಗಳನ್ನು ಕುರಿತು ಒಂದು ಕಡೆ ಗಾಲಿಬ್ ಮಾರ್ಮಿಕವಾಗಿ ಹೇಳುತ್ತಾನೆ[4].

**"ಫಾಸಿಗೇರಿಸುವವನಿಗೆ ಹೆದರುವುದಿಲ್ಲ ನಾನು**
**ಧರ್ಮಗುರುವಿನೊಂದಿಗೆ ಜಗಳವಾಡುವುದಿಲ್ಲ ನಾನು**
**ಆತನನ್ನು ಗುರುತಿಸುತ್ತೇನೆ**
**ಆತ ಯಾವುದೇ ರೂಪದಲ್ಲಿ ಬಂದರೂ"**

ಎನ್ನುತ್ತಾನೆ. ಧರ್ಮಗುರುವೆಂದರೆ ಫಾಸಿಗೇರಿಸುವವನೇ ಸೈ.ಈ ಧರ್ಮಗುರುಗಳು ಇರದಿದ್ದಲ್ಲಿ ಧರ್ಮವು ಮುಕ್ತವಾಗಿ ಉಳಿಯುತ್ತಿತ್ತೇನೋ. ಯಾವುದನ್ನೇ ಆಗಲಿ ಒಂದು ಕಡೆ ನಿಂತು ಹೇಳಲಾಗುವುದಿಲ್ಲವಲ್ಲ. ಇತಿಹಾಸದಿಂದ ಸಧ್ಯಕ್ಕಂತೂ ಒಂದು ಸ್ಪಷ್ಟ. ಧರ್ಮಗುರುವು ಸಂಘರ್ಷವನ್ನು ಸೃಷ್ಟಿಸುತ್ತಾನೆ ಮತ್ತು ಸಾಮಾನ್ಯನು ಸಮನ್ವಯತೆಯನ್ನು ಸಾಧಿಸುತ್ತಾನೆ.

ಈ ಸಮನ್ವಯವನ್ನು ಕುರಿತು ಮಾತನಾಡುವ ಮುಂಚೆ ಈ ಸಂಘರ್ಷವು ಹೇಗೆ ಹುಟ್ಟುತ್ತದೆಂಬುದನ್ನು ನೋಡೋಣ. ಇದನ್ನು ಒಂದು ರೂಪಕ ವ್ಯಾಖ್ಯಾನದ ಮೂಲಕ ಅರಿಯೋಣ. ಪ್ರಾಚೀನ ಅಯೋನಿಯನ್ ತತ್ವಶಾಸ್ತ್ರಜ್ಞನಾದ ಜೆನೋಫೇನಿಸ್ ಹೀಗೆ ಹೇಳುತ್ತಾನೆ.

**“ದನಗಳು, ಕುದುರೆಗಳು, ಅಷ್ಟೇ ಏಕೇ**

**ಸಿಂಹಗಳಿಗೂ ಕೈಗಳಿವೆಯೆಂದಾದರೆ**

**ಆ ಕೈಗಳಿಂದ ಬರೆಯುವುದು, ಅಂತೆಯೇ**

**ಮನುಷ್ಯರು ಮಾಡುವುದೆಲ್ಲಾ ಮಾಡುವುದು ಶಕ್ಯವಿದ್ದರೆ**

**ಕುದುರೆಗಳು ತಮ್ಮ ದೈವವನ್ನು ಚಿತ್ರಿಸುತ್ತವೆ ಕುದುರೆಗಳಂತೆ**

**ದನಗಳು ದನಗಳಂತೆ**

**ಪ್ರತಿಯೊಬ್ಬರು ಚಿತ್ರಿಸುವ ದೇಹಗಳು ಇರುತ್ತವೆ ತಮ್ಮಂತೆ”[5]**

ಎಂದು ಹೇಳುತ್ತಾನೆ. ನಿಜವೇ ಅಲ್ಲವೇ. ಯಾರೂ ಹೇಗಿರುತ್ತಾರೆಯೋ ಅದರಂತೆಯೇ ತಮ್ಮ ದೇವರುಗಳನ್ನು ಚಿತ್ರಿಸಿಕೊಳ್ಳುತ್ತಾರೆ. ಇದಕ್ಕೆ ಇತಿಹಾಸದಲ್ಲಿ ಪುರಾವೆಗಳೂ ಸಹ ದೊರೆಯುತ್ತವೆ. ಇಥಿಯೋಪಿನ್ನರ ದೇವತೆಗಳಿಗೆ ಜಜ್ಜಿದ ಕಪ್ಪು ಮೂಗಿದೆ. ಥ್ರೀಸಿಯಾದ ದೇವತೆಗಳಿಗೆ ನೀಲಿಕಂಗಳು ಮತ್ತು ಕೆಂಪುಕೂದಲು. ಹೀಗೆ ಒಂದೊಂದು ಪಂಗಡಕ್ಕೆ ಸೇರಿದ ಮಾನವರು ತಮಗೆ ತೋಚಿದಂತೆ ದೇವರನ್ನೂ ಧರ್ಮವನ್ನು ಕಟ್ಟಿಕೊಂಡಿದ್ದರಿಂದ ಒಂದಕ್ಕಿಂತ ಒಂದು ವ್ಯತ್ಯಾಸದಲ್ಲಿ ಉಳಿಯುವಂತಾಯಿತು. ವ್ಯತ್ಯಾಸಗಳೇ ಮುಂದೆ ಸಂಘರ್ಷಕ್ಕೆ ದಾರಿಯಾದವು. ಈ ವ್ಯತ್ಯಾಸವು ಇಲ್ಲದಂತೆ ಮಾನವ ಧರ್ಮವನ್ನು ಕಟ್ಟಬೇಕಾದ ಕಾರ್ಯವು ‘ಸಮನ್ವಯತೆ’ಯಿಂದ ಆಗಬೇಕಿದೆ.

**ಕಸವರಮೆಂಬುದು ನೆರೆ ಸೈ**

**ರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ[6]**

ಎನ್ನುವ ಮಾತು ಕವಿರಾಜಮಾರ್ಗದಲ್ಲಿ ಬರುತ್ತದೆ. ಇದು ಎಂಟು ಮತ್ತು ಒಂಭತ್ತನೇ ಶತಮಾನಕ್ಕೆ ಸಲ್ಲುವ ಕಾವ್ಯ. ಈ ಮಾತನ್ನು ಹೇಳುವಾಗ ಬಹುಶಃ ಅದು ವಿವಿಧ ಮತಗಳ ಸಂಘರ್ಷದಿಂದ ಕೂಡಿದ ಕಾಲವಾಗಿರಬೇಕು. ಇಲ್ಲವಾದರೆ ಈ ಮೇಲಿನ ಸಾಲುಗಳಿಗೆ ತಕ್ಕದಾಗಿರುವ ಕಾಲವಾಗಿರಬೇಕು. ಅಂಬೇಡ್ಕರ್ ಅವರು 7ನೇ ಶತಮಾನವನ್ನು ಭಾರತದಲ್ಲಿ ಧಾರ್ಮಿಕ ಹಿಂಸಾಚಾರದ ಶತಮಾನ ಎಂದು ಕರೆಯುತ್ತಾರೆ[7]. ಈ ಶತಮಾನದಲ್ಲಿ ಜೈನಧರ್ಮದ ಮೇಲೆ ಭೀಕರ ಹಿಂಸೆಯುಂಟಾಯಿತು ಎಂದು ಅವರು ಹೇಳುತ್ತಾರೆ. ಇದೇ ಕಾಲಕ್ಕೆ ಸಲ್ಲುವ ಕವಿರಾಜಮಾರ್ಗಕಾರನು ಈ ಕಾರಣಕ್ಕಾಗಿಯೇ ಈ ಮೇಲಿನ ಮಾತನ್ನು ಹೇಳಿರಬೇಕು. ಅದಲ್ಲದೆ ಆತ ಜೈನ. ಸ್ವತಃ ತಾನು ಜೈನನಾಗಿರುವುದು ಮತ್ತು ಈ ರೀತಿಯ ಧಾರ್ಮಿಕ ಹಿಂಸೆಗಳಿಂದ ಈ ಮಾತು ಅವನಲ್ಲಿ ರೂಪಗೊಂಡಿರಬೇಕು. ಆದರೂ ಈ ಕಾಲದ ತರುವಾಯು ಜೈನಧರ್ಮ ಕರ್ನಾಟಕದಲ್ಲಿ ವೇಗವಾಗಿ ಬೆಳೆಯಿತು. ಬಹುಶಃ ಅಲ್ಲಿಯವರೆಗಿನ ಧರ್ಮಸಂಘರ್ಷದಲ್ಲಿ ಪ್ರಬಲ ಎದುರಾಳಿಯಾದ ಬೌದ್ಧಧರ್ಮ

ಹಿಂದೆ ಸರಿದುದುದು ಇದಕ್ಕೆ ಒಂದು ಕಾರಣವಿರಬೇಕು. ಇಲ್ಲವೇ ಅದಕ್ಕೆ ಅಂತಹ ಯಾವ ಪ್ರಬಲ ಎದುರಾಳಿಯೂ ಇಲ್ಲದಿರಬೇಕು.

ಈ ಸಮನ್ವಯದ ಮಾತುಗಳು ಅಲ್ಲಿಂದಲೇ ಶುರುವಾದರೂ ಸಹ, ಅದು ಹೆಚ್ಚಾಗಿ ಜಾರಿಯಾಗುವುದು 10ನೇ ಶತಮಾನದ ನಂತರ. ಇಲ್ಲಿ ಎರಡು ರೀತಿಯ ಸಹಿಷ್ಣುತೆಯನ್ನು ನಾವು ಕಾಣಬಹುದು. ಮೊದಲನೆಯದು ಜೈನರಿಗೆ ಸಂಬಂಧಿಸಿದ್ದು. ಇವರು ಇತರೆ ಧರ್ಮಗಳೊಡನೆ ಮಾಡಿಕೊಂಡ ಧಾರ್ಮಿಕ ಒಪ್ಪಂದಗಳು. ಇದರ ಫಲಗಳು ಇಲ್ಲಿ ಜೈನರು ಇತರೆ ಧರ್ಮಿಯರಿಗೆ ಶರಣಾಗಿ ಮಾಡಿಕೊಂಡ ಒಪ್ಪಂದಗಳಂತೆ ಇವು ಕಾಣುತ್ತವೆ. ಇವುಗಳ ಫಲವೆಂದರೆ ಜೈನರು ತಮ್ಮ ಜಿನಾಲಯಗಳನನ್ನು ಬ್ರಹ್ಮ ಜಿನಾಲಯ ಮತ್ತು ಎಕ್ಕೋಟಿ ಜಿನಾಲಗಳು ಎಂದು ಮರು ನಾಮಕರಣ ಮಾಡಿದ್ದು. ಬ್ರಹ್ಮ ಜಿನಾಲಯಗಳ ಉದಾಹರಣೆಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿ ನಮಗೆ ದೊರೆಯುತ್ತವೆ. ಆದರೆ ಎಕ್ಕೋಟಿ ಜಿನಾಲಯಗಳ ಉದಾಹರಣೆಗಳು ನಮಗೆ ತುಂಬಾನೆ ದೊರೆಯುತ್ತವೆ. ಬ್ರಹ್ಮ ಜಿನಾಲಯ ಎಂದರೆ ವೈಷ್ಣವರೊಂದಿಗೆ ಮಾಡಿಕೊಂಡ ಒಪ್ಪಂದಗಳು. ಅಂದು ಜಿನಾಲಯಗಳು ಅತಿಯಾಗಿ ದಾಳಿಗೆ ಒಳಗಾಗಿದ್ದು ಶೈವರಿಂದಲೇ. ಅದಕ್ಕಾಗಿಯೇ ಉಳಿದಿರುವಂತಹ ತಮ್ಮ ಜಿನಾಲಯಗಳನ್ನು ಕಾಪಾಡಿಕೊಳ್ಳಲು ಅವರು ಈ ರೀತಿಯ ಒಪ್ಪಂದಗಳಿಗೆ ಒಪ್ಪಿಕೊಳ್ಳಬೇಕಾಯಿತು.

ಎರಡನೆಯ ಹಂತದ ಸಮನ್ವಯವೆಂದರೆ ಹರಿ–ಹರರ ಸಮನ್ವಯ ಇದು ಪ್ರಮುಖವಾಗಿ 10ನೇ ಶತಮಾನದ ನಂತರದಲ್ಲಿ ಕಾಣಬಹುದು. ನಮ್ಮ ಧಾರ್ಮಿಕ ಇತಿಹಾಸದಲ್ಲಿ ಶೈವರು ಜೈನರೊಂದಿಗೆ, ವೈಷ್ಣವರು ಜೈನರೊಂದಿಗೆ ಜಗಳವಾಡಿದ ಅನೇಕ ಉದಾಹರಣೆಗಳು ಸಿಗುತ್ತವೆ. ಆದರೆ ಇದಕ್ಕಿಂತ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಶೈವ–ವೈಷ್ಣವ ಹೋರಾಟದ ಉದಾಹರಣೆಗಳು ಸಿಗುತ್ತವೆ. ಇದಕ್ಕೆ ವೈಷ್ಣವರ ರಾಜಕೀಯ ಪ್ರಜ್ಞೆ ಕಾರಣವಿರಬೇಕು. ವೈಷ್ಣವರು ಆರಂಭದಲ್ಲಿ ತಾವಿನ್ನೂ ಅಲ್ಪಸಂಖ್ಯಾತರಿದ್ದ ಸಮಯದಲ್ಲಿ ಕೇವಲ ರಾಜನ ಆಸ್ಥಾನದಲ್ಲಿಯಷ್ಟೆ ಪ್ರಾತಿನಿಧ್ಯವನ್ನು ಪಡೆದುಕೊಂಡಿದ್ದರು. ಮತ್ತು ಆ ಮುಂದೆ ತಮ್ಮ ಧಾರ್ಮಿಕ ಚಟುವಟಿಕೆಗಳನ್ನು ಪ್ರಭುತ್ವದ ಕೈಯಿಂದಲೇ ಹೆಚ್ಚು ಮಾಡಿಸಿದರು. ಈ ಕಾರಣ ನೇರ ಹೋರಾಟದಲ್ಲಿ ಅವರು ಹೆಚ್ಚಾಗಿ ಕಾಣಿಸಿಕೊಳ್ಳಲಿಲ್ಲ.

ಸಾಮಾನ್ಯವಾಗಿ ಶಾಸನದ ಆರಂಭವು ಅದು ಯಾರಿಗೆ ಸಂಬಂಧಿಸಿರುತ್ತದೋ ಆ ಅವನ ಮತದೇವತೆಯೊಂದಿಗೆ ಶುರುವಾಗುತ್ತದೆ. ಆದರೆ ಒಂದು ಕಾಲಘಟ್ಟದಲ್ಲಿ ಅವು ಸಂಯುಕ್ತ ರೂಪದಲ್ಲಿ

ಕಾಣಿಸಲು ಶುರುವಾದವು. 1182ರ ಶಾಸನವೊಂದು..'ಓಂ ನಮ ಶಿವಾಯ ಜಯತ್ಯಾ ವಿಷಯತಂ ವಿಷ್ಣೋರ್ವಾರಾದ . . . . .' ಎಂದು ಶುರುವಾಗುತ್ತದೆ[8]. ಕೂಡ್ಲಿಗೆಯ ಮತ್ತೊಂದು ಶಾಸನವು 'ಶ್ರೀ ಶಂಕರ ನಾರಾಯಣ ನಮಃ' ಎಂದು ಶುರುವಾಗುತ್ತದೆ[9]. ಹಡಗಲಿಯ ಶಾಸನವೊಂದು ಸಹ ಇಂತದ್ದೇ ಆರಂಭವನ್ನು ಹೊಂದಿದೆ[12]. ಕ್ರಿ.ಶ. 1194ರ ಅರಸಿಕೆರೆ ಶಾಸನದಲ್ಲಿ ಬಮ್ಮೆಯ ನಾಯಕ ಎಂಬುವವನು ತನ್ನನ್ನು 'ವೈಷ್ಣವ ಶಿವಾತ್ಮಕ' ಎಂದು ಕರೆದುಕೊಳ್ಳುತ್ತಾನೆ[10]. ಇನ್ನೂ ಮುಂದುವರೆದ ಕೆಲವು ರಾಜರುಗಳು ಅಗ್ರಹಾರಗಳನ್ನು ಸಹ ಈ ಹರಿ–ಹರ ಸಮನ್ವಯ ಹಿನ್ನೆಲೆಯಲ್ಲಿ ಕಟ್ಟಿದ್ದರು. ಇದಕ್ಕೆ ಉದಾಹರಣೆಯೆಂದರೆ ತಿಪಟೂರಿನ ಶಾಸನ[11]. ಇದರಲ್ಲಿ ಈ ರೀತಿಯ ಅಗ್ರಹಾರವೊಂದರ ದಾಖಲು ಇದೆ.

ಈ ಎಲ್ಲಾ ಶಾಸನಗಳು ಆ ಕಾಲದ ಒತ್ತಡದ ಫಲಗಳು. ಶೈವರ ಮತ್ತು ವೈಷ್ಣವರ ಮಧ್ಯೆ ಈ ಸಂಬಂಧವು ಸಾಧ್ಯವಾಗಲು ಆ ಕಾಲದಲ್ಲಿ ಅವರಿಬ್ಬರ ಮಧ್ಯದ ಘರ್ಷಣೆಗಿಂತ ಹೆಚ್ಚಿಗೆ ಅವರಿಬ್ಬರ ಪ್ರಾಬಲ್ಯವು ಕಾರಣವಿರಬೇಕು.

ಈ ಹರಿ–ಹರ ಕಲ್ಪನೆಯ ಅತಿಹೆಚ್ಚು ದಾಖಲೆಗಳು ಸಿಗುವುದು ಕ್ರಿ.ಶ. 1150 ರಿಂದ 1250ರ ಕಾಲಾವಧಿಯ ಮಧ್ಯದವು ಎಂಬುದು ಗಮನಹರಿಸಬೇಕಾದ ಅಂಶ. ಈ ಮೇಲೆ ನೀಡಿದ ಉದಾಹರಣೆಗಳೆಲ್ಲವೂ ಹೆಚ್ಚೂ ಕಡಿಮೆ ಅದೇ ಕಾಲದವು. ಇದೇ ಕಾಲಘಟ್ಟಕ್ಕೆ ಸಲ್ಲುವ ಕ್ರಿ.ಶ. 1224ರ ದಾವಣಗೆರೆಯ ಶಾಸನವು ಈ ವಿಷಯಕ್ಕೆ ಇನ್ನಷ್ಟು ಪುಷ್ಠಿ ನೀಡುತ್ತದೆ[13]. ಅದು ಹೀಗೆ ಹೇಳುತ್ತದೆ.

**ಹರಿಯಿಂ ಬಿಟ್ಟು ದೈವಂ**
**ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್**
**ಹರನಿಂ ಬಿಟ್ಟು ದೈವ**
**ಧರಣಿತಳದೊಳಿಲ್ಲೆಂದು ಪೇಲ್ವರ್ ಕೆಲಂಬರ್**
**ನರರಾ ಸಂದೇಹಮಂ ಪಿಂಗಿಸತಿಶಯದಿಂ ಕೂಡಲೂರಲ್ಲಿ ಶೋಭಾ ।**
**ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕಕೆ ನಮ್ಮಂ ॥**

ಇಲ್ಲಿ ಕವಿಯು ತುಂಬಾ ಸ್ಪಷ್ಟವಾಗಿಯೇ ಆ ಕಾಲದಲ್ಲಿದ್ದ ಹರಿಹರ ಭೇಧ ನೀತಿಯನ್ನು ಹೇಳುವುದರ ಜೊತೆಗೆ ಆ ಭೇಧವನ್ನು ನಿರಾಕರಿಸುತ್ತಾ, ಹರಿಹರರು ಒಂದೇ ಎಂಬುದಾಗಿ ಸಾರಿದ್ದಾನೆ.

ಇಲ್ಲೊಂದು ಪ್ರಶ್ನೆಯನ್ನು ಹಾಕಿಕೊಳ್ಳಬಹುದು. ಹೀಗೆ ಅಭೇಧ ನೀತಿಯು ಶೈವ ಮತ್ತು ವೈಷ್ಣವರಲ್ಲಿಯೇ ಉಂಟಾಗಲು ಕಾರಣ ಏನು. ಜೈನರೊಂದಿಗೆ ಏಕೆ ಸಾದ್ಯವಾಗಲಿಲ್ಲ. ಹಿಂದೆ ಹೇಳಿದಂತೆ ಎಕ್ಕೋಟಿ ಜಿನಾಲಯ ಮತ್ತು ಬ್ರಹ್ಮಜಿನಾಲಯ ಮಟ್ಟದಲ್ಲಿ ಅದು ಆಯಿತಾದರೂ ಸಮಾನ ಹಿನ್ನೆಲೆಯಲ್ಲಿ ಅದು ಆದದಲ್ಲ.ಬಹುಶಃ ಅಷ್ಟೊತ್ತಿಗಾಲೇ ಜೈನರು ಅಲ್ಪಸಂಖ್ಯಾತರಾಗಿದ್ದಿರಬೇಕು. ಮತ್ತು ಪ್ರಾಬಲ್ಯವನ್ನು ಕಳಕೊಂಡಿರಬೇಕು.ಅಲ್ಲದೆ ಅಹಿಂಸೆ ಮುಂತಾದ ತಾತ್ವಿಕಗಳ ನೆಲೆಯಲ್ಲಿಯೂ ಸಹ ಜೈನರು ಸ್ವಲ್ಪ ದೂರ ಇದ್ದುದೂ ಇದಕ್ಕೆ ಕಾರಣವಿರಬೇಕು. ವೈಷ್ಣವರು ಗಣನೀಯವಾಗಿ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಳ್ಳುತ್ತಿದ್ದ ಕಾಲವದು. ಈ ಕಾರಣಕ್ಕೆ ಕವಿ ಅಲ್ಲಿ ಎರಡೇ ವಿಭಾಗ ಮಾಡುತ್ತಾನೆ. ಆ ಊರ ಹೆಸರನ್ನು ಗಮನಿಸಬೇಕಿದೆ. ಹೆಸರಿನಲ್ಲಿಯೇ **'ಕೂಡು'** ಎಂಬುದನ್ನು ಒಳಗೊಂಡಿದೆ. ಹರಿ–ಹರರು ಕೂಡಿಕೊಂಡಿದ್ದಕ್ಕೆ ಸಾಂಕೇತಿಕತೆಯೆಂದು ಸುಮ್ಮನೆ ಅಂದುಕೊಳ್ಳಬಹುದಷ್ಟೆ. ಈ ಹರಿಹರ ಸಮನ್ವಯದ ಮೂಲ ಕಾಲವನ್ನು ಗುರುತಿಸುವುದು ಕಷ್ಟ.ಪ್ರಾಚೀನವೆಂದರೆ ಮಂಗಳೇಶನು ತೋಡಿಸಿದ ಕ್ರಿ.ಶ. 578ರ ವೈಷ್ಣವ ಗುಹೆಯಲ್ಲಿ ಹರಿಹರನ ಸುಂದರ ವಿಗ್ರಹವನ್ನು ನಾವು ಕಾಣಬಹುದು[14]. ಈ ಸಮನ್ವಯವು ಶಾಸನಗಳ ಮತ್ತು ಕೃತಿಗಳ ಶ್ಲೋಕ ಪದ್ಯಗಳಲ್ಲಿ ಮಾತ್ರ ಕಂಡುಬರುವುವಂತದ್ದಲ್ಲ. ಭೂಮಿ, ದಾನ, ದೇವಾಲಯ ನಿರ್ಮಾಣ, ಜಿರ್ಣೋದ್ಧಾರ ಮುಂತಾದ ಕಡೆಗಳಲ್ಲಿಯೂ ಸಹ ಕಂಡುಬರುತ್ತದೆ.

ಒಂದೇ ಶಾಸನದಲ್ಲಿ ಬಾಚಭೂಪ ಎನ್ನುವವನು ವಿಷ್ಣುದೇವಾಲಯವನ್ನೂ ಬಾಚೇಶ್ವರ ದೇವಾಲಯವನ್ನೂ ಸಭಾವಾಸದೊಂದಿಗೆ ಕಟ್ಟಿಸಿದ್ದನ್ನು ಮುಕ್ಕುಂದಿ ಶಾಸನವು ಹೇಳುತ್ತದೆ. ಕಾಲ ಕ್ರಿ.ಶ 1088. ಆರನೇಯ ವಿಕ್ರಮಾದಿತ್ಯನ ದಂಡನಾಯಕ ಮಾದಿರಾಜನು ದೈತಾಣದಲ್ಲಿ ಕಂದರ್ಪೇಶ್ವರ ಮತ್ತು ಕೇಶವ ದೇವಾಲಯಗಳನ್ನು ಕಟ್ಟಿಸಿ ಅವಕ್ಕೆ ವಿವಿಧ ರೀತಿಯ ದಾನಗಳನ್ನು ನೀಡುತ್ತಾನೆ. ಮತ್ತು ಇದೇ ವಿಕ್ರಮನ ದಂಡನಾಯಕನಾದ ನಾರಾಯಣಭಟ್ಟನು ನೀಲಕಂಠೇಶ್ವರ ಮತ್ತು ಕೀರ್ತಿನಾರಾಯಣ ದೇವಾಲಯಗಳನ್ನು ಕಟ್ಟಿಸುತ್ತಾನೆ. ಈ ದೇವಾಲಯಗಳಿಗೆ ವಿಕ್ರಮಾದಿತ್ಯನು ದಾನ–ದತ್ತಿ ನೀಡುತ್ತಾನೆ[16]. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಆ ಮಂತ್ರಿಗಳು ವೈಷ್ಣವರಾಗಿದ್ದೂ, ಶೈವನಿಲುವಿವನಾದ ರಾಜನನ್ನು ಮೆಚ್ಚಿಸಲು ಈ ರೀತಿಯ ದೇವಾಲಯ ನಿರ್ಮಿಸಿರುವ ಸಾಧ್ಯತೆಯಿದೆ.

ಒಂದೇ ಶಾಸನದಲ್ಲಿ ಗೋಹಿಲೇಶ್ವರ ಮತ್ತು ಶ್ರೀ ಕೇಶವ ದೇವರಿಗೆ ಭೂಮಿಯನ್ನು ದಾನ ನೀಡಿದ ವಿಷಯವು ಗೌರವ ಶಾಸನವೊಂದರಲ್ಲಿ ದಾಖಲಾಗಿದೆ[17]. ಈ ಹರಿಹರ ಸಮನ್ವಯತೆಯು ಈ ದೇವಾಲಯ ಮಟ್ಟಗಳಿಗಷ್ಟೇ ನಿಲ್ಲದೇ ಎಷ್ಟರ ಮಟ್ಟಿಗೆ ವ್ಯಾಪಿಸಿತ್ತೆಂದರೆ, ತಮ್ಮನ್ನು ವಿಷ್ಣು ವಂಶೋದ್ಭವರೆಂದು ಕರೆದುಕೊಳ್ಳುವ ಸೇವುಣದೊರೆಗಳು ಸೊನ್ನಲಿಗೆ ಕಪಿಲಸಿದ್ದ ಮಲ್ಲಿಕಾರ್ಜುನನ ಪರಮ ಭಕ್ತರಾಗಿದ್ದರು. ಇವರ ಬಹುತೇಕ ಶಾಸನಗಳು ಸಿದ್ಧಾರಾಮನ ವಚನಗಳ ಮೂಲಕವೇ

ಆರಂಭವಾಗುತ್ತವೆ[18,19,20,21,22]. ಇಷ್ಟೇ ಅಲ್ಲದೇ ಇವರ ಅತಿಹೆಚ್ಚು ದಾನಗಳು ಸಲ್ಲಿಕೆಯಾಗಿರುವುದು ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೇನೇ. ಸಿಂಗಣನ ಈ ಶಾಸನವನ್ನು ಗಮನಿಸಿ[23]. ವಿಷ್ಣು ವಂಶೋದ್ಭವ, 'ಯಾದವ ಕುಳಕಳಿಕಾ' ಎಂದು ವರ್ಣನೆಯೊಂದಿಗೆ ಶುರುವಾಗುವ ಈ ಶಾಸನವು 'ಎತ್ತಿನೂರು' ಎಂಬ ಊರನ್ನು 'ಲಿಂಗಾಪುರ'ವೆಂದು ಬದಲಾಯಿಸಿದ್ದನ್ನು ಹೇಳುತ್ತದೆ. ಈ ಕಾರ್ಯವು ಅಲ್ಲಿಯ ಮಹಾ ಪ್ರಧಾನರಿಂದ ನಡೆಯುತ್ತದೆ.

ಇವರ ಈ ರೀತಿಯ ಚಟುವಟಿಕೆಗಳನ್ನು ಎರಡು ರೀತಿಯಲ್ಲಿ ಅರ್ಥಮಾಡಿಕೊಳ್ಳಬಹುದಾದ ಸಾಧ್ಯತೆಯಿದೆ.ಇವರು ತಮ್ಮನ್ನು ವಿಷ್ಣು ವಂಶಜರು ಎಂದು ಕರೆದುಕೊಂಡದಕ್ಕೆ ಕಾರಣ ಇವರು ಯಾದವ ಕುಲದವರಾಗಿದ್ದರಿಂದ ಇಲ್ಲವೇ 'ವಿಷ್ಣುವಿನ ಅಂಶ ಇಲ್ಲದವರು ರಾಜ್ಯವನ್ನು ಆಳಲಾರರು' ಎಂಬ ಆ ಕಾಲದಲ್ಲಿ ಸಾಮಾನ್ಯವಾಗಿ ಗ್ರಹಿಕೆಯಲ್ಲಿದ್ದ ನಂಬಿಕೆಯಿಂದ. ಎರಡನೆಯದಾಗಿ ಶಿವನಿಗೆ, ಶಿವಭಕ್ತರಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಹೆಚ್ಚಾಗಿ ಮಾಡುತ್ತಿದ್ದ ಕಾರಣ ಅಲ್ಲದೆ ಅಂದಿನ ಶೈವರ ಬಹುಸಂಖ್ಯೆಯು ಇದಕ್ಕೆ ಕಾರಣವಿರಬೇಕು. ಈ ಎರಡನ್ನೂ ಒಳಗೊಂಡಂತೆ ಆ ಅರಸರಲ್ಲಿದ್ದ ಸಮನ್ವಯದ ಮನಸ್ಥಿತಿಯು ಇಂತಹ ಕೆಲಸಗಳಿಗೆ ಪ್ರೇರೆಪಿಸಿದ್ದರಿಬೇಕು. ಇನ್ನೊಂದು ಬಹುಮುಖ್ಯ ಅಂಶವೆಂದರೆ ಹೊಯ್ಸಳರ ಶಾಸನಗಳ ಪ್ರಾರ್ಥನಾ ಪದ್ಯಗಳಲ್ಲಿ ಈ ಶಿವ ಮತ್ತು ವಿಷ್ಣುವಿನ ಸ್ತುತಿಯು ಗಣನೀಯವಾಗಿ ಬರುತ್ತದೆ. ಬಹುಶಃ ವಿಷ್ಣುವರ್ಧನನ ಕಾಲಘಟ್ಟದವರೆಗೂ ಬಹುತೇಕ ಜೈನರಾಗಿದ್ದ ಹೊಯ್ಸಳರು, ಆ ನಂತರದಲ್ಲಿ ವೈಷ್ಣವಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು. ಈ ಎರಡೂ ಅಲ್ಲದ ಶೈವ ಉಪಾಸನೆಯೂ ಅವರಲ್ಲಿ ಕಂಡುಬರುತ್ತದೆ. ವಿಷ್ಣುವರ್ಧನನ ಹೆಂಡತಿಯಾದ ಶಾಂತಲೆಯ ಈ ಪರಿಸ್ಥಿತಿಯನ್ನು ನೋಡಿ. ಈಕೆಯ ಪರಿಸ್ಥಿತಿಯನ್ನು ಚಿದಾನಂದಮೂರ್ತಿಯವರು ತ್ರಿವೇಣಿ ಸಂಗಮ ಎಂಬುದಾಗಿ ಕರೆಯುತ್ತಾರೆ. ಈಕೆ ಜೈನೀಯಳು[24]. ಈಕೆಯ ತಂದೆ ಶಿವಭಕ್ತ[25]. ಈಕೆಯ ತಾಯಿ ಜೈನ[26]. ಈಕೆಯ ತಾಯಿಯು ಜೈನೆಯಾದರೂ ಕೂಡ ಒಂದು ಶಿವನ ಗುಡಿಯನ್ನು ಕಟ್ಟಿಸುತ್ತಾಳೆ[27]. ಈಕೆಯ ಗಂಡನಾದಂತಹ ವಿಷ್ಣುವರ್ಧನನು ಮೊದಲು ಜೈನನಾಗಿದ್ದ. ಆ ನಂತರದಲ್ಲಿ ವೈಷ್ಣವ ಧರ್ಮವನ್ನು ಸ್ವೀಕರಿಸುತ್ತಾನೆ. ಇವೆಲ್ಲವನ್ನು ನೋಡಿದಾಗ ಈಕೆಯೆ ಸಮನ್ವಯೆಯಂತೆ ಕಾಣುತ್ತಾಳೆ. ಈ ರೀತಿ ಗಂಡ–ಹೆಂಡತಿ ಮಕ್ಕಳು ಎಲ್ಲರೂ ಬೇರೆ–ಬೇರೆ ಮತಕ್ಕೆ ಸೇರಿದವರಾಗಿದ್ದರೂ ಕೂಡ ಒಂದೇ ಕುಟುಂಬದಲ್ಲಿ ಅನೋನ್ಯವಾಗಿ ಬಾಳುತ್ತಿದ್ದ ಉದಾಹರಣೆಗಳು ನಮಗೆ ಅನೇಕ ಸಿಗುತ್ತವೆ.

ಹೀಗೆ ಗಂಡ ಹೆಂಡತಿಯರು ಬೇರೆ ಬೇರೆ ಧರ್ಮಗಳಿಗೆ ಸೇರಿದವರಾಗಿದ್ದರೂ ಕೂಡ ಅನೋನ್ಯವಾಗಿ ಸಂಸಾರ ಮಾಡಿರುವಂತಹ ಅನೇಕ ಉದಾಹರಣೆಗಳನ್ನು ನಾವು ಪ್ರಾಚೀನ ಕರ್ನಾಟಕದಲ್ಲಿ ಕಾಣುತ್ತೇವೆ. ಪೆರ್ಗಡೆ ದೋಯಿಪಯ್ಯ ಮತ್ತು ಗುಣಾಬ್ಬೆ ಎನ್ನುವವರ ಗುಣಗಾನ

ಒಂದು ಶಾಸನದಲ್ಲಿಬರುತ್ತದೆ[28]. ಈ ದೋಯಿಪಯ್ಯನು ತ್ರೈಪುರುಷ ದೇವಾಲಯವನ್ನು ಕಟ್ಟಿಸುತ್ತಾನೆ. ಇದಲ್ಲದೆ ಹನ್ನೆರೆಡು ವಿಷ್ಣುದೇವಾಲಯ ಗರುಡ ಮಾನಸ್ತಂಭಗಳನ್ನು ಮಾಡಿಸುತ್ತಾನೆ. ಈತನ ಪತ್ನಿಯು ಜೈನೆಯಾಗಿದ್ದು ಆಕೆಯನ್ನು **'ಜೈನದಾನ ಧರ್ಮಾಮೃತೆ'** ಎಂದು ಕರೆಯಲಾಗುತ್ತಿತ್ತಂತೆ. ಜೊತೆಗೆ ಈಕೆಯನ್ನು **'ಧೋಯಿಪಯ್ಯನುದ್ಧಾಮಕುಳಕ್ಕೆ ತಕ್ಕಸತಿ ಮಿಕ್ಕ ಪತಿಬ್ರತೆ'** ಎಂದು ಶಾಸನದಲ್ಲಿ ವರ್ಣಿಸಲಾಗಿದೆ. ಇವರ ಮಗನು ಮಾಹುವಶೆಟ್ಟಿ ಎಂದು ತಿಳಿದುಬರುತ್ತದೆ. ಇಲ್ಲಿ ಗಂಡ–ಹೆಂಡತಿಯರು ಅನೋನ್ಯವಾಗಿ ಇದ್ದುದಷ್ಟೆ ಅಲ್ಲದೆ ತಮ್ಮ ತಮ್ಮ ಧರ್ಮಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ಚಟುವಟಿಕೆಯಲ್ಲಿಯೂ ತೊಡಗಿದ್ದರು. ಇದನ್ನು ಶಾಸನದಲ್ಲಿ ಸವಿವರವಾಗಿಯೇ ವರ್ಣಿಸಲಾಗಿದೆ.

ಇಂತಹ ಗಂಡ–ಹೆಂಡತಿಯರ ಸಂಖ್ಯೆ ಆ ಕಾಲದಲ್ಲಿ ಅಗಣಿತವಾಗಿಯೇ ಇರಬೇಕು. ಈ ಕಾರಣಕ್ಕೆ

**'ಪೆಂಡತಿ ಮಾಹೇಶ್ವರಿ ಗಡ**

**ಗಂಡಂ ಗಡ ಜೈನನ್ ಅವರ್ ಮಕ್ಕಳ್**

**ಗಡ ಮಾರ್ತಂಡಂಗೆ ಭಕ್ತರೆನಿಪಾ**

**ಭಂಡಂಗುತ್ತಮದ ಜೈನವೆಸರೆಂತೆಸೆಗುಂ'**

ಎಂದು ಕವಿಯೊಬ್ಬ ಹೇಳುತ್ತಾನೆ[29]. ಹೆಂಡತಿ ಶೈವ ಭಕ್ತೆ, ಗಂಡ ಜೈನ. ಇಷ್ಟಲ್ಲದೆ ಅವರ ಮಕ್ಕಳು ಮಾರ್ತಂಡಂಗೆ ಭಕ್ತರು. ಇವರನ್ನು ಜೈನರೆಂದು ಹೇಗೆ ಕರೆಯಲಾದೀತು ಎಂದು ಕವಿ ಪ್ರಶ್ನಿಸಿದ್ದಾನೆ. ಈ ರೀತಿ ಬೇರೆ ಬೇರೆ ಮತಕ್ಕೆ ಸೇರಿದ್ದ ಅನೇಕ ಕೂಡುಕುಟುಂಬಗಳು ಆ ಕಾಲದಲ್ಲಿದ್ದವು. ಅವರಿಗೆ ಅದು ಸಮಸ್ಯೆಯೆ ಆಗಿರಲಿಲ್ಲವೇನೋ. ಆದರೆ ಧರ್ಮದ ಮುಂದಾಳುಗಳು, ಮುಖಂಡರು ಎಂದು ಕರೆಯಿಸಿಕೊಂಡವರಿಗೆ ಇದು ಬಹುದೊಡ್ಡ ಸಮಸ್ಯೆಯಾಗಿ ಕಾಡಿರಬೇಕು. ಅದೇ ಕವಿಯು ಮುಂದುವರೆದು ಈ ರೀತಿಯ ಇನ್ನೂ ಜನರ ಬಗ್ಗೆ ಹೇಳುತ್ತಾನೆ.

**ಒಂದೆಸೆಯೊಳ್ ಜಿನಬಿಂಬಮ**

**ನೊಂದೆಸಯೊಳ್ ಲಿಂಗ ವಿಷ್ಣು ಬಿಂಬಮನವನ**

**ತೊಂದಡೆಯೊಳ್ ಪೂಜಿಸುವಾ**[30]

ಎನ್ನುತ್ತಾನೆ. ಒಬ್ಬ ವ್ಯಕ್ತಿಯು ಒಂದೆಡೆ ಜಿನವನ್ನು ಪೂಜಿಸುವನು. ಇನ್ನೊಂದೆಡೆ ವಿಷ್ಣುವನ್ನು. ಮತ್ತೊಂದೆಡೆ ಲಿಂಗವನ್ನು ಪೂಜಿಸುವನು.ಹೀಗೆ ಪೂಜಿಸುವ ಅವನನ್ನು ಇಲ್ಲಿ ಕವಿಯು ವ್ಯಂಗವಾಡಿದ್ದಾನೆ. ಎಲ್ಲಾ ಮತಗಳವರ ದೇವರನ್ನು ಪೂಜಿಸುವ ಇಂತಹವರನ್ನು 'ಸಮನ್ವಯಿ'ಗಳು

ಎಂದು ಕರೆಯದೆ ಹೀಗಳೆಯುತ್ತಿದುದು ಆ ಕಾಲದ ವ್ಯಂಗವೇ ಸರಿ. ಇದೇ ಕೆಲಸವನ್ನು ಆಳುವವರು ಮಾಡಿದರೆ ಅವರನ್ನು 'ಸರ್ವಧರ್ಮ ಸಮನ್ವಯಿ'ಗಳು ಎನ್ನುತ್ತಾರೆ. ಇವರೊಂದಿಗೆ ಇನ್ನೊಂದು ವಾಸ್ತವವೂ ಇದೆ. ಸ್ವಭಾವತಃ ಭಯದಿಂದ ಕೂಡಿದ ಮನುಷ್ಯರೂ ಸಹ, ಆಯಾ ದೇವರುಗಳಿಗೆ ಅಂಜಿ ಪೂಜಿಸಿತ್ತಲೂ ಇರಬಹುದು. ಅದು ಎರಡನೆಯ ಮಾತು. ಆತನು ಅಜ್ಞಾನ ಜನಿತನಾಗಿ ಇತರೆಮತಗಳನ್ನು ದ್ವೇಷಿಸಿದ್ದರೆ ಅದು ತಪ್ಪಾಗುತ್ತಿತ್ತು. ಇಲ್ಲಿ ಪೂಜಿಸುವುದನ್ನು ತಪ್ಪೆಂದು ಕರೆಯಲಾಗಿದೆ. 'ಎನ್ನ ಸಮಯಾಭಿಮಾನ ನಿಮಿತ್ತ ಮಾಡಿದರೆ ದೋಷವೆನಗಿಲ್ಲ' ಎನ್ನುವಂತಹವರು ಧರ್ಮವೀರರು ಎಂದು ಕರೆಯಿಸಿಕೊಳ್ಳುತ್ತಿದ್ದರು. ಈ ವಿಷಯವನ್ನು ಮತ್ತೊಂದು ಕಡೆ ವಿವರಿಸಲಾಗಿದೆ. ಆದರೆ ಹೀಗೆ ಇನ್ನೊಬ್ಬರ ದೇವಾಲಯಗಳನ್ನು ನಾಶ ಮಾಡುತ್ತಿದ್ದಂತಹ ಕಾಲದಲ್ಲಿ ಎಲ್ಲಾ ದೇಗುಲಕ್ಕೆ ಕೈ ಮುಗಿವವರನ್ನು

**'ದೇಗುಲಂ ಕಂಡಲ್ಲಿಗೆ**

**ಪೋಗಿ ಮಹೇಶ್ವರನುಮಪ್ಪ ಬಸದಿಗೆ ಬಂದಿ**

**ರ್ದಾಗಳೆ ಜೈನನುಮಪ್ಪಾ**

**ಕಾಗೆಗೆ ಸಮ್ಯಕ್ತ್ವಮೊಪ್ಪಲೇನರಿದಪುದೇ'**[31].

ಎಂದು ಹಂಗಿಸುತ್ತಾನೆ ಕವಿ. ದೇವಾಲಯ ಕಂಡಾಗ ಶಿವನನ್ನು ಕಾಣುವ, ಬಸದಿ ಕಂಡಾಗ ಜಿನನನ್ನು ಕಾಣುವವರನ್ನು ಕಾಗೆಗಳು ಎಂದು ಹಳಿಯಲಾಗಿದೆ. ಇದು ಸಾಮಾನ್ಯರ ಕತೆಯಾಯಿತು. ಈಗ ಇವರಂತೆಯೇ ಎಲ್ಲಾ ದೇವರುಗಳಿಗೆ ಕೈ ಮುಗಿದು ದೊಡ್ಡವರೆನಿಸಿಕೊಂಡವರ ಕತೆಯನ್ನು ನೋಡೋಣ. ಸೋಮಯಾಜಿ ಎನ್ನುವವನು ಗೋಪುರ ನಗರದಲ್ಲಿ ಕೇಶವ ದೇವಾಲಯದ ಮಾಡಿದ. ಅಲ್ಲಿ ಸೂರ್ಯಗ್ರಹಣ ನಿಮಿತ್ತ ಕೇಶವ, ಹರಿಹರ, ಗಣಪತಿ, ಸರಸ್ವತಿ, ಸೂರ್ಯ, ಉಮಾಮಹೇಶ್ವರ ದೇವರ ಪೂಜೆಗಾಗಿ ಭೂಧಾನವನ್ನು ನೀಡುತ್ತಾನೆ[32]. ವಿಜಾಪುರ ಜಿಲ್ಲೆಯ ಲೋಕಾಪುರದ ಶಾಸನವೊಂದು ತೈಲಕಬ್ಬೆಯ ನಾಲ್ವರು ಮಕ್ಕಳಲ್ಲಿ ಒಬ್ಬನಾದ ಲೋಕತಿ ಎನ್ನುವವನು ಲೋಕೇಶ್ವರ ದೇವಾಲಯ ಮತ್ತು ಲೋಕ ಸಮುದ್ರ ಹೆಸರಿನ ಕೆರೆಯನ್ನು ನಿರ್ಮಿಸಿ ಅದನ್ನು ಹರಿ,ಹರ ಜಿನ ಮತ್ತು ಬೌದ್ಧರಿಗೆ ಅರ್ಪಿಸಿದ್ದಾಗಿ ತಿಳಿಸುತ್ತದೆ[33]. ರಟ್ಟಯರು ಎಂಬ ಬಿರುದು ಹೊಂದಿದ್ದ ರಾಜನೊಬ್ಬ ಕನ್ನ ಸಂಕ್ರಾಂತಿ ನಿಮಿತ್ತ 108 ಜನರಿಗೆ ದಾನ ನೀಡುತ್ತಾನೆ. ಅದನ್ನು ವಿಷ್ಣುದೇವರಿಗೆ, ಸುಬ್ರಹ್ಮಣ್ಯ, ರಾಮೇಸ್ವರ, ಸರಸ್ವತಿ, ಸೋಮೇಶ್ವರ. ಬಿಕೇಶ್ವರ ಬಳರಿ ಮೊರಕಬ್ಬೆ, ಬಳರಿ ಪಿರಿಯಕಬ್ಬೆ ಮುಂತಾದವರಲ್ಲಿ ಹಂಚುತ್ತಾನೆ[34]. ಆದರೆ ಈ ಹಂಚಿಕೆಯು ಅಸಮಾನತೆಯಿಂದ ಕೂಡಿತ್ತು. ಹಂಚಿಕೆಯಲ್ಲಿನ ಅಸಮಾನತೆಯನ್ನು ಒತ್ತಟ್ಟಿಗಿಟ್ಟು ನೋಡಿದಾಗ ಇಂತಹ ಕಾರ್ಯಗಳು ಧರ್ಮಗಳಲ್ಲಿ ಸಾಮರಸ್ಯವನ್ನು ಮೂಡಿಸುತ್ತಿದುದಂತೂ ನಿಜ.

ಇಂತಹವರನ್ನೂ ಸಹಒಂದೆಡೆ ಹಂಗಿಸಲಾಗಿದೆ. ಇಂತಹ ಎಂಬಲ್ಲಿ ಒಂದು ದೇವರಲ್ಲಿ ಶ್ರದ್ಧೆಯಿಲ್ಲದವರು ಎನ್ನುವುದಕ್ಕಿಂತ, ಎಲ್ಲಾ ದೇವರಲ್ಲಿ ಶ್ರದ್ಧೆ ಕಂಡವರು ಎನ್ನಬಹುದು. ನವಚೋಳರಾದರಲ್ಲಿ ಮೂವರ್ ಜಿನಭಕ್ತರ್, ಇರ್ವರ್ ಶಿವಭಕ್ತರ್, ಇರ್ವರ್ ವಿಷ್ಣುಭಕ್ತರು, ಮತ್ತೀರ್ವರ್ ಎಲ್ಲಾ ಮಂತಂಗಳಂ ಸಮವಾಗಿ ಕಂಡು ಒಂದರಲ್ಲಿಯೂ ಶ್ರದ್ಧೆಯಿಲ್ಲದಿರ್ದರ್[35]. ಎನ್ನುತ್ತಾನೆ. ಹೀಗೆ ಅಂದವನು ದೇವಚಂದ್ರ ಕವಿ. ಈತ ಜೈನವನ್ನು ಅನುಸರಿಸುತ್ತಿದ್ದುದೇ ಇದಕ್ಕೆ ಕಾರಣ. ಎಲ್ಲಾ ಮತಗಳನ್ನು ಸಮವಾಗಿ ಕಾಣುವುದು ಸಹ ದೋಷವೆಂದರೆ ಮತದ ಮಾನಸಿಕತೆ ಎಂತಹುದು ಎಂಬುದನ್ನು ನಾವು ಯೋಚಿಸಬೇಕಾಗುತ್ತದೆ.

ಹೀಗೆ ಸರ್ವಧರ್ಮಗಳಿಗೆ ಸಹಾಯ ಮಾಡುವ ಕೆಲಸವನ್ನು ಕೇವಲ ಪುರುಷರಷ್ಟೇ ಮಾಡಲಿಲ್ಲ. ಮಹಿಳೆಯರೂ ಇದರಲ್ಲಿ ಮುಂದಿದ್ದರು. ಚಕ್ರವರ್ತಿ 2ನೇ ಜಯಸಿಂಹನ ಸಹೋದರಿಯಾದ ಅಕ್ಕಾದೇವಿಯು 'ಜಿನಬುದ್ಧಾನಂತರುದ್ರಾಗಮ ನಿಗದಿತ ಧರ್ಮಂಗಳಂ ಮಾಡಿ'ದಂತೆ ಒಂದು ಶಾಸನವು ಹೇಳುತ್ತದೆ[36]. ಕಾಕತೀಯ ರುದ್ರದೇವನು ವಾರಂಗಲ್ಲಿನಿಂದ ಆಳ್ವಿಕೆ ಮಾಡುತಿದ್ದಾಗ ಅವನ ಮಗಳು ರುದ್ರಮದೇವಿಯು ಅಟ್ಟಳೆನಾಡಿನಲ್ಲಿ ಆಳುತ್ತಿದ್ದಳು. ಈಕೆಗೆ ಭೈರವರೂಪ ಎನ್ನುವವನು ಮಂತ್ರಿಯಿದ್ದ. ವಿಷ್ಣುವಿಗೆ ಗರುಡ, ರಾಮನಿಗೆ ಹನುಮಂತನಿದ್ದಂತೆ ಈತನು ಈಕೆಗೆ ಇದ್ದನು. ಈತನ ನಾಡು ಅಲ್ಲಲ್ಲಿ ಶಿವಭವನಗಳನ್ನು ತೀರ್ಥಗಳನ್ನು ಹೊಂದಿ ಪುರಗಳಲೆಲ್ಲಾ ಅಧಿಕವಾಗಿತ್ತು ಎಂದು ಶಾಸನವೊಂದು ಹೇಳುತ್ತದೆ[37]. ಬಹುಶಃ ಆಕೆ ವೈಷ್ಣವಳಿರಬೇಕು.ಭೈರವರೂನು ಶೈವನಿರಬೇಕು. ವಿಷ್ಣುವಿಗೆ ಗರುಡ, ರಾಮನಿಗೆ ಹನುಮಂತನಿದ್ದಂತೆ ಎಂದು ಆಕೆಯನ್ನು ಮೆಚ್ಚಿಸುವುದರ ಜೊತೆಗೆ ಆತನ ಊರು ಶಿವಮಯವಾಗಿದ್ದನ್ನು ಕುರಿತು ಶಾಸನವು ಹೇಳುತ್ತದೆ.

ಊರೊಡತಿ ವೆಣ್ಣಲಸೆಟ್ಟಿಕವ್ವೆ ಎನ್ನುವವಳನ್ನು ಕುರಿತು ಒಂದು ಶಾಸನ ಮಾತನಾಡುತ್ತದೆ[38]. ಭೂಮಿಗೊಪ್ಪುವಂತ ಶಿಲಾದೇಗುಲ ನಿರ್ಮಿಸಿ, ಹರಿಹರ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡುತ್ತಾಳೆ. ಈಕೆ ಧರ್ಮಸೂಕ್ಷ್ಮ ಮತ್ತು ಧರ್ಮ ಸಾಮರಸ್ಯವನ್ನು ಅರಿತವಳು ಎಂದು ಶಾಸನ ಹೇಳುತ್ತದೆ. ಜೊತೆಗೆ 'ವೆಣ್ಣಲನಾರಿಯಂತೆ ಮಾಡಿಸಿದ ನಾರಿಯರುಂಟೇ ಜಗದೊಳಗೆ' ಎಂದು ಪ್ರಶ್ನಿಸುತ್ತದೆ.

ಪ್ರಾಚೀನ ಕರ್ನಾಟಕದಲ್ಲಿ ಧರ್ಮಸಮನ್ವಯದ ವಿಷಯ ಎಂದು ಬಂದಾಗ ಒಂದು ಘಟನೆಯನ್ನು ಕುರಿತು ನಾವು ಹೇಳಲೇಬೇಕು. ಅದು ಬುಕ್ಕರಾಯನ ಕಾಲಘಟ್ಟದ್ದು. ಈ ಘಟನೆಯ ಕುರಿತಂತೆ ಶ್ರವಣಬೆಳಗೊಳದ ಒಂದು ಶಾಸನವು ಮಾಹಿತಿಯನ್ನು ನೀಡುತ್ತದೆ[39]. ಇದು ವೈಷ್ಣವ–

ಜೈನರ ಘರ್ಷಣೆಗೆ ಸಂಬಂಧಿಸಿದ್ದು. ಇದಕ್ಕೆ ಸಂಬಂಧಿಸಿದಂತೆ ಕಲ್ಯ ಮತ್ತು ಶ್ರವಣಬೆಳಗೊಳದಲ್ಲಿ ಎರಡು ಶಾಸನಗಳಿವೆ. ಇದು 'ಬುಕ್ಕರಾಯನ ಧರ್ಮ ಸಮನ್ವಯ' ಶಾಸನ ಎಂತಲೇ ಪ್ರಸಿದ್ಧಿಯನ್ನು ಪಡೆದಿದೆ.ಕರ್ನಾಟಕದ ಜೈನರು ಮೊದಲಿನ ಹಂತದಲ್ಲಿ ಇಲ್ಲಿ ಬೌದ್ಧರೊಂದಿಗೆ ಸಂಘರ್ಷವನ್ನು ನಡೆಸಿದರು. ಅವರ ನಿರ್ಗಮನದ ನಂತರ ಶೈವರೊಂದಿಗೆ ಸತತವಾಗಿ ಹೋರಾಡಿದರು. ಆ ನಂತರ ವೈಷ್ಣವರು ಪ್ರಬಲರಾದ ಮೇಲೆ ಅವರೊಂದಿಗೆಯು ಜಗಳವನ್ನು ಆಡಬೇಕಾಯಿತು. ಇವರೆಲ್ಲರ ನಂತರ ಬಂದ ಮುಸ್ಲಿಮರೊಂದಿಗೂ ಅವರು ಸಂಘರ್ಷವನ್ನು ಮಾಡಿದ್ದು, ಈ ವಿಷಯವನ್ನು ಬೇರೊಂದು ಕಡೆ ಹೇಳಲಾಗಿದೆ.

ಅಲ್ಲಿ ನಡೆದದ್ದು ಇಷ್ಟು ವಿಜಯನಗರದ ಬುಕ್ಕರಾಯನ ಕಾಲಕ್ಕಾಗಲೇ ವೈಷ್ಣವರು ಸಂಖ್ಯೆಯ ಬಲದಿಂದ ಬೆಳೆದಿದ್ದರು. ಈ ಸಮಯದಲ್ಲಿ ಇವರಿಗಿಂತ ಕಡಿಮೆ ಬಲದ ಜೈನರ ಮೇಲೆ ದಾಳಿ ಮಾಡಿ ಅವರನ್ನು ಕೊಲ್ಲುವುದು, ಅವರ ಜಿನಾಲಯಗಳನ್ನು ನಾಶ ಮಾಡುವುದು ಈ ಮುಂತಾಗಿ ಮಾಡುತ್ತಿದ್ದರು. ಇದರಿಂದ ನೊಂದ ಅಲ್ಲಿಯ ಜೈನರು ಬುಸವಿಶೆಟ್ಟಿಯ ನೇತೃತ್ವದಲ್ಲಿ ಬುಕ್ಕರಾಯನಿಗೆ ದೂರು ನೀಡುತ್ತಾರೆ. ಇದರಂತೆ ವಾದ–ವಿವಾದವು ನಡೆಯಲು ಬುಕ್ಕರಾಯನು ಇಬ್ಬರನ್ನೂ ಸಮನ್ವಯಗೊಳಿಸಿ ಒಂದು ಶಾಸನವನ್ನು ಹೊರಡಿಸುತ್ತಾನೆ. ಇದರಂತೆ ಜೈನರ ಮನೆಗೊಂದು ಹಣವನ್ನು ಸಂಗ್ರಹಿಸಿ ಅದನ್ನು ವೈಷ್ಣವರ ಕೈಗೆ ಕೊಟ್ಟು ಜೈನರ, ಅವರ ಜಿನಾಲಯಗಳ ರಕ್ಷಣೆಯನ್ನು ವಹಿಸುತ್ತಾನೆ. ಆ ನಂತರ ಇಬ್ಬರ ಕೈಯನ್ನೂ ಪರಸ್ಪರ ಕೂಡಿಸಿ ಇಬ್ಬರೂ ಒಂದೇ ಎಂಬುದಾಗಿ ಹೇಳಿ ಪ್ರಕರಣವನ್ನು ಮುಗಿಸುತ್ತಾನೆ.

ಪರಸ್ಪರದ ಕೈಯನ್ನು ಹಿಡಿಸಿದ್ದು ಒಳ್ಳೆಯ ಬೆಳವಣಿಗೆಯೇ ಆದರೂ ಸಹ, ದಾಳಿಗೊಳಗಾದ ಜೈನರಿಂದಲೇ ಹಣವನ್ನು ಸಂಗ್ರಹಿಸುವುದು ದೋಷವಾಗುತ್ತದೆ. ಚಿದಾನಂದ ಮೂರ್ತಿಯವರು ಇದನ್ನು ಉದಾತ್ತ ತೀರ್ಪು ಎನ್ನುತ್ತಾರೆ. ಆದರೆ ಇದು ಉದಾತ್ತವಲ್ಲ. ಇದು ರಾಜಕೀಯ ಚಾಣಾಕ್ಷ ನಡೆ. ಅಲ್ಪಸಂಖ್ಯಾತರಾದ ಜೈನರಿಗೆ ಅನ್ಯಾಯ ಮಾಡಿ, ಬಹುಸಂಖ್ಯಾತರಾದ ವೈಷ್ಣವರ ಪರ ತೀರ್ಪು ನೀಡಿದಂತೆ.ಇದು ಉದಾತ್ತ ತೀರ್ಪು ಅಲ್ಲದಿದ್ದರೂ, ದೊಡ್ಡ ಅನ್ಯಾಯವೇನೂ ಅಲ್ಲ. ಆ ಕಾಲದ ಸಾಮಾಜಿಕ ಮಿತಿಗನುಗುಣವಾಗಿ ರಾಜನು ವರ್ತಿಸಬೇಕಾಯಿತು ಅಷ್ಟೇ. ಆದರೂ ವಿಜಯನಗರದವರು ತಮ್ಮ ಧಾರ್ಮಿಕ ದೃಷ್ಟಿಕೋನದಲ್ಲಿ ಬಹಳ ಉದಾರವಾಗಿಯೇ ಇದ್ದರು.

ವಿಜಯನಗರದ ಧರ್ಮವೆಂದರೆ ಅದು ಎಲ್ಲಾ ಧಾರ್ಮಿಕ ಪಂತಗಳನ್ನು ಒಳಗೊಂಡಿದ್ದಾಗಿತ್ತು. ಉದಾತ್ತವಾದ ಮಹಾ ಸಾಮ್ರಾಜ್ಯಕ್ಕೆ ಉದಾಹರಣೆಯೆಂದರೆ ವಿಜಯನಗರವಾಗಿದೆ ಎಂದು

ವಿದ್ವಾಂಸರೊಬ್ಬರು ಹೇಳುತ್ತಾರೆ[40]. ಇವರ ಕಾಲದಲಿ ಶೈವ, ಜೈನ, ವೈಷ್ಣವಗಳಂತ ಪಾರಂಪರಿಕ ಧರ್ಮಗಳಲ್ಲದೆ ಇಸ್ಲಾಂ, ಕ್ರೈಸ್ತರಿಗೂ ದಾನ ನೀಡಲಾಗುತ್ತಿತ್ತಂತೆ. ಆದಾಯದ ಐದನೆಯ ಒಂದು ಭಾಗವನ್ನು ಸರ್ವಧರ್ಮ ಸಂಸ್ಥೆಗಳಿಗೆ ನೆರವು ನೀಡಲು ವ್ಯಯಿಸಲಾಗುತ್ತಿತ್ತಂತೆ. "ಕೃಷ್ಣದೇವರಾಯನ ಸ್ವಂತ ಧರ್ಮಯಾವುದೇ ಇರಲಿ, ಅವನು ಧಾರ್ಮಿಕ ಸಹಿಷ್ಣುತೆಯನ್ನು ತನ್ನ ರಾಜ್ಯದ ದೋರಣೆಯಾಗಿಸಿದನು. ಅದೇ ಕರ್ನಾಟಕದ ಧರ್ಮವೆನಿಸಿತು" ಎಂದು ಇನ್ನೊಬ್ಬ ವಿದ್ವಾಂಸನು ವರ್ಣಿಸುತ್ತಾನೆ[41]. ಈ ಮಾತಿಗೆ ಪೂರಕವಾಗಿ ಅನೇಕ ಉದಾಹರಣೆಗಳನ್ನು ಸಹ ನಾವು ನೋಡಬಹುದು. ಕೃಷ್ಣದೇವರಾಯನು ಕಟ್ಟಾ ವೈಷ್ಣವನಾಗಿದ್ದರೂ ಸಹ ಹಂಪೆಯ ವಿರುಪಾಕ್ಷ ದೇವಾಲಯವನ್ನು ಜಿರ್ಣೋದ್ಧಾರ ಮಾಡಿಸಿ, ಗೋಪುರವನ್ನು ಕಟ್ಟಿಸುತ್ತಾನೆ[42]. ಈತನ ನಿರೂಪದಿಂದ ಸರ್ವಮಾನ್ಯವಾಗಿ ದಾನ ನೀಡಿದ ಜಾಗಕ್ಕೆ ಎಂಟುದಿಕ್ಕಿಗು ಲಿಂಗ ಮುದ್ರೆಯ ಕಲ್ಲುಗಳನ್ನು ಗುರುತಾಗಿ ನೆಡಲಾಯಿತು. ಇದನ್ನು 'ಶಿವಶಾಸನ'ವೆಂದು ವಿಶೇಷವಾಗಿ ಕರೆಯಲಾಗಿದೆ[43]. ಹೀಗೆ ವೈಷ್ಣವ ದೊರೆಯೊಬ್ಬನು ದಾನ ಜಾಗಕ್ಕೆ ಲಿಂಗಮುದ್ರೆಯ ಕಲ್ಲುಗಳನ್ನಿಡುವುದು, ಅದನ್ನು ಶಿವಶಾಸನವೆಂದು ಕರೆಯುವುದು ಇವೆಲ್ಲಾ ಧಾರ್ಮಿಕ ಸಾಮರಸ್ಯತನದ ಪ್ರತೀಕಗಳೇ. ಇವರ ಕಾಲದಲ್ಲಿ 'ವಾಮನಮುದ್ರೆ' ಕಲ್ಲುಗಳು ಸಹ ಪ್ರಚಲಿತದಲ್ಲಿದ್ದವು ಎಂಬುದು ವಿಶೇಷ.

ಈ ಲಿಂಗ ಮುದ್ರೆಯನ್ನು ಒಳಗೊಂಡಂತೆ ಇನ್ನೂ ವಿಶೇಷ ಅಂಶಗಳನ್ನು ಇನ್ನೊಂದು ಶಾಸನವು ದಾಖಲಿಸುತ್ತದೆ[44]. ಇದರಲ್ಲಿ ದಾಖಲಾಗಿರುವ ಪ್ರಕಾರ ಕೃಷ್ಣದೇವರಾಯನು ತಿರುಮಲದೇವಿಯರ ಪಟ್ಟಣವನ್ನು ಮಾಡಿಸಿ, ಅದರ ನಾಲ್ಕು ಬಾಗಿಲಿಗೂ ಕಾಶಿ ವಿಶ್ವೇಶ್ವರನನ್ನು ಪ್ರತಿಷ್ಠಾಪಿಸುತ್ತಾನೆ. ಇದಕ್ಕೆ ಕೆರೆಯೊಂದನ್ನು ದಾನವಾಗಿಯೂ ಸಹ ನೀಡುತ್ತಾನೆ. ಈ ಊರಿನ ಗಡಿಗಳಿಗೆ 'ಲಿಂಗಮುದ್ರೆ'ಯ ಕಲ್ಲುಗಳನ್ನು ನೆಡೆಸುತ್ತಾನೆ.

ಕೃಷ್ಣದೇವರಾಯನ ಧಾರ್ಮಿಕ ನೀತಿಯನ್ನು ಹೇಳುವಾಗ ಇನ್ನೊಂದು ಅಂಶವನ್ನು ದಾಖಲಿಸಲೇಬೇಕು. ಅದು ಬಹಮನಿಯರ ವಿಚಾರವಾಗಿ. ಈತನು ಬಹಮನಿಯವರನ್ನು ಗೆದ್ದಾಗ ಅದನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳದೆ, ಅದಕ್ಕೆ ಮತ್ತೆ ಅದೇ ಮನೆತನದವರನ್ನು ರಾಜನನ್ನಾಗಿ ಮಾಡಿ 'ಯವನರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಪಡೆಯುತ್ತಾನೆ. ಅದು ಪದೇ ಪದೇ ಬಹಮನಿಯರು ವಿಜಯನಗರಕ್ಕೆ ದಾಳಿ ಮಾಡುತ್ತಿದ್ದಾಗಲೂ ಸಹ. ಈ ಸಮಯದಲ್ಲಿ ಬಹಮನಿಸುಲ್ತಾನರ ಬಗ್ಗೆಯೂ ಒಂದೆರೆಡು ಮಾತುಗಳು ಹೇಳುವುದು ಅವಶ್ಯಕ. ಈ ಬಹಮನಿಯವರೂ ಸಹ ಧಾರ್ಮಿಕ ಸಹಿಷ್ಣುತೆಯನ್ನು ಹೊಂದಿದವರಾಗಿದ್ದರು. ಇವರ ಮೊದಲ ಅರಸನಾದ ಹಸನ್ ಬಹಮನಿ ಗಂಗು ಸುಲ್ತಾನನು ತನ್ನ ಬಗ್ಗೆ ಒಂದು ಶಾಸನವನ್ನು ಹೀಗೆ

ಹಾಕಿಸಿಕೊಳ್ಳುತ್ತಾನೆ[45]. ಶ್ರೀ ಅಜಾಯಾ ಜಗದುತ್ಪತ್ತಿ ಸ್ಥಿತಿ ಸಂಹಾರ ಕಾರಿಣೇ ತ್ರಿಗುಣ ಗುಣಾತೀತ ಮೂರ್ತಯೇ ಬ್ರಹ್ಮಣೇ ನಮಃ । ಎಂದು ಶಾಸನವು ಆರಂಭವಾಗುತ್ತದೆ. ಮುಂದುವರೆದು ಬ್ರಹ್ಮನ ಆಜ್ಞೆಯಂತೆ ಬಲಶಾಲಿಯಾದ ಬಹಮನಿ ರಾಜನು ಹುಟ್ಟಿದನು. ಈತ ಇಂದ್ರ ಕುಬೇರರಂತೆ ವೈಭವವಂತ. ಇವನು ವಿಜಯನಗರದ ದೇವರಾಯನನ್ನು ಸೋಲಿಸಿದ್ದ (?)ರಾಜನಾದ ಅಹ್ಮದನು ರತಿಯಂತೆ ಸುಂದರಳಾದ ಶಹನಾಜಾ ಎಂಬ ಪತ್ನಿಯನ್ನು ಹೊಂದಿದ್ದ' ಎಂದು ಶಾಸನವು ಹೇಳುತ್ತದೆ. ಇಸ್ಲಾಮಿಗನಾದ ಈತನು 'ಬ್ರಹ್ಮ'ನ ದಯೆಯಿಂದ ಹುಟ್ಟಿದವನೆಂದು ಹೇಳಲಾಗಿದೆ. ಇದಲ್ಲದೆ ಇಲ್ಲಿ ಹೆಸರಿಸಲಾಗಿರುವ ಇಂದ್ರ, ಕುಬೇರ, ರತಿ ಮುಂತಾದವರು ಹಿಂದೂಗಳ ದೇವತಗಳೇ ಆಗಿದ್ದಾರೆ. ಇಂತಹ ಆಧಾರಗಳೇ ಸಾಕು ಅವರು ಹಿಂದೂಗಳನ್ನು ಯಾವ ದೃಷ್ಠಿಯಲ್ಲಿ ಕಾಣುತ್ತಿದ್ದರು ಎಂಬುದಕ್ಕೆ. ಇವನ ಮುಂದುವರೆದ ಅರಸರುಗಳೂ ಸಹ ಇವನ ಧಾರ್ಮಿಕತೆಯನ್ನು ಮುಂದುವರೆಸಿಕೊಂಡು ಬಂದರು. ಇವರ ಧಾರ್ಮಿಕ ಮನೋವೈಶಾಲ್ಯಕ್ಕೆ ಇನ್ನೊಂದು ಉದಾಹರಣೆಯನ್ನೂ ನೀಡಬಹುದು. ಇಮ್ಮಡಿ ಇಬ್ರಾಹಿಂ ಆದಿಲ್ ಶಾಹ್‌ನು ತನ್ನ ಸಂಗೀತಕ್ಕೆ ಕುರಿತಾದ ಕಿತಾಬ್ ಎ ನೌರಾಸ್ ಕೃತಿಯಲ್ಲಿ ಸರಸ್ವತಿ ದೇವಿಯನ್ನು ಆರಾಧಿಸಿ ಮುಂದುವರೆಯುತ್ತಾನೆ.

ಈ ವಿಜಯನಗರದ ಅರಸರು ಅನುಸರಿಸಿ ಬುನಾದಿಯನ್ನೇ ಅವರ ಮುಂದುವರೆಕೆಯಾದ ಪಾಳೆಯಗಾರರು ಸಹ ಅನುಸರಿಸಿದರು. ಇವರೂ ಸಹ ಮುಸ್ಲಿಂ ಧರ್ಮವನ್ನು ಉದಾರವಾಗಿಯೇ ಕಂಡರು.ಕೆಳದಿಯ ಅರಸ ವೆಂಕಟಪ್ಪನಾಯಕನು ಮಸೀದಿಯನ್ನು ಕಟ್ಟಿಸಿದ್ದನ್ನು ಒಂದು ಶಾಸನವು ದಾಖಲಿಸುತ್ತದೆ[46].ಅದು ಹೀಗೆ ಹೇಳುತ್ತದೆ. 'ವಿಶುದ ವೈದಿಕ ದ್ವೈತ್ತ ಸಿದ್ಧಾಂತ್ತ ಪ್ರತಿಷ್ಠಾಪಕ ಶಿವಗುರು ಭಕ್ತಿ ಪರಾಯಣರಾದ ಕೆಳದಿ ವೆಂಕಟಪ್ಪನಾಯಕರು ಭುವನಗಿರಿ ದುರ್ಗದಲ್ಲು ಕಟ್ಟಿಸ್ತ ಮಸೀದಿಗೆ ಕೊಟ ಧರ್ಮಶಾಸನ'. ಈತನು ಮಸೀದಿಯನ್ನು ಕಟ್ಟಿಸಿ ಅದಕ್ಕೆ ದಾನ–ದತ್ತಿಗಳನ್ನು ನೀಡಿದುದಾಗಿ ಈ ಶಾಸನವು ಹೇಳುತ್ತದೆ. ಈತನ ನಂತರ ಬಂದ ವೀರಭದ್ರನಾಯಕನೂ ಸಹ ಮುಸ್ಲಿಂ ಮತದವರಿಗಾಗಿ ಮಸೀದಿಕಟ್ಟುವ ಸಂಸ್ಕೃತಿಯನ್ನು ಮುಂದುವರೆಸುತ್ತಾನೆ. ಅದರ ಕುರಿತು ಒಂದು ಶಾನಸವು ಹೀಗೆ ಹೇಳುತ್ತದೆ[47]. "ವೀರಭದ್ರ ನಾಯಕರೂ ಆನಂದಪುರದ ಸೀಮೆ ಮಲದ ಗೋಪದ ತಾವರೆಗೆರೆ ಹೊಂದಿಕಟಿಸಿದ ಮಸೂತಿಯ ಧರ್ಮಕೆಕೊಟ ತಾಮ್ರಶಾಸನ" ಎಂದು ಶಾಸನವು ದಾಖಲಿಸುತ್ತದೆ. ಇದೇ ವಿಜಯನಗರಕ್ಕೆ ಸಂಬಂಧಿಸಿದಂತೆ ಮೂಡುಬಿದಿರೆ ಪ್ರಾಂತ್ಯವನ್ನು ಆಳಿಕೊಂಡಿದ್ದ ಬೈರವರಸನೂ ಸಹ ಇಂತದ್ದೆ ಧಾರ್ಮಿಕ ನೀತಿಯುಳ್ಳವನಾಗಿದ್ದ, ಒಂದು ಶಾಸನವು ಇದರ ಬಗ್ಗೆ ಮಾಹಿತಿಯನ್ನು ನೀಡುತ್ತದೆ[48]. ಶಾಸನದಲ್ಲಿ ಈತನನ್ನು ವಿಜಯನಗರದ ಸಂಗಮ ಅರಸರ ಅಳಿಯನೆಂದು ಹೇಳಲಾಗಿದೆ. ಬಹುಶಃ ದೇವರಾಯನ ಮಗಳ ಗಂಡನಿರಬಹುದು.ಇದರಲ್ಲಿ ಜೈನರ ಪರವಾದ ಗೇರುಸೊಪ್ಪೆಯನ್ನು ಎಲ್ಲಾರಿಗೂ ಒಪ್ಪುವಂತೆ ಈತ ರಾಜ್ಯವಾಳುತ್ತಿದ್ದ ಎಂದು ಹೇಳಲಾಗಿದೆ. ಈತನು

ಅನೇಕ ಬಸದಿ ಕಟ್ಟಿಸಿ.ಅಲ್ಲಿ ಪೂಜಾ ವ್ಯವಸ್ಥೆಯನ್ನು ಮಾಡಿದುದಾಗಿಯೂ ಶಾಸನ ಹೇಳುತ್ತದೆ. ಈ ವಿಜಯನಗರದ ಅರಸರು ಎಂತಹ ಧಾರ್ಮಿಕ ಸಮತೋಲನ ಉಳ್ಳವರಾಗಿದ್ದವರೆಂದರೆ "ದೇವರಾಯ ಮಹಾರಾಯರ ಶ್ರೀ ಪಾದಸೇವೆಯ ಕಟಿಗೆಯ ಅಹಮುದಖಾನನು ರಾಯರಿಗೆ ಧರ್ಮವಾಗಬೇಕೆಂದು ಕಟ್ಟಿಸಿದ ಧರ್ಮಸಾಲೆಯ ಬಾವಿಯನ್ನು" ಎಂದು ಒಂದು ಶಾಸನವು ಹೇಳುತ್ತದೆ[49]. ಇತರೆ ಧರ್ಮಗಳವರು ಹಾಕಿಸಿದ ಇಂತಹ 'ರಾಯರಿಗೆ ಧರ್ಮವಾಗಲಿ' ಎನ್ನುವ ಅನೇಕ ಶಾಸನಗಳು ಆ ಕಾಲದಲ್ಲಿ ದೊರೆಯುತ್ತದೆ.

ಶಾಸನವೊಂದರಲ್ಲಿ ಬಸವಣ್ಣ ಎನ್ನುವ ವ್ಯಕ್ತಿಯೊಬ್ಬನ ಬಗ್ಗೆ ಮಾಹಿತಿ ಬರುತ್ತದೆ[50].ಶಾಸನದಲ್ಲಿ ಈತನನ್ನು 'ಮಂತ್ರಿ ಬಸವಣ್ಣ' ಎಂತಲೇ ಕರೆಯಲಾಗಿದೆ. ಒಂದು ವೇಳೆ ಈ ಮಂತ್ರಿಬಸವಣ್ಣನೇ ಬಿಜ್ಜಳನ ಮಂತ್ರಿಯಾದ ಬಸವಣ್ಣ ಆಗಿದ್ದರೆ ಈ ಶಾಸನಕ್ಕೆ ವಿಶಿಷ್ಠವಾದ ಮಹತ್ವ ಬರುತ್ತದೆ. ಯಾವ ಬಸವಣ್ಣನನ್ನು ಒಂದು ಧರ್ಮದ ಸ್ಥಾಪಕ ಎಂದು ಕರೆಯಲಾಗುತ್ತದೆಯೋ ಆತನೇ ಇನ್ನೊಂದು ಮತದ ಬೆಳವಣಿಗೆಯ ಬಗೆಯೂ ಉದಾರ ನಿಲುವು ಹೊಂದಿದ್ದ. ಆ ಶಾಸನವು ಹೀಗೆ ಹೇಳುತ್ತದೆ.

**ಬಸದಿಯ ತೆಂಕಣ ಕೇರಿಯ**
**ನೆಸೆಯಲ್ಕಂ ಮಂತ್ರಿ ಭೂಷಣ ಬಸವಣ್ಣಂ**
**ವಸುದೆ ಶಶಿಸೂರ್ಯ ಕುಳಗಿರಿ**
**ಯೆಸೆದಿರ್ಪ್ಪಿನ ಕೊಟ್ಟನೊಂನ್ದು ಸದ್ಭಕ್ತಿಯೊಳಂ ॥**

**ಮಂತ್ರಿ ಮುಕುಟರತ್ನ ಬಸವಂ । ನಕರ ಜಿನಾಲಯ ಬಸದಿಗೆ**
**ಸುಕರತೆ(ಯಿಂ) ಬಿಟ್ಟನೊಂನ್ದು ತೇಲಿಗ ಮನೆಯಂ ॥**

ಅನ್ತು ಸಂಧಿ ವಿಗ್ರಹಿ ಬಸವಣ್ಣಂ ನಕರ ಜಿನಾಲಕ್ಕೆ ನಕರ ಜಿನಾಲಯದ ತೆಂಕಲೆಂಭತ್ತು ಕೆಯಿನೀಳದ ನೆಲನುಮಂ ದಾನಶಾಲೆಗಂ ಕವಿತೆಗಳಿಗಂ ಸರ್ವ್ವಬಾಧಾ ಪರಿಹಾರಾಮಾಗಿಯಾ ಚಂದ್ರಾರ್ಕಂಬರಂ ಬಿಟ್ಟ ॥ ಎಂದು ಶಾಸನವು ಹೇಳುತ್ತದೆ. ಈ ವಿಷಯವಾಗಿ ಚರ್ಚಿಸಿದರೆ ಅದೊಂದು ಬೇರೆ ವಿಷಯವೇ ಆಗುತ್ತದೆ. ಹೀಗೆ ಆ ಬಸವಣ್ಣನು ನಗರಜಿನಾಲಯಕ್ಕೆ , ಮತ್ತದರ ವಿವಿಧಕ್ಕೆ ದಾನ ನೀಡಿದುದನ್ನು ಈ ಶಾಸನವು ಹೇಳುತ್ತದೆ.

ರಾಷ್ಟ್ರಕೂಟರೂ ಸಹ ಪರಧರ್ಮ ಸಹಿಷ್ಣುತೆಗೆ ಹೆಸರುವಾಸಿಯಾಗಿದ್ದರು. ಇಸ್ಲಾಂ ಅನುಯಾಯಿಗಳಾದ ಅರಬರಿಗೆ ತಮ್ಮ ರಾಜ್ಯದ ಪಶ್ಚಿಮ ತೀರದಲ್ಲಿ ಮಸೀದಿಗಳನ್ನು ಕಟ್ಟಿಕೊಳ್ಳಲು

ರಾಷ್ಟ್ರಕೂಟ ಅರಸರು ಅನುಮತಿ ನೀಡಿದ್ದರು ಎಂಬುದನ್ನು ಅರಬ್ ಪ್ರವಾಸಿ ಸುಲೇಮಾನ್ ರಾಷ್ಟ್ರಕೂಟರ ಧಾರ್ಮಿಕನೀತಿಯ ಬಗ್ಗೆ ಹೇಳುವಾಗ ಉಲ್ಲೇಖಿಸುತ್ತಾನೆ[56].

ಧರ್ಮ ಸಮನ್ವಯತೆ ಎಂದು ಬಂದಾಗ **'ಕತ್ತಲೆಕುಲ'**ದವರ ಬಗ್ಗೆ ಹೇಳಲೇಬೇಕಾಗುತ್ತದೆ[57]. ಇವರು ಅತ್ತ ಜೈನರೂ ಅಲ್ಲದ, ಶೈವರೂ ಅಲ್ಲದ ಮಧ್ಯದ ಪಂಗಡದವರು. ತಾವೇ ಗುರುತಿಸಿಕೊಳ್ಳುವಂತೆ ಇವರು ಮೂಲ ಜೈನರು. ಇವರು ಕ್ರಿಶ 825 ರಿಂದ 1200 ರವರೆಗೆ ಕರ್ನಾಟಕದ ಕೆಲವು ಭಾಗಗಳನ್ನು ಆಳಿದುದಾಗಿ ತಿಳಿದುಬರುತ್ತದೆ. ಹೊಯ್ಸಳರ ಸಾಮಂತರಾಗಿಯೇ ಇವರು ಹೆಚ್ಚು ಗುರುತಿಸಿಕೊಂಡಿದ್ದು. ಇವರ ವಂಶದಲ್ಲಿ ಪ್ರಖ್ಯಾತನಾದವನು ಎಂದರೆ ರಾಮದೇವರಸ. ಈತನು ಎರಡನೇ ವೀರಬಲ್ಲಾಳನ ವೀರಪ್ರಧಾನನಾಗಿದ್ದು, ಮಹಾಮಾಂಡಳೇಶ್ವರನಾಗಿದ್ದ. ಈತನ ಕುರಿತು ಒಂದು ಶಾಸನದಲ್ಲಿ

**"ಅವರನ್ವಯ ತಿಳಕಂ ಲೋ**

**ಕವಿಶ್ರುತಂ ಪಿರಿಯ (ಕೋ)ಟಿಗಾವುಣ್ಡಂ ಸಂ**

**ಭವಿಸಿದನಾತನ ಮಾಡಿದ**

**ಶಿವಗೃಹ ಮು(ಂಜೈ)ನ ಸಾಲೆಯುಂ ಭೂವಿದಿತಂ"**[57] ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಆತನು ಕಟ್ಟಿದ ಶಿವದೇವಾಲಯ ಮತ್ತು ಜಿನಾಲಯಗಳನ್ನು ಕುರಿತು ಸ್ಮರಿಸಲಾಗಿದೆ. ಈ ಕತ್ತಲೆಕುಲದವರು ಮೂಲ ಜೈನರಾಗಿದ್ದು ಶೈವರಾಗುವಡೆಯಲ್ಲಿ ಮಧ್ಯದಲ್ಲಿಯೇ ಉಳಿದುಕೊಂಡವರಿರಬೇಕು. ಹೆಚ್ಚಿನ ಅಧ್ಯಯನಗಳ ಮೂಲಕ ಇವರ ಬಗ್ಗೆ ಬೆಳಕು ಚೆಲ್ಲಬೇಕಿದೆ.

ಒಂದು ಮತದ ಜನಸಂಖ್ಯೆಯನ್ನು ಮುಖ್ಯವಾಗಿ ಮೂರು ಭಾಗ ಮಾಡಬಹುದು. ಮೊದಲೆಯದು ಬೇರಾವ ಮತಗಳನ್ನು ಒಪ್ಪದೆ ತಮ್ಮದೇ ನಿಲುವಿಗೆ ಅಂಟಿಕೊಂಡವರು. ಇನ್ನೊಂದು ಒಂದು ಮತದಲ್ಲಿದ್ದೂ ಬೇರೆಲ್ಲಾ ಮತಗಳ ಬಗ್ಗೆ ಸಮಚಿತ್ತಿತೆಯುಳ್ಳವರು. ಮತ್ತೊಂದು ತಮ್ಮ ಮತದ ಕೊರತೆಗಳನ್ನು ಒಪ್ಪಿಕೊಳ್ಳುತ್ತಲೇ ಮತ್ತೊಂದು ಮತದ ಮಹತ್ವಗಳನ್ನು ಅಭಿನಂದಿಸುವುದು. ಯಾವ ಮತಕ್ಕೂ ಸೇರದವರೂ ಸಹ ಈ ರೀತಿಯ ಯಾವುದಾದರೊಂದು ಮನಸ್ಥಿತಿಯನ್ನು ಹೊಂದಿದವರೇ ಆಗಿರುತ್ತಾರೆ. ಇದು ಎಲ್ಲಾ ಕಾಲಕ್ಕೂ ಇರುವಂತದ್ದು. ಮತ್ತು ಎಲ್ಲಾ ಪ್ರದೇಶಗಳಲ್ಲೂ ಇರುವಂತದ್ದು ಇದಕ್ಕೆ ಪ್ರಾಚೀನ ಕಾಲದ ಒಂದೆರೆಡು ಘಟನೆಗಳು, ಆಧುನಿಕ ಕಾಲದ ಒಂದೆರೆಡು ಘಟನೆಗಳನ್ನು ಪೂರಕವಾಗಿ ನೋಡಬಹುದು.

ಬಾಣರ ಧರ್ಮವು ಯಾವುದೆಂದು ನಮಗೆ ಖಚಿತವಾಗಿ ತಿಳಿಯದಿದ್ದರೂ, ಶೈವರೆಂದು ಸಧ್ಯಕ್ಕೆ ಇಟ್ಟುಕೊಳ್ಳಬಹುದು. ಇವರ ಒಂದು ಶಾಸನವು 'ಓಂ ನಮಃ ಶಿವಾಯ' ಎಂದು ಆರಂಭವಾಗಿ,

ಮಧ್ಯದಲ್ಲಿ ಆ ರಾಜನನ್ನು "ಪ್ರಾಣಿಗಳಿಗೆ ದಯೆತೋರುವಲ್ಲಿ ಬೋಧಿಸತ್ವನನ್ನು ಹೋಲುವನು" ಎಂದಿದೆ. (ಪ್ರಾಣಿನಾಂಕಾರುಣಿ ಕಾರುಣಿಕತಯೂ ಬೋದಿಸತ್ವೋ ಪಮಾನಸ್ಯ)[51].ಇದು ರಾಜರುಗಳು ಅನ್ಯಮತದಲ್ಲಿಯ ವಿಶೇಷ ಅಂಶಗಳನ್ನು ಒಪ್ಪಿಕೊಳ್ಳುತ್ತಿದ್ದಬಗೆ. ಯಾವ ಗಂಗರನ್ನು ನಾವು ಜೈನದೊರೆಗಳು ಎಂದು ಕರೆಯುತ್ತೇವೆಯೋ ಅಂತಹ ಗಂಗರೂ ಸಹ ಇತರೆ ಧರ್ಮದ ಇಂತಹ ಅಂಶಗಳ ಬಗ್ಗೆ ಇಂತಹದ್ದೆ ಮನಸ್ಥಿತಿಯನ್ನು ಹೊಂದಿವರಾಗಿದ್ದರು. ಒಂದು ಶಾಸನದ ಮುಖಾಂತರ ಇದನ್ನು ನಾವು ಅರಿಯಬಹುದು[52].ಇದರಲ್ಲಿ ಗಂಗ ಕುಲದ ಮಾಧವ ಶರ್ಮನು ಬೌದ್ಧವಿಹಾರಕ್ಕೆ ಭೂಮಿ ದಾನ ಮಾಡಿದ ವಿಷಯವಿದೆ 'ಶಾಕ್ಯಶಿಲಾ' ಎಂಬ ಪದವನ್ನು ಭೂಮಿಯಮೇರೆ ಗುರುತಿಸಲು ಹೇಳಿದೆ. ಶಾಸನದ ಕೊನೆಯಲ್ಲಿ "ಇತಿಯಸ್ಮಿನ್ ಗಾಂಗೇಯರಾಜ್ಯೇ ತಸ್ಮಿನ್ ಶ್ರೀ ಮಾಧವಶರ್ಮಣಃ ಶಾಸನ ಬುದ್ಧ ಸತ್ವಾಯ ದತ್ತಮಾಚಂದ್ರಾರ್ಕತಾರಕಂ" ಎಂದು ದಾಖಲಿಸಲಾಗಿದೆ. ಜೈನರಾಗಿದ್ದ ಗಂಗರು ಧಾರ್ಮಿಕತೆಯಲ್ಲಿ ಎಂತಹ ಮನಸ್ಥಿತಿಯನ್ನು ಹೊಂದಿದರು ಎಂಬುದನ್ನು 'ಬುದ್ಧಸತ್ವಾಯ' ಎಂಬ ಪದ ಪ್ರತಿನಿಧಿಸುತ್ತದೆ. ಈ ಕಾಲವು ಬೌದ್ಧರು ಮತ್ತು ಜೈನರು ಕರ್ನಾಟಕದಲ್ಲಿ ಅಧಿಪತ್ಯವನ್ನು ಸ್ಥಾಪಿಸಲು ಹೋರಾಡುತ್ತಿದ್ದ ಕಾಲವೆಂಬುದು ಇಲ್ಲಿ ಗಮನಿಸಬೇಕಾದ ಅಂಶ. ಇದು ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಎರಡು ಧರ್ಮಗಳ ವಿಷಯವಾಯಿತು.ಈಗ ಆಧುನಿಕ ಕಾಲದ ಎರಡು ಧರ್ಮಗಳ ವಿಷಯವನ್ನು ನೋಡೋಣ.

ಮೊಗಲರ ಬಗ್ಗೆ ನಮಗೆಲ್ಲ ತಿಳಿದೇ ಇದೆ. ಇಸ್ಲಾಂ ಅನ್ನು ಭಾರತದಲ್ಲಿ ಹರಡಲು ಇವರು ತುಂಬಾ ಪ್ರಮುಖವಾದ ಪಾತ್ರವನ್ನೇ ವಹಿಸಿದವರು. ಅಕ್ಬರ್ ಮಹಾಶಯನೂ ಇದೇ ಕುಟುಂಬಕ್ಕೆ ಸೇರಿದವನು. ಈತನು ಹಿಂದೂ ಮತ್ತು ಮುಸ್ಲಿಂ ಎರಡೂ ಮತಗಳಲ್ಲಿರುವ ಉತ್ತಮವಾದ ಅಂಶಗಳನ್ನು ಸೇರಿಸಿ 'ದೀನ್–ಇ–ಇಲಾಹಿ' ಎಂಬ ಹೊಸ ಮತವನ್ನು ಹುಟ್ಟುಹಾಕುತ್ತಾನೆ. ಈತನ ಧಾರ್ಮಿಕ ನಿಲುವುಗಳು ತುಂಬಾನೇ ಉದಾರವಾಗಿ ಇದ್ದವು. ಮತ್ತು ಅವು ಹಿಂದೂ–ಮುಸ್ಲಿಂರಲ್ಲಿ ಭಾವೈಕತೆಯನ್ನು ಮಾಡಿಸಲು ತುಂಬಾ ಉಪಕಾರವನ್ನೇ ಮಾಡಿದವು. ಇವರ ಕೊನೆಯ ದೊರೆಯಾದ ಬಹದ್ದೂರ್ ಷಾನು ಸಹ ಇಂತದ್ದೇ ಮನಸ್ಥಿತಿಯುಳ್ಳವನಾಗಿದ್ದ. ಇದು ಭಾರತದ ಪ್ರಾಚೀನ ಘಟ್ಟ ಆಧುನಿಕತೆಯ ಆರಂಭಕಾಲ.ಇವನ ಕಾಲದಲ್ಲಿ ಬದುಕಿದ್ದ ಗಾಲಿಬ್ ಎನ್ನುವ ಕವಿಯು ತನ್ನ ಸಮಕಾಲೀನ ಧಾರ್ಮಿಕ ಸಾಮರಸ್ಯವನ್ನು ಕುರಿತು ದಾಖಲಿಸುತ್ತಾನೆ[53]. ಆಗ ಈತನ ದೆಹಲಿಯಲ್ಲಿ ಕೋಮುಗಲಭೆಗಳು ಇರಲಿಲ್ಲವಂತೆ.1854ರಲ್ಲಿ ಬ್ರಿಟೀಷರು ಬಕ್ರೀದ್‌ನಲ್ಲಿ ಗೋಹತ್ಯೆಗೆ ಪರವಾನಗಿ ನೀಡುವವರೆಗೂ ಅಲ್ಲಿ ಹಿಂದೂ ïಮುಸ್ಲಿಂ ಗಲಾಟೆ ಇರಲಿಲ್ಲವಂತೆ. ಮುಂಚಿನ ಮೊಗಲ್ ದೊರೆಗಳು ಬಕ್ರೀದ್‌ನಲ್ಲಿ ಗೋಹತ್ಯೆಯನ್ನು ನಿಷೇದಿಸಿ ಬದಲಾಗಿ ಒಂಟೆ ಹತ್ಯೆಯನ್ನು ಜಾರಿ ಮಾಡಿದ್ದರಂತೆ. ಈಗ ಬ್ರಿಟೀಷರಿಗೆ ಒಡೆದು ಆಳುವುದು ಬೇಕಿದ್ದರಿಂದ ಇಂತಹ ನೀತಿಗಳನ್ನು ಅವರು ಜಾರಿ ತಂದಿದ್ದರು.

ಇಷ್ಟಲ್ಲದೇ ಸುಳ್ಳು ಸುದ್ಧಿಗಳನ್ನೂ ಹಬ್ಬಿಸುತ್ತಿದ್ದರಂತೆ. ಅಲಿಗರ ಮತ್ತು ದೆಹಲಿಯಲ್ಲಿ ಕೋಮುಗಲಭೆ ನಡೆಯುತ್ತಿದೆಯೆಂದು ಸುಳ್ಳು ಸುದ್ದಿ ಸೃಷ್ಟಿಸಿದ್ದರಂತೆ. ಅದು ಹೇಗೆಂದರೆ ಅಲಿಗರದವರಿಗೆ ದೆಹಲಿಯಲ್ಲಿ ಕೋಮುಗಲಭೇ ನಡೆಯುತ್ತಿದೆಯೆಂದು, ದೆಹಲಿಯವರಿಗೆ ಅಲಿಗರದಲ್ಲಿ ಕೋಮುಗಲಭೇ ನಡೆಯುವುದೆಯೆಂದು ಹೇಳುವ ಮೂಲಕ. ವಾಸ್ತವವಾಗಿ ಗಲಭೆ ಎರಡುಕಡೆಯೂ ಇರಲಿಲ್ಲವಂತೆ.

ಇಸ್ಲಾಂನೊಂದಿಗೆ ಇತರೆ ಧರ್ಮಗಳ ಸಾಮರಸ್ಯದ ಮತ್ತು ಸಂಘರ್ಷದ ಎರಡೂ ಘಟನೆಗಳು ಸಾಲುಸಾಲಾಗಿ ನಮ್ಮಲ್ಲಿ ನಡೆದಿವೆ. ಸಂಘರ್ಷವನ್ನು ಇನ್ನೊಂದು ಅಧ್ಯಾಯದಲ್ಲಿ ಹೇಳಲಾಗಿದ್ದು ಇಲ್ಲಿ ಸಾಮರಸ್ಯವನ್ನು ಮಾತ್ರವೇ ಉಲ್ಲೇಖಿಸಿದೆ. ಕರ್ನಾಟಕದ ವಿಷಯಕ್ಕೆ ಬಂದರೆ ಪ್ರಮುಖವಾಗಿ ಉತ್ತರಕರ್ನಾಟಕದಲ್ಲಿ ಈ ಮುಸ್ಲಿಂ ಧರ್ಮದೊಂದಿಗೆ ಹೆಚ್ಚಿನ ಸಾಮರಸ್ಯವನ್ನು ನಾವು ಕಾಣತ್ತೇವೆ. ಇದಕ್ಕೆ ಹಲವಾರು ಉದಾಹರಣೆಗಳನ್ನೂ ಸಹ ನಾವು ನೋಡಬಹುದು. ಗೋಕಾಕ್‌ದಲ್ಲಿನ ಸಾವಳಗಿ ಮಠವು ಅದಕ್ಕೆ ಒಂದು ಉದಾಹರಣೆ. ಮಠದ ವಾಸ್ತುವು ಪೂರಾ ಮಸೀದಿಯಂತೆಯೆ ನಿರ್ಮಿತವಾಗಿದೆ. ಮಠದ ಒಳಗಡೆ ಶಿವಲಿಂಗರ ವೇಷಭೂಷಣಗಳಿದ್ದು ಅವು ಮುಸ್ಲಿಂರಂತೆಯೇ ಇವೆ[58] . ಇವು ಒಂದು ರೀತಿಯಲ್ಲಿ ಸಾಮರಸ್ಯದ ಸಂಕೇತ ಇದ್ದಂತೆ. ಹಿಂದೂ ಮುಸ್ಲಿಂ ಸಾಮರಸ್ಯದಿಂದ ಸಿಖ್, ಕಬೀರ, ಸೂಫಿ ಮುಂತಾದ ಪಂಥಗಳು ನೆಲೆಗೊಂಡಿರುವುದನ್ನು ಕಾಣಬಹುದು.

ಅನೇಕ ತರವಾಗಿ ಧರ್ಮಕ್ಕೆ ಸಂಬಂಧಪಟ್ಟಂತೆ ಅನೇಕ ಘರ್ಷಣೆಗಳು ನಮ್ಮಲ್ಲಿ ಇತಿಹಾಸದುದ್ದಕ್ಕೂ ನಡೆಯುತ್ತಾ ಬಂದಿದ್ದರೂ ಸಹ, ಸಹಭಾಳ್ವೆಯೆಡೆಗೆ ನಮ್ಮ ಪ್ರಾಚೀನರು ತಮ್ಮ ನಿಲುವನ್ನು ನೀಡುತ್ತಲೇ ಬಂದಿದ್ದಾರೆ. ನಮ್ಮ ಪ್ರಾಚೀನ ನಗರಗಳು ಹೇಗಿದ್ದವೆಂದರೆ.

**"ಹರಿಗೃಹದಿಂ ಹರಗೃಹದಿಂ।**
**ಸುರಗ್ರಹದಿಂದರುಗಗೃಹದೆ ಬೌದ್ಧಾಲಯದಿಂ॥**
**ಗೊರವರ ಸವಣರ ಬೌದ್ಧರ ।**
**ನೆರವಿಗಳಿಂದಿಂಡಿನಾಡೆ ಸೊಗಯಿಸಿತೋರ್ಕುಂ ॥**[54]

ಎಂದು ಕವಿಗಳುನಮ್ಮ ನಾಡನ್ನು ಹೊಗಳಿದ್ದಾರೆ.ಅವರಿಗೆ ಎಲ್ಲಾ ಧರ್ಮಗಳಿಂದಲೂ ಕೂಡಿದ ದೇವಾಲಯಗಳ ನಾಡು ಅತಿಶಯವಾಗಿ ತೋರುತ್ತಿತ್ತು.ಅವರ ಮನಸ್ಥಿತಿಯು ಎಂತಹುದಾಗಿತ್ತೆಂದರೆ.

**"ಜಯಂತಿ ಯಸ್ಸಾವದತೋಪಿ ಭಾರತೀ**

**ವಿಭೂತಯಸ್ತ್ರೀರ್ತ ಕೈತೋಪಿ ನೈದ್ರತೇ**

**ಶಿವಾಯ ಧಾತ್ರೇ ಸುಗತಾಯ ವಿಷ್ಣವೇ**

**ಜಿನಾಯ ತಸ್ಮೈ ಸಕಳಾತ್ಮನೇ ನಮಃ"॥**[55]

ಎಂಬುದಾಗಿತ್ತು.ಈ 'ತಸ್ಮೈ ಸಕಳಾತ್ಮನೇ ನಮಃ' ಎನ್ನುವದರಲ್ಲಿಯೇ ಧರ್ಮ ಸಮನ್ವಯವೂ ಇದೆ, ಜೀವಸಮನ್ವಯವೂ ಇದೆ. ಗತಕಾಲದಿಂದ ಪ್ರಚಲಿತದವರೆಗೆ ಎಷ್ಟೋ ಧರ್ಮಗಳು ಹುಟ್ಟಿವೆ, ಸತ್ತಿವೆ. ಮತ್ತು ಹುಟ್ಟುತ್ತಲೇ ಇವೇ. ನಮಗೆ ಬೇಕಿರುವುದು ಧರ್ಮಗಳ ಸಂಖ್ಯೆಯಲ್ಲ. ಯಾವುದು ಧರ್ಮ ಎಂದು ಅರಿಯುವವರ ಸಂಖ್ಯೆ. ಹಾಗೇ ಅರಿತವರಿಗೇ ಧರ್ಮವು ಒಲಿಯುತ್ತದೆ. ಹಾಗೇ ಒಲಿಯುವುದೇ ನಿಜವಾದ ಧರ್ಮ.

ಇನ್ನು ಹೊಯ್ಸಳರ ಕಾಲದ ಶಾಸನವೊಂದು ಧರ್ಮಸಾಮರಸ್ಯಕ್ಕೆ ಉತ್ತಮ ಉದಾಹರಣೆಯೆಂದೇ ಹೇಳಬಹುದು. ಅದು ಹೀಗಿದೆ

**"ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ**

**ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನಯಾಯಿಕಾಃ**

**ಅರ್ಹಾಂಶ್ವೇತಿಹ ಜೈನಶಾಸನ ಮತಿಃ ಕರ್ಮೇತಿ ಮೀಮಾಂಸಕಾಃ**

**ಸೋಮಂವೋ ವಿದಧಾತು ವಾಂಛಿತಫಲಂ ಶ್ರೀ ಕೇಶವ ಸರ್ವದಾ"**[56]ಹೀಗೆ ಯಾರು ಯಾರನ್ನೇ ಪೂಜಿಸಲಿ ಅವೆಲ್ಲವೂ ಕೊನೆಯಲ್ಲಿ ಕೇಶವನನ್ನೇ ಸೇರುತ್ತವೆ ಎಂಬುದೇ ಇದರ ಸಾರ.

ಎಲ್ಲಿ ಸಂಘರ್ಷವಿರುತ್ತದೋ ಅಲ್ಲಿಯೇ ಹೆಚ್ಚು ಸಮನ್ವಯದ ಮಾತುಗಳು. ಇಷ್ಟು ಹೊತ್ತು ನಾವು ಕಂಡದ್ದು ಪ್ರಾಚೀನ ಕಾಲದ ಧರ್ಮಸಮನ್ವಯದ ಪ್ರಯತ್ನಗಳನ್ನು. ಒಂದು ಕಡೆ ಸಂಘರ್ಷವು ತನ್ನದೇ ಹರಿವಿನಲ್ಲಿ ಹರಿದುಕೊಂಡು ಬಂದಿದೆ. ಅದರಂತೆ ಸಮನ್ವಯವೂ ಕೂಡ ಅದರ ಜಾಡಿನಲ್ಲಿ ಸಾಗಿದೆ. ಎರಡೂ ನಡೆಯುತ್ತಲೇ ಇವೆ. ಬಹುಶಃ ಸಂಘರ್ಷ ಎಂಬುದಕ್ಕೆ ಕೊನೆಯಿಲ್ಲವೆನೋ. ಅಂತೆಯೇ ಸಾಮರಸ್ಯಕ್ಕೂ. ಸಧ್ಯದ ಪರಿಸ್ಥಿತಿಯಲ್ಲಂತೂ ಧರ್ಮಸಾಮರಸ್ಯ ಎನ್ನುವಂತದ್ದು ಅನಿವಾರ್ಯವಾಗಿ ಮಾಡಲೇಬೇಕಾದ ಕಾರ್ಯವಾಗಿದೆ. ಹಾಗಿದ್ದೂ ಅದಕ್ಕೆ ಪ್ರಯತ್ನಿಸುವವರು ಸಂಘರ್ಷ ನಡೆಸುವವರಿಗಿಂತ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಆಯಾ ಪ್ರದೇಶದಲ್ಲಿ ಬಹುಸಂಖ್ಯೆಯಲ್ಲಿರುವ ಧರ್ಮವು ಒಂದಲ್ಲ ಒಂದು ರೀತಿಯಲ್ಲಿ ತನ್ನ ಅಧಿಕಾರವನ್ನು ಮೆರೆಯುತ್ತದೆ. ಇದಕ್ಕೆ ಯಾವ ಧರ್ಮವೂ ಹೊರತಲ್ಲ. ಇವೆಲ್ಲವೂ ಹೀಗಿದ್ದರೂ ನಾವು ಸಾಮರಸ್ಯಕ್ಕೆ ಪ್ರಯತ್ನಿಸಲೇಬೆಕಿದೆ. ಇಲ್ಲವಾದರೆ ಈ ನಾಗರೀಕತೆ, ಶಾಂತಿ, ಸಹೋದರತೆ ಇವೆಲ್ಲವೂ ಕೇವಲ ಪದಗಳಲ್ಲಿ ಮಾತ್ರವೇ ಉಳಿದುಬಿಡುತ್ತವೆ.

**ಅಡಿ ಟಿಪ್ಪಣಿಗಳು**

1. ಅಮೂಢ ದೃಷ್ಠಿತ್ವ ಕತೆï ಧರ್ಮಾಮೃತ.
2. ನಮ್ಮ ಪ್ರಾಚ್ಯ ಪರಂಪರೆ, ಪು 401
3. ನಮ್ಮ ಪ್ರಾಚ್ಯ ಪರಂಪರೆ, ಪು 402
4. ದೇವರ ಗೊಡವೆ ಕೂಡ ನನಗೆ ಬೇಡ – ಸಂ. ನ.ರವಿಕುಮಾರ – ಪುಟ ï 23.
5. ಲೋಕತತ್ವಶಾಸ್ತ್ರ ಪ್ರವೇಶಿಕೆ ï ಆರಂಭಿಕ ಹಂತ, ದೇವಿಚಂದ್ರ ಚಟ್ಟೋಪಾಧ್ಯಾಯ, ಪು 48?
6. ಕವಿರಾಜಮಾರ್ಗ ï 3–176.
7. ಅಂಬೇಡ್ಕರ್ ಸಮಗ್ರ ಬರಹಗಳು, ಸಂï 3 – ಪುಟ ï 259.
8. ರಾಯಚೂರು, ಬಳಗಾನೂರು, ಪುಟ ï 413, ಕ್ರಿ. 1187.
9. ಎಸ್ಐಐ.9.329, 1221. (ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ)

10 . ಎ ಕ 5, ಅರಸೀಕೆರೆ, 118 (ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ)

11 . ಎ ಕ 7, ತಿಪಟೂರು– 31 (ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ)

12 . ಎಸ್ಐಐ.9. 338, 1209 (ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ)

13 . ಎ ಕ 11, 25, 1224, ದಾವಣಗೆರೆ (ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ)

14 . ಕ ಶಾ ಸಾಂ ಅ, ಚಿದಾನಂದ ಮೂರ್ತಿ, ಪು 00?

15 . ರಾಯಚೂರು, ಮುಕ್ಕುಂದಿ, ಪು ï 391 ï 1088.

16 . ಮಹಾರಾಷ್ಟ್ರದ ಕನ್ನಡ ಶಾಸನಗಳು, ಪು ï 154, 1107, ಮುದಗಡ.

17 . ಬೀದರ್ , ಗೌರ, ಕ್ರಿ.ಶ. 12ನೇ ಶತಮಾನ, ಪು ï 77.

18 . ಮ.ಕ.ಶಾ. ಪು ï 186, ಅಕ್ಕಲಕೋಟೆ 1255.

19 . ಮ.ಕ.ಶಾ. ಪು ï 205 – ತಡವಾಳ ï

20 . ಮ.ಕ.ಶಾ – ಪು ï 23 – ನೀಲೆಗಾಂವ್ ï

21 . ಮ.ಕ.ಶಾ – ಪು ï 21 – ಜಾಮಗಾಂವ್ –

22 . ಮ.ಕ.ಶಾ – ಪು ï 19 ïಕೇಸೆಗಾಂವ –.

23 . ಮ.ಕ.ಶಾ – ಪು ï 17 ï 1217 ïಇಟ್ಕಲ್.

24 . ಎ ಕ 5, ಹೊ.ನ 116, 1123 (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ)

25 . ಎ ಕ 2, 143. 1131 ಕ್ರಿ.ಶ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ)

26 . ಎ ಕ 2, 143. 1131. ಕ್ರಿ.ಶ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ)

27 . ಎ ಕ 5, ಹೊ.ನ 89, 1135 ಕ್ರಿ.ಶ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ)

28 . ಗದಗ, 1037, ಪು ï 332 (?)

29 . ಸಮಯಪರೀಕ್ಷೆ 4 ï 125.

30 . ಸಮಯಪರೀಕ್ಷೆ 4 ï 121.

31 . ಸಮಯಪರೀಕ್ಷೆ 4 ï 122.

32 . ರಾಯಚೂರು, ಗಬ್ಬೂರು – ಪುಟ ï 79 ï 1126.

33 ಎಂ.ಎಂ. ಕಲಬರುಗಿ, ಬಿಜಾಪುರ ಜಿಲ್ಲೆ ಶಾಸನ ಸೂಚಿ– ಪು ï 22.

34 . ರಾಯಚೂರು ದಿದ್ದಿಗಿ, ಪು ï 414. ಕ್ರಿ.ಶ. 918.

35 . ನವಮಾಧಿಕಾರ, ರಾಜಾವಳೀ ಕತಾಸಾರ, ಪು 157

36 . ಇ ಆಯ್. 18, ಪು.ಸಂ ï 279, ಕ್ರಿ.ಶ. 1022 (ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ)

37 . ಬೀದರ್, ಬೀದರ್ ï ಕಾಲವಿಲ್ಲ, ಪುಟ ï 121.

38 . ಸಂಕೀರ್ಣ ಸಂಕಲನಗಳು – ಸಂ ï 4 ï ಮಹಿಳಾ ಸಂಶೋಧನೆ

39 . ಎ ಕ 2, ಶ್ರವಣಬೆಳಗೊಳ 475.

40 . ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ, ಶಿವರುದ್ರ ಸ್ವಾಮಿ ಎಸ್.ಎನ್. ಮೈಸೂರು, 1996, ಪು ï 18. (ಧಾರ್ಮಿಕ ವಿವೇಚನೆ)

41 . ವಿಜಯನಗರ ಮತ್ತು ಜಿನಧರ್ಮ, ಶ್ರೀ ಪಾದ ರಾಮಶರ್ಮ ವಿಜಯನಗರ ಷಟ್‌ಶತ ಸಾಂವತ್ಸರಿತೋತ್ಸವ, ಸಂ.ಪು ï 1936 – ಪು ï 69 (ಧಾರ್ಮಿಕ ವಿವೇಚನೆ)

42 . ಗಹಗಹಜ್ಗದಡ್ಸೆಗಬಜುತ

43 . ಕೃಷ್ಣದೇವರಾಯನ ಶಾಸನಗಳು 1, ಮೈಸೂರು, ರಾಮಲಿಂಗೇಶ್ವರ ದೇವಾಲಯ, 1516, ಶಾ, ಸಂ ï 85.

44 . ಅದೇ– ಹೊಸಪೇಟೆ, ಸಂಖ್ಯೆ ï 150, 1521, ಪು ï 302.

45 . ಬೀದರ್, ಬೀದರ್, ಪು ï 159, 1444.

46 . ಕೆಳದಿ ಅರಸರ ಶಾಸನ ಸಂಪುಟ ï ಕುವೆಂಪು ï ಮೈಸೂರು ವಿವಿ. 1628, ಕೌಲೇದುರ್ಗ, ಶಾ.ಸಂ. 57, ಪು–97.

47 . ಅದೇ, ಆನಂದಪುರ, ಸಾಗರ, 1632, ಪು ï 123.

48 . ಪ್ರೌಢದೇವರಾಯನ ಶಾಸನಗಳು, ಮೂಡಬಿದ್ರಿ ï 1430, ಪು ï 105.

49 . ಪ್ರೌಢದೇವರಾಯನ ಶಾಸನಗಳು, ಹಂಪಿ, 1439, ಪು ï 317.

50 . ಜಿ ಎಸ್ ಗಾಯಿ ಅವರ ಸಂಶೋಧನಾ ಲೇಖನಗಳು

51 . ಎ.ಕ. 10, ಮುಳಬಾಗಿಲು, ಪು.ಸಂ. 157 ಕ್ರಿ.ಶ. 338 (ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ)

52 . ಎ.ಕ 15 ತುಮಕೂರು, ಪು ï 78, ಕ್ರಿ.ಶ 400. (ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ)

53 . ಪವನ್ ಶರ್ಮ ï ಗಾಲಿಬ್ ವ್ಯಕ್ತಿತ್ವ ಮತ್ತು ಯುಗಾಂತ

54 . ---- ಖಖಖ, ಘಿಗಿ ಖಖಖ, ಓಠ 199. ಕೊಲ್ಲಾಪುರ ಜಿಲ್ಲೆಯ ಶಾಸನಗಳು

55 . ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಪು ï 144.

56 . ಕರ್ನಾಟಕದಲ್ಲಿ ಧರ್ಮ ಸಂಘರ್ಷ, ಪಂಡಿತ ರಾಠೋಡ

**ಅ. ಅಧ್ಯಯನದ ಫಲಿತಗಳು**

ಧರ್ಮ ಎಂಬುದು ಅತಿಸೂಕ್ಷ್ಮ ವಿಷಯವಾಗಿದ್ದು, ಅದು ಎರಡು ಸಂಪೂರ್ಣ ವಿರುದ್ಧವಾದ ಧೃವಗಳನ್ನು ಹೊಂದಿದೆ. ಅವುಗಳೆಂದರೆ ಒಂದು ಧರ್ಮವು ಉತ್ತಮವಾಗಿ ಆಚರಿಸಲ್ಪಟ್ಟಲ್ಲಿ ಮನುಷ್ಯನನ್ನೂ ಸಹ ಅಷ್ಟೇ ಉನ್ನತ ಸ್ಥಾನಕ್ಕೆ ಕೊಂಡ್ಯೊಯ್ಯಬಲ್ಲುದು. ಇದಕ್ಕೆ ವಿರುದ್ಧ ಇನ್ನೊಂದು. ಧರ್ಮವು ಕೋಮುವಾದದ ರೂಪ ತಳೆದಾಗ ಇಡೀ ಸೃಷ್ಠಿಯಲ್ಲಿಯೇ ಮನುಷ್ಯನನ್ನು ಕೀಳು ಸ್ಥಾನಕ್ಕೆ ಇಳಿಸಬಲ್ಲುದು. ಅಂತೆಯೇ ಧರ್ಮದ ಎರಡು ಮುಖಗಳಾದ ಧರ್ಮ ಸಂಘರ್ಷ ಮತ್ತು ಸಮನ್ವಯವನ್ನು ಇದುವರೆವಿಗೂ ಅಧ್ಯಯನ ಮಾಡಲಾಯಿತು. ನಾನು ಕಂಡುಕೊಂಡಂತೆ ಅಧ್ಯಯನದ ಫಲಗಳು ಇಂತಿವೆ–

೧. ಇಸ್ಲಾಂ ಧರ್ಮ ಮಾತ್ರವೇ ಹಿಂದೂ ದೇವಾಲಯಗಳನ್ನು ನಾಶ ಮಾಡಿದ್ದು ಎನ್ನುವ ನನ್ನ ಅರಿಕೆಯಲ್ಲಿ ವಾಸ್ತವ ಇಲ್ಲದ್ದನ್ನು ಕಂಡುಕೊಂಡಿದ್ದು. ಬಹುಶಃ ನನ್ನಂತೆಯೇ ಇನ್ನೂ ಅಸಂಖ್ಯಾತ ಯುವಕರು ಈ ಹಿನ್ನೆಲೆಯಲ್ಲಿಯೇ ಯೋಚಿಸುತ್ತಲೇ ಇದ್ದಾರೆ. ಈ ಅಧ್ಯಯನದ ಸಹಾಯದಿಂದ, ಆ ತಪ್ಪು ಕಲ್ಪನೆಗಳನ್ನು ಕಳೆಯಲು ಸ್ವಲ್ಪವಾದರೂ ಸಹಾಯವಾಗಬಹುದು.

೨. ನಾವು ಕಲ್ಪಿಸಿಕೊಂಡಿರುವ ಮತ್ತು ನಮ್ಮನ್ನು ಹಾಗೆ ಕಲ್ಪಿಸಿಕೊಳ್ಳುವಂತೆ ಮಾಡಿರುವ ಸಾಂಸ್ಕೃತಿಕತೆಯನ್ನೂ ಅದರ ಯಜಮಾನಿಕೆಯನ್ನೂ ಈಗ ಪ್ರಶ್ನಿಸಬಹುದು. ನಾವು ಬದುಕಿರುವುದು ಯಾರ ಪರಂಪರೆ. ನಮ್ಮದೋ ಅಥವಾ ನಮ್ಮದೆಂದು ಭಾವಿಸುವಂತೆ ಮಾಡಿರುವ ಇತರರದ್ದೋ. ಇಂದಿನ ಪ್ರಭುತ್ವವು ಅಂದೂ ಇತ್ತು. ಇಂದಿನ ಪುರೋಹಿತಶಾಹಿಯು ಅಂದೂ ಇತ್ತು. ಮತ್ತು ಅವರು ಬಹುಸಂಖ್ಯಾತರಲ್ಲಿ ತುಂಬುವ ಮೌಢ್ಯವೂ ಸಹ ಅಂದೂ ಇತ್ತು. ಇಂದೂ ಇದೆ. ಬಹುಶಃ ಇಂತಹ ಕೆಲವು ಅಧ್ಯಯನಗಳ ಮೂಲಕ ಆ ಮೂಢತೆಗಳನ್ನು ಸ್ವಲ್ಪವಾದರೂ ಕಡಿಮೆ ಮಾಡಬಹುದು.

೩. ಭಾರತಕ್ಕೆ ಇಸ್ಲಾಮಿನ ಆಗಮನವಾದಾಗ ಮತ್ತು ನಂತರದಲ್ಲಿ ಕ್ರೈಸ್ತರ ಆಗಮನವಾದಾಗ ಅವರು ಮಾಡುವ ಮತಾಂತರಗಳ ಹಿಂದೆ ಕೇವಲ ಆಮಿಷಗಳು ಮಾತ್ರವೇ ನಮ್ಮ ಕಣ್ಣಿಗೆ ಕಾಣುತ್ತಿದ್ದುದು. ಆದರೆ ಪ್ರಾಚೀನ ಕಾಲದಿಂದಲೂ ಬಂದಿರುವ ಈ ಪರಂಪರೆಯು ತನ್ನೊಳಗೆ ಅನೇಕ ಕಾರಣಗಳನ್ನು ಇಟ್ಟುಕೊಂಡು ಇಂದಿಗೂ ಮುಂದುವರೆಯುತ್ತಿದೆ. ಕೆಲವೊಮ್ಮೆ ಆ ಸಮಸ್ಯೆಗಳನ್ನು ಆಯಾ ಧರ್ಮಗಳು ಗುರುತಿಸಬಲ್ಲವಾದರೂ ಅದಕ್ಕೆ ಪರಿಹಾರದ ಪ್ರಯತ್ನವನ್ನು ಮಾಡುವುದು ಕಡಿಮೆಯೇ. ಬಹುಶಃ ಮನುಷ್ಯನನ್ನು ಮನುಷ್ಯತ್ವಕ್ಕೆ ಮತಾಂತರಿಸಬೇಕಾದ ಅತೀ ಜರೂರತ್ತು ಹಿಂದೆಂದಿಗಿಂತಲೂ ಇಂದು ಇದೆ.

೪. ಮಹಿಳೆಯರ ಸ್ಥಾನಮಾನಗಳು ಕಾಲದಿಂದ ಕಾಲಕ್ಕೆ ಬದಲಾದುದನ್ನು ಈ ಮೂಲಕ ಅರಿಯಬಹುದಾಗಿದೆ. ಒಂದು ಧರ್ಮದಲ್ಲಿ ಆ ಕಾಲದಲ್ಲಿ ಮಹಿಳೆಯರಿಗಿದ್ದ ಸ್ಥಾನಮಾನ ಮತ್ತು ಅವರ ಮೂಲಕ ಆಗುತ್ತಿದ್ದ ಅವುಗಳ ಬೇಳವಣಿಗೆಗಳನ್ನು ಸ್ಥೂಲವಾಗಿಯಾದರೂ ಈ ಅಧ್ಯಯನದ ಮೂಲಕ ಅರಿಯಬಹುದಾಗಿದೆ.

೫. ನಮ್ಮ ಪ್ರಾಚೀನ ಧರ್ಮಗಳು ತಾವು ಉಗಮವಾದಾಗ ಎಂತಹ ಆಶಯಗಳನ್ನು ಹೊಂದಿದ್ದವು ಮತ್ತು ನಂತರದಲ್ಲಿ ಅವುಗಳು ಹೇಗೆ ತಮ್ಮ ಮೂಲದಿಂದ ದೂರ ಸರಿಯುತ್ತಾ ಹೋದುವು ಎಂಬುದನ್ನು ತೋರಿಸಲಾಗಿದೆ.

೬. ಮತ ಘರ್ಷಣೆಯಲ್ಲಿ ಕವಿಗಳೂ ಸಹ ಯಾವ ರೀತಿಯಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಅರಿಯಬಹುದು.

೭. ಒಟ್ಟಾರೆಯಾಗಿ ಪ್ರಾಚೀನ ಕರ್ನಾಟಕದಲ್ಲಿ ನಡೆದ ಧರ್ಮ ಕುರಿತ ಸಂಘರ್ಷಗಳೂ ಸಮನ್ವಯಗಳೂ ಮತ್ತು ಇತರೆ ವಿದ್ಯಾಮಾನಗಳನ್ನು ಪರಿಚಯದ ಮಟ್ಟಕ್ಕಾದರೂ ಮುಂದಿನವರಿಗೆ ಓದುವ ಅನುಕೂಲವನ್ನು ಈ ಅಧ್ಯಯನದ ಮೂಲಕ ಮಾಡಿಕೊಡಲಾಗಿದೆ.

**ಆ. ಅಧ್ಯಯನದಿಂದ ಅವಕಾಶಗಳು**

ಇಲ್ಲಿಯವರೆಗಿನ ಈ ಅಧ್ಯಯನದಲ್ಲಿ ಹಲವು ವಿಷಯಗಳನ್ನು ಕುರಿತು ಅಧ್ಯಯನದ ವ್ಯಾಪ್ತಿಗೆ ಒಳಗೊಂಡಂತೆ ನೋಡಲಾಗಿದೆಯಾದರೂ, ಅವನ್ನು ಇನ್ನೂ ಬೇರೆಯದೇ ರೀತಿಯಲ್ಲಿ ಅಧ್ಯಯನ ಮಾಡಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಈ ಮುಂದಿನಂತೆ ನೋಡಬಹುದು.

1. ಕರ್ನಾಟಕದಲ್ಲಿ ಬೌದ್ಧಧರ್ಮದ ಉಗಮ, ವಿಕಾಸ, ಅವನತಿಯ ಕುರಿತಾಗಿ ಇದುವರೆಗೂ ಹಲವು ಲೇಖನಗಳು, ಕೃತಿಗಳು ಬಂದಿವೆಯಾದರೂ ಇನ್ನೂ ಸಮಗ್ರವಾಗಿ ಈ ಕೆಲಸ ಆಗಬೇಕಿದೆ. ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಅಲ್ಲಲ್ಲಿ ಅನೇಕ ಕಡೆ ಜೈನ ಮತ್ತು ಬೌದ್ಧ ಧರ್ಮಗಳೇ ಹೆಚ್ಚು ಎದುರಾಳಿಗಳಾಗಿ ಬರುತ್ತವೆ. ಇದರ ಸಮಗ್ರ ದಾಖಲೆಗಳನ್ನು ದಾಖಲಿಸಿ ಅಧ್ಯಯನ ಮಾಡಬೇಕಿದೆ.

2. ಇಲ್ಲಿ ಮತಾಂತರ ಕುರಿತಂತೆ, ದೇವಾಲಯ ಸಂಘರ್ಷ ಕುರಿತಂತೆ ಮತ್ತು ವಾದ ವಿವಾದಗಳನ್ನು ಕುರಿತು ಕೇವಲ ಉಪಧ್ಯಾಯಗಳಲ್ಲಿ ಮಾತ್ರ ಚರ್ಚಿಸಲಾಗಿದೆ. ಆದರೆ ಇವುಗಳು ಪ್ರತ್ಯೇಕ ಪತ್ಯೇಕವಾಗಿ ಅಧ್ಯಯನ ವಿಷಯಗಳಾಗುವಷ್ಟು ದತ್ತಾಂಶಗಳು ನಮಗೆ ದೊರೆಯುತ್ತವೆ. ಅವನ್ನು ಉಪಯೋಗಿಸಿಕೊಂಡು ಇನ್ನೂ ಹೆಚ್ಚಿನ ಅಧ್ಯಯನವನ್ನು ಮಾಡಿದ್ದೇ ಆದರೆ ಇನ್ನೂ ಸೂಕ್ಷ್ಮವಾಗಿ ಮತ್ತು ಸಮಗ್ರವಾಗಿ ಈ ಧರ್ಮ ಕುರಿತ ಪ್ರಾಚೀನ ವರ್ಣನಾತ್ಮಕ ಇತಿಹಾಸವನ್ನು ನಾವು ಅರಿಯಬಹುದಾಗಿದೆ.

3. ನನ್ನ ಮಿತಿಗೆ ತಿಳಿದಂತೆ ಸಹಿಷ್ಣುತೆಯ ಕುರಿತು ಇನ್ನೂ ಯಾವುದೇ ಸಮಗ್ರ ಅಧ್ಯಯನಗಳು ಬಂದಂತಿಲ್ಲ. ಕೆಲವೊಮ್ಮೆ ನಮಗೆ ಸಿಗುವ ಸಹಿಷ್ಣುತೆಯ ಉದಾಹರಣೆಗಳು ವಾಸ್ತವದಲ್ಲಿ ಅದು ಆಗಿರುವುದೇ ಇಲ್ಲ. ಉದಾಹರಣೆಗೆ ಬುಕ್ಕರಾಯನ ಘಟನೆಯನ್ನು ನಾವು ನೋಡಿಯಾಗಿದೆ. ಹೀಗೆ ಈ ಸರ್ವಧರ್ಮ ಸಮಾನತೆಯೂ ಕೂಡ ಹಲವು ಸಲ ಪ್ರಭುತ್ವದ ಸಾಮರಸ್ಯದ ಭಾಗವಾಗಿ ಬಂದಿರುವುದಿಲ್ಲ. ಹೀಗೆ ಅನೇಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಈ ಧರ್ಮ ಸಮನ್ವಯದ ಇತಿಹಾಸವನ್ನು ನಾವು ಅಧ್ಯಯನ ಮಾಡಬೇಕಿದೆ.

4. ಸಮಕಾಲೀನ ಧರ್ಮಸಂಘರ್ಷದ ಕುರಿತಂತೆ ಸಹ ಅಧ್ಯಯನಗಳ ಅವಶ್ಯಕತೆಯಿದೆ.

## ಇ. ಸಮಾರೋಪ

ಈ ಅಧ್ಯಯನದ ಸಮಾರೋಪದ ಮೊದಲ ಮಾತೆಂದರೆ ಇಲ್ಲಿಯವರೆಗಿನ ಧರ್ಮ ಕುರಿತಾದ ನನ್ನ ಸಂಶೋಧನಾ ಬರವಣಿಗೆಯು ನನ್ನಲ್ಲಿ ತೃಪ್ತಿಯನ್ನು ತಂದಿಲ್ಲ ಎಂಬುದು. ಆ ತೃಪ್ತಿಗೆ ಕಾರಣವಾಗಬೇಕಿದ್ದ ಶ್ರಮವನ್ನು ಮಾಡದಿರುವುದೇ ಇದಕ್ಕೆ ನೇರ ಹೊಣೆ. ಹಾಗೆ ನೋಡಿದರೆ ಇಡೀ ಪ್ರಬಂಧದಲ್ಲಿ ನನ್ನದೆಂಬುದು ಏನಿದೆ ಎಂಬುದೇ ನನಗೆ ಉಳಿದ ಮತ್ತು ಉಳಿಯುವ ಕೊನೆಯ ಪ್ರಶ್ನೆ. ನನ್ನ ಸಮಾಧಾನಕ್ಕಾಗಿ ನಾನೇ ಹೇಳಿಕೊಳ್ಳಬಹುದಾದ ಈ ಆದ್ಯಯನದ ಸಾಧನೆಗಳೆಂದರೆ ಧರ್ಮ ಸಂಘರ್ಷಕ್ಕೆ ಮತ್ತು ಸಮನ್ವಯಕ್ಕೆ ಸಂಬಂಧಿಸಿದ ಘಟನೆಗಳನ್ನು ಒಂದೆಡೆ ಕಲೆಹಾಕಿದ್ದು. ಅದೂ ಪೂರ್ತಿಯಾಗಿ ಅಲ್ಲವೆಂಬುದೇ ನನ್ನ ಭಾವನೆ. ಬರೀ ಮತಾಂತರವನ್ನು ಕುರಿತು ಹೇಳುವುದಾದರೆ, ನನಗೆ ದೊರಕಿದ ಮತಾಂತರದ ಕುರಿತ ದತ್ತಾಂಶದಲ್ಲಿ ಕೇವಲ ಕಾಲುಭಾಗವನ್ನಷ್ಟೇ ನಾನು ಬಳಕೆ ಮಾಡಿಕೊಂಡಿರಬಹುದು. ಕಾರಣ, ಅಧ್ಯಯನದ ಮಿತಿಗೆ ಅಷ್ಟೇ ಸಾಕಾಯಿತು. ಈ ಕಾರಣಕ್ಕಾಗಿಯೇ ಅಧ್ಯಯನದ ಮುಂದಿನ ಅವಕಾಶಗಳನ್ನು ಕುರಿತು ಹೇಳುವಾಗ ನಾನು ಈ ವಿಷಯವನ್ನು ಪ್ರಸ್ತಾಪಿಸಿ, ಒಂದೊಂದು ಅಧ್ಯಾಯಗಳೂ ಒಂದೊಂದು ಅಧ್ಯಯನಗಳು ಆಗಬಲ್ಲವು ಎಂದು ಹೇಳಿದ್ದು. ಮತ್ತು ದತ್ತಾಂಶಗಳನ್ನು ಹೆಚ್ಚು ಹೆಚ್ಚು ಬಳಕೆ ಮಾಡಿಕೊಂಡಷ್ಟು ವಿಷಯದ ಸೂಕ್ಷ್ಮತೆಯೂ ತೆರೆದುಕೊಳ್ಳುತ್ತಾ ಹೋಗುತ್ತದೆ.

ಈ ಅಧ್ಯಯನದಲ್ಲಿ ವಿಶೇಷ ಗಮನ ಸೆಳೆದದ್ದು ಜೈನಧರ್ಮ. ಅದು ಕನ್ನಡನಾಡಿನ ಧರ್ಮವಾಗೇ ರೂಪಗೊಂಡಿದ್ದು ನನಗೆ ಆಶ್ಚರ್ಯಕರ. ಅದು ಇಲ್ಲಿ ಒಂದು ಕಾಲಕ್ಕೆ ತುಂಬಾ ಎತ್ತರವಾದ ಸ್ಥಾನವನ್ನು ತಲುಪಿ ಆ ನಂತರದ ಕೆಲವೇ ದಶಕಗಳಲ್ಲಿ ಅವನತಿಯ ಹಂತವನ್ನು ಮುಟ್ಟಿದ್ದು ನನಗೆ ಮತ್ತೂ ಆಶ್ಚರ್ಯಕರ. ಧರ್ಮದ ಈ ದಿಢೀರ್ ಬೆಳವಣಿಗೆಗಳು ಆಗಾಗ್ಗೆ ಆಗುವಂತವೇ ಆಗಿವೆ. ಆದರೆ ಒಂದು ಕಾಲದಲ್ಲಿ ಬಹುಸಂಖ್ಯಾತ ಧರ್ಮವಾಗಿ ಬಾಳಿದ ಜೈನ, ಇಂದು ಕರ್ನಾಟಕದಲ್ಲಿ ಕಡಿಮೆಯಲ್ಲಿ ಕಡಿಮೆ ಎನ್ನುವಷ್ಟು ಸಂಖ್ಯೆಯನ್ನು ಹೊಂದಿದೆ. ಆ ಕಾಲದಲ್ಲಿ ಜೈನಧರ್ಮವು ಬೇರೆ ಮತಗಳಿಂದ ಹೊಡೆತ ತಿಂದಂತೆ, ಜೈನದ ಕೈಯಲ್ಲಿ ಬೌದ್ದವು ಹೊಡೆತ ತಿಂದಿದೆ. ಈ ಅಭಿಪ್ರಾಯಕ್ಕೆ ಕಾರಣ, ನಮಗೆ ದೊರಕುವ ಮುಕ್ಕಾಲು ಭಾಗದಷ್ಟು ಬೌದ್ದ ಸಂಘರ್ಷಗಳು ಜೈನರ ಜೊತೆಗೇನೆ ನಡೆದಿವೆ. ಮತ್ತು ಅದರಲ್ಲಿ ಮುಕ್ಕಾಲು ಪಾಲು ವಿಜಯವು ಜೈನರಿಗೇನೆ ಆಗಿದೆ. ಇದು ಕೇವಲ ಕರ್ನಾಟಕದ ಬೌದ್ದರಿಗೆ ಮಾತ್ರವೇ ಒದಗಿದ ಪರಿಸ್ಥಿತಿಯಲ್ಲ.

ನೆರೆಯ ತಮಿಳುನಾಡಿನಲ್ಲೂ ನಡೆದಿದ್ದು ಇದೆಯೇ. ಬಹುಶಃ ಆಂದ್ರದಲ್ಲಿ ಭೌದ್ದರಿಗೆ ಇಂತಹ ಹೊಡೆತ ಶಂಕರಾಚಾರ್ಯರಿಂದ ಆಗಿರಬೇಕು ಅನ್ನಿಸುತ್ತದೆ.

ಈ ಅಧ್ಯಯನ ಕುರಿತಂತೆ ಮತ್ತೂ ಒಂದು ಸಮಾಧಾನವಿದೆ. ಅದು ದೊರಕಿರುವ ದಾಖಲೆಗಳನ್ನು ಒಂದು ಸೂತ್ರದಂತೆ ವಿಭಾಗಿಸಿ ಸಂಘರ್ಷದ ವಿವಿಧ ರೂಪಗಳನ್ನು ಹಂಚಿಕೆ ಮಾಡಿದ್ದು. ಮತ್ತು ಈ ಹಿನ್ನೆಲೆಯಲ್ಲಿಯೇ ನನ್ನ ಬೌದ್ಧಿಕತೆಗೆ ಒದಗಿದಷ್ಟು ವಿವರಣೆಯನ್ನೂ ಊಹೆಯನ್ನು ಅದಕ್ಕೆ ಮಾಡಿದ್ದೇನೆ. ಈ ಆದ್ಯಯನದಲ್ಲಿ ಗುರುತಿಸಬಹುದಾದ ಅತಿದೊಡ್ಡ ದೋಷವೆಂದರೆ ಅಡಿಟಿಪ್ಪಣಿಗಳ ವಿಷಯದ್ದು. ಎಷ್ಟೇ ಜಾಗೃತೆಯಿಂದ ಅವನ್ನು ದಾಖಲು ಮಾಡಿಕೊಂಡರೂ ಸಹ, ಕೆಲವು ಕಡೆ ಅವನ್ನು ಸಮರ್ಥವಾಗಿ ನೀಡಲಾಗಿಲ್ಲ. ಅದರೂ ಆದಷ್ಟು ಮಾರ್ಗದರ್ಶಕರಿಗೂ, ವಿಭಾಗಕ್ಕೂ, ವಿಶ್ವವಿದ್ಯಾಲಯಕ್ಕೂ ಇನ್ನಿತರ ಎಲ್ಲವಕ್ಕೂ ನನ್ನ ಕೈಲಾದಷ್ಟು ಪ್ರಾಮಾಣಿಕತೆಯಿಂದ ನನ್ನಿಂದಾಗಬಹುದಾದ ಅನ್ಯಾಯವನ್ನು ತಡೆದಿದ್ದೇನೆ. ಎಲ್ಲಾ ಮತಗಳನ್ನು ದಾಟಿ, ಯಾವ ಮತ್ತಕ್ಕೂ ಪಕ್ಷಪಾತವಾಗದಂತೆ ಇಲ್ಲಿಯ ಬರವಣಿಗೆಯನ್ನು ಮಾಡಿದ್ದೇನೆ. ಜೊತೆಗೆ ಅದೇ ತನವನ್ನು ನನ್ನಲ್ಲಿಯೂ ಈ ಅಧ್ಯಯನದಿಂದ ರೂಪಿಸಿಕೊಂಡಿದ್ದೇನೆ ಎನ್ನುವ ಕೊನೆಯ ಮಾತುಗಳಿಂದ ಈ ಅಧ್ಯಯನಕ್ಕೆ ಅಂತ್ಯ ಹೇಳುತ್ತೇನೆ.

೧. ವೀರಶೈವ ಸಾಹಿತ್ಯದಲ್ಲಿ ಪವಾಡ ಕತೆಗಳು, 2011, ಪೂಜಾರ ವಿ ಜಿ, ನಿರಂತರ ಪ್ರಕಾಶಣ, ಬೆಂಗಳೂರು

೨. ಪರಿಶೋಧ ಸಂಪುಟಗಳು, 2013, ಪೂಜಾರ ವಿ ಜಿ, ಗೀತಾಶ್ರೀ ಪ್ರಕಾಶನ, ಬೆಳಗಾವಿ

೩. ಲೋಕಾಯತ, 2010, ವೇಣುಗೋಪಾಲ ಟಿ ಎಸ್ ಮತ್ತು ಶೈಲಜಾ, ವಿಸ್ಮಯ ಪ್ರಕಾಶನ, ಮೈಸೂರು

೪. ಇಸ್ಲಾಂ ಹುಟ್ಟು ಮತ್ತು ವಿಕಾಸ, 2008, ಮೂಲ– ಅಸ್ಗರ್ ಅಲಿ ಎಂಜಿನಿಯರ್, ಕನ್ನಡಕ್ಕೆ– ಹಸನ್ ನಯೀಂ ಸುರಕೋಡ, ಲೋಹಿಯಾ ಪ್ರಕಾಶನ, ಬಳ್ಳಾರಿ

೫. ಯಾಪನೀಯ ಸಂಘ, 1999, ನಾವಡ ಎ ವಿ, ಕನ್ನಡ ವಿವಿ, ಹಂಪೆ

೬. ಮಧ್ಯ ಕಾಲೀನ ಕರ್ನಾಟಕ– ಜಿ ಯಸ್ ದೀಕ್ಷಿತ್ ಅವರ ಆಯ್ದ ಬರಹಗಳು, 2008, ಸಂ– ಡಾ. ಹಾವನೂರು ಶ್ರೀನಿವಾಸ, ಕನ್ನಡ ವಿವಿ, ಹಂಪೆ

೭. ಅಂಬೇಡ್ಕರ್ ದೃಷ್ಠಿಯಲ್ಲಿ ದಲಿತರು ಮತ್ತು ಮತಾಂತರ, 2012, ಸೋಸಲೆ ಚಿನ್ನಸ್ವಾಮಿ ಯನ್, ಯಾಜಿ ಪ್ರಕಾಶನ, ಹೊಸಪೇಟೆ

೮. ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಪರಂಪರೆ, 2005, ಚಂದ್ರಶೇಖರಯ್ಯ ಬಿ ಯಮ್, ಸಿವಿಜಿ ಪ್ರಕಾಶನ ಬೆಂಗಳೂರು

೯. ಕರ್ನಾಟಕ ಪುರಾತತ್ವ ï ಕೆಲವು ಅಧ್ಯಯನಗಳು, 2010, ಡಾ. ಮೂರ್ತಿ ನರಸಿಂಹ ಯೆ ವಿ, ಕರ್ನಾಟಕ ಮುಕ್ತ ವಿವಿ, ಮೈಸೂರು

೧೦. ಮುಳುಗುಂದ ನಾಡು : ಒಂದು ಅಧ್ಯಯನ, 2004, ಡಾ. ಹಾಜವಗೋಳ ಧನವಂತ, ಮಹಾದೇವಿ ಪ್ರಕಾಶನ, ಧಾರವಾಡ

೧೧. ಕರ್ನಾಟಕದಲ್ಲಿ ಶವಸಂಸ್ಕಾರ, 2009, ಸಂ–ಕೊಡಗುಂಟಿ ರೇಣುಕಾ, ಬಂಡಾರ ಪ್ರಕಾಶನ, ಮಸ್ಕಿ

೧೨. ಸೋಮನಾಥಪುರ, 2008, ಷೆಟ್ಟರ ಷ, ಅಭಿನವ ಪ್ರಕಾಶನ, ಬೆಂಗಳೂರು

೧೩. ಮಧ್ಯಕಾಲೀನ ಕರ್ನಾಟಕದ ಪಾಳೇಗಾರ ರಾಜ್ಯಗಳು, 2009, ಡಾ. ಯೋಗೀಶ್ವರಪ್ಪ ಡಿ ಯನ್, ಧಾತ್ರಿ ಪುಸ್ತಕ, ಬೆಂಗಳೂರು

೧೪. ಕಲ್ಯಾಣ ಕರ್ನಾಟಕದ ಅರಸು ಮನೆತನಗಳು, 2010, ಡಾ.ಕೊಟ್ರೇಶ್ ಯಂ, ಕನ್ನಡ ವಿವಿ, ಹಂಪೆ

೧೫. ಯಾಜ್ಞವಲ್ಕ್ಯ ಸ್ಮೃತಿ, 2011, ನಾಗೇಶ ಅ, ಸಮಾಜ ಪುಸ್ತಕಾಲಯ, ಧಾರವಾಡ

೧೬. ಧರ್ಮವೆಂಬ ಜೇನುಗೂಡು, 2009, ಆನಂದ್ ವಿ, ಜನರೂಪಿ ಪ್ರಕಾಶನ, ರಾಮನಗರ

೧೭. ಭಾರತದಲ್ಲಿ ಕೋಮುದ್ವೇಷ, 2010, ಚೆನ್ನಬಸಪ್ಪ ಕೋ, ಲೋಹಿಯಾ ಪ್ರಕಾಶನ, ಬಳ್ಳಾರಿ

೧೮. ವಚನಗಳಲ್ಲಿ ಶೈವ ಹಾಗು ವೀರಶೈವ, 1994, ಡಾ. ದಂಡೆ ಜಯಶ್ರೀ, ಕವಿಮಾರ್ಗ ಪ್ರಕಾಶನ, ಕಲಬುರಗಿ

೧೯. ಆಲದ ಮರ (ಪ್ರಾಚೀನ ಸಂಸ್ಕೃತಿ ಸಂಕಥನ), 2012, ತೂಲಹಳ್ಳಿ ಬಸವರಾಜ ಟಿ, ನಿವೇದಿತ ಪ್ರಕಾಶನ, ಬೆಂಗಳೂರು

೨೦. ಕರ್ನಾಟಕ ದೇವಾಲಯ ಕೋಶ ಸಂಪುಟಗಳು, ಸಂ–ಡಾ. ಸುರೇಶ್ ಕೆ ಯಮ್, ಬಡಿಗೇರ್ ವಾಸುದೇವ್, ಡಾ.ಸೋಮಶೇಖರ ಯಸ್ ವೈ, ಕೊಟ್ರೇಶ್ ಮಾಡಗೇರಿ, ಕನ್ನಡ ವಿವಿ, ಹಂಪೆ

೨೧. ಲೋಕಾಯತ– ಚಾರ್ವಾಕ ದರ್ಶನ, 2005, ಕಾಯ್ಕಿಣಿ ಗೌರೀಶ್, ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೨. ಪ್ರಾಚೀನ ಭಾರತದಲ್ಲಿ ಶೂದ್ರರು, 2009, ಪ್ರೊ ಶರ್ಮ ಆರ್ಯಸ್, ಕನ್ನಡಕ್ಕೆ– ಡಾ ಮೂರ್ತಿ ಶ್ರೀನಿವಾಸ ಜೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೨೩. ಕನ್ನಡ–ಕನ್ನಡಿಗ–ಕರ್ನಾಟಕ, 1990, ಸಂ– ಪ್ರೊ. ರಾವ್ ಶೇಷಗಿರಿ ಯಲ್ ಯಸ್, ಡಾ. ಮೂರ್ತಿ ಚಿದಾನಂದ ಯಮ್, ಚಂದ್ರಶೇಖರ್ ಆರ್ ಯನ್, ಸಪ್ನ ಪ್ರಕಾಶನ, ಬೆಂಗಳೂರು

೨೪. ಡಾ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು– ಸಂಪುಟಗಳು,

೨೫. ಅಂಬೇಡ್ಕರ್: ಶೂದ್ರರು ಮತ್ತು ಮಹಿಳೆಯರು, 2010, ಡಾ ಜವರಯ್ಯ ಮ ನ, ಬಹುಜನ ಮಾಧ್ಯಮ ಕೇಂದ್ರ, ಮೈಸೂರು

೨೬. ಪಾಶ್ಚಾತ್ಯ ಚಿಂತಕರ ದೃಷ್ಟಿಯಲ್ಲಿ ಭಾರತೀಯ ಸಮಾಜ, 2010, ಡಾ.ಮದನ್ ಜಿ ಆರ್, ಕನ್ನಡಕ್ಕೆ– ಡಾ. ಮರುಳಸಿದ್ದಯ್ಯ ಯಚ್ ಯಮ್, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೨೭. ಹರಿಹರನಲ್ಲಿ ಜಾನಪದೀಯತೆ, 2010, ಪ್ರೊ. ಶ್ರೀಕಾಂತ ಕೆ ಬಿ, ಪಾವನಗಂಗಾ ಪ್ರಕಾಶನ, ರಾಮನಗರ

೨೮. ನಮ್ಮ ಸುತ್ತಿನ ನಂಬಿಕೆಗಳು, 2011, ಡಾ.ರಾಜೇಂದ್ರ ಡಿ ಕೆ, ಸಾಗರ ಪ್ರಕಾಶನ, ಬೆಂಗಳೂರು

೨೯. ಪ್ರೌಢದೇವರಾಯನ ಶಾಸನಗಳು, 2007, ಸಂ–ಡಾ.ಪರಮಶಿವಮೂರ್ತಿ ಡಿ ವಿ, ಕನ್ನಡ ವಿವಿ, ಹಂಪೆ

೩೦. ಕೊಲ್ಲಾಪುರ ಜಿಲ್ಲೆಯ ಶಾಸನಗಳು, 2000, ಸಂ– ಡಾ. ರಿತ್ತಿ ಶ್ರೀನಿವಾಸ ಮತ್ತು ಕಾರ್ವಿಕರ ಅನಂತ ಬಿ, ಕನ್ನಡ ವಿವಿ, ಹಂಪೆ

೩೧. ಕೃಷ್ಣದೇವರಾಯನ ಶಾಸನಗಳು– ಸಂಪುಟ ಒಂದು ಮತ್ತು ಎರಡು, 2010, ಸಂ– ಡಾ. ಪರಮಶಿವಮೂರ್ತಿ ಡಿ ವಿ, ಕನ್ನಡ ವಿವಿ, ಹಂಪೆ

೩೨. ಕನ್ನಡ ವಿವಿ ಶಾಸನ ಸಂಪುಟಗಳು, ಕನ್ನಡ ವಿವಿ, ಹಂಪೆ

೩೩. ಮತಾಂತರ– ಸತ್ಯಾನ್ವೇಷಣೆ, 2009, ಸಂ– ಚಸರ ಮತ್ತು ಡಾ. ಲಕ್ಷ್ಮೀಪತಿ ಸಿ ಜಿ

೩೪. ಬೆಳೆ ಸಂಪುಟಗಳು, ಡಾ. ಬಿರಾದರ್ ಯಂ ಜಿ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಕಲಬುರಗಿ

೩೫. ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ, 2014, ಷಟ್ಟರ್ ಷ, ಅಭಿನವ ಪ್ರಕಾಶನ, ಬೆಂಗಳೂರು

೩೬. ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ– ಸಂಪುಟ ಒಂದು ಮತ್ತು ಎರಡು, 2012, ಡಾ. ವೀರಣ್ಣ ಸಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೩೭. ಕರ್ನಾಟಕದ ಸೂಫಿಗಳು, 2008, ಡಾ. ತರಿಕೆರೆ ರಹಮತ್, ಕನ್ನಡ ವಿವಿ, ಹಂಪೆ

೩೮. ವಡ್ಡಾರಾಧನೆ, 2009, ಸಂ– ಡಾ. ನರಸಿಂಹಚಾರ್ ಡಿ ಯಲ್, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು

೩೯. ಸಮಗ್ರ ಕನ್ನಡ ಜೈನ ಸಾಹಿತ್ಯ : ನಯಸೇನ ಸಂಪುಟ, 2006, ಸಂ– ಡಾ. ಪಾಟೀಲ್ ಯಸ್ ಪಿ, ಕನ್ನಡ ವಿವಿ, ಹಂಪೆ

೪೦. ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ, 2003, ಡಾ. ಗುಲಕವಾಡ್ ರಾವ್ ವಿಠ್ಠಲ್, ಚೇತನ ಪುಸ್ತಕಾಲಯ, ಮೈಸೂರು

೪೧. ಹೊಸತು ಹೊಸತು, 2007, ಡಾ. ಮೂರ್ತಿ ಚಿದಾನಂದ ಯಮ್, ಹೇಮಂತ ಸಾಹಿತ್ಯ, ಬೆಂಗಳೂರು

೪೨. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ: ಒಂದು ಅಧ್ಯಯನ, ಡಾ. ಕ್ರಿಷ್ಣಪ್ಪ ಜಿ, ಶ್ರೀರಂಗ ಪ್ರಕಾಶನ, ಮೈಸೂರು

೪೩. ಕನ್ನಡ ಸಾಹಿತ್ಯದಲ್ಲಿ ದ್ರೌಪದಿ, 2010, ಡಾ. ಪದ್ಮಾವತಿ ಯಸ್ ವಿ, ಶ್ರೀ ಅನ್ನಪೂರ್ಣ ಪ್ರಕಾಶನ, ಬೆಂಗಳೂರು

೪೪. ಸಮಗ್ರ ಕನ್ನಡ ಜೈನ ಸಾಹಿತ್ಯ: ಬ್ರಹ್ಮಶಿವ ವೃತ್ತವಿಲಾಸ, 2009, ಸಂ– ಪ್ರೊ.ಶಾಸ್ತ್ರಿ ವೆಂಕಟಾಚಲ ಟಿ ವಿ ಮತ್ತು ಪ್ರೊ. ರಾವ್ ರಾಘವೆಂದ್ರ, ಕನ್ನಡ ವಿವಿ, ಹಂಪೆ

೪೫. ಲೋಕಾಯತ ಮತ್ತು ಶೈವ: ಭಾಗ 1, 2013, ತೂಲಹಳ್ಳಿ ಬಸವರಾಜ್ ಟಿ, ನಿವೇದಿತ ಪ್ರಕಾಶನ, ಬೆಂಗಳೂರು

೪೬. ಧರ್ಮ ಮತ್ತು ಮುಕ್ತ ವಿಚಾರ, 2008, ಯಲನಾಡು ಆಂಜನಪ್ಪ, ಕನ್ನಡ ವಿವಿ, ಹಂಪೆ

೪೭. ಶಂ ಭಾ ಕೃತಿ ಸಮೀಕ್ಷೆ, 1992, ಸಂ– ಮಲ್ಲೆಪುರಮ್ ವೆಂಕಟೇಶ ಜಿ, ಬಿಯಮ್‌ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೪೮. ಪ್ರಾಚೀನ ಕನ್ನಡ ಸಾಹಿತ್ಯ–ಸಂಘರ್ಷ, 2009, ಡಾ.ಚಲವಾದಿ ರವಿ, ದೇಸಿ ಪುಸ್ತಕ, ಬೆಂಗಳೂರು

೪೯. ವಿಚಾರ ಕ್ರಾಂತಿಗೆ ಆಹ್ವಾನ, 2011, ಕುವೆಂಪು, ಉದಯರವಿ ಪ್ರಕಾಶನ, ಮೈಸೂರು

೫೦. ತೊಂಡುಮೇವು ಸಂಪುಟಗಳು, 2010, ನಾರಾಯಣ ಕೆ ವಿ, ಬರಹ ಪ್ರಕಾಶನ, ಬೆಂಗಳೂರು

೫೧. ಸಮಗ್ರ ಕನ್ನಡ ಜೈನ ಸಾಹಿತ್ಯ: ದೇವಚಂದ್ರ, 2007, ಸಂ–ಗೌಡ ಲಕ್ಕಪ್ಪ ಯಚ್ ಜೆ, ಕನ್ನಡ ವಿವಿ, ಹಂಪೆ

೫೨. ಹೊಯ್ಸಳ ಅರಸು ಮನೆತನ: ಒಂದು ಸಾಂಸ್ಕೃತಿಕ ಅಧ್ಯಯನ, 2010, ಡಾ. ಹಿರೇಮಠ್ ಗಂಗಾಧರ, ನೀಲಪರ್ವತ ಪ್ರಕಾಶನ, ಧಾರವಾಡ

೫೩. ಕನ್ನಡಾಯಣ, 2011, ಮೂರ್ತಿ ಚಿದಾನಂದ ಯಮ್, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಕಲಬುರಗಿ

೫೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 2014, ಮೂರ್ತಿ ಚಿದಾನಂದ ಯಮ್, ಸಪ್ನ ಪ್ರಕಾಶನ, ಬೆಂಗಳೂರು

೫೫. ಮಿಡುಕು: ಹುಡುಕು– ಚಿದಾನಂದ ಸಮಗ್ರ ಸಂಪುಟ, 2004, ಮೂರ್ತಿ ಚಿದಾನಂದ ಯಮ್, ಸಪ್ನ ಪ್ರಕಾಶನ, ಬೆಂಗಳೂರು

೫೬. ಪೀಠಿಕೆಗಳು ಲೇಖನಗಳು, 2005, ಡಾ.ನರಸಿಂಹಚಾರ್ ಡಿ ಯಲ್, ಡಿವಿಕೆ ಮೂರ್ತಿ ಪ್ರಕಾಶನ, ಮೈಸೂರು

೫೭. ಕನ್ನಡ ಸಾಹಿತ್ಯದಲ್ಲಿ ಶೀವ ರಾಮ ಕೃಷ್ಣ ಮತ್ತು ಅಂಬೇಡ್ಕರ್, 2003, ಡಾ. ಜವರಯ್ಯ ಮ ನ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು

೫೮. ಧರ್ಮ ಸಹಿಷ್ಣು ಕೇಂದ್ರಗಳ ತಾತ್ವಿಕ ನೆಲೆಗಳು ಹಾಗೂ ಪರಂಪರೆ, 2008, ಡಾ. ಯಮನೂರಪ್ಪ ಅಣ್ಣಿಗೇರಿ, ಅಪರಂಜಿ ಪ್ರಕಾಶನ, ಚಿಕ್ಕಮಗಳೂರು

೫೯. ಭಾರತೀಯ ಸಂಸ್ಕೃತಿ ದರ್ಶನ, 2009, ಡಾ. ರಾವ್ ಕ್ರಿಷ್ಣ ಯೆ ಯನ್, ಸಾಗರ ಪ್ರಕಾಶನ, ಬೆಂಗಳೂರು

೬೦. ಕನ್ನಡ ವಿವಿಯ ಚರಿತ್ರೆ ಸಂಪುಟಗಳು, 2010, ಸಂ– ಡಾ. ತಂಬಂಡ ಪೂಣಚ್ಚ ವಿಜಯ್, ಕನ್ನಡ ವಿವಿ, ಹಂಪೆ

೬೧. ಪೂರ್ವ ಕವಿಗಳಿಗೆ ನಮನ, 2006, ಪ್ರೊ.ಗೌಡ ಜವರೇ ಡಿ, ಮೈಸೂರು ವಿವಿ, ಮೈಸೂರು

೬೨. ಪೂರ್ವ ನಿಶ್ಚಿತ ದೃಷ್ಟಿಕೋನ, 2004, ವೀರಭದ್ರಪ್ಪ ಬಿ ವಿ, ರೂಪ ಪ್ರಕಾಶನ, ಮೈಸೂರು

೬೩. ದೇಶ ವಿದೇಶ 1, 2010, ತೇಜಸ್ವಿ ಚಂದ್ರ ಪೂರ್ಣ ಕೆ ಪಿ, ಪುಸ್ತಕ ಪ್ರಕಾಶನ, ಮೈಸೂರು

೬೪. ಚಾತುರ್ವರ್ಣ ಧರ್ಮ ದರ್ಶನ, ಪೋಳ ಕಕ್ಕಯ್ಯ ಕುಮಾರ, ಲೋಹಿಯಾ ಪ್ರಕಾಶನ, ಬಳ್ಳಾರಿ

೬೫. ದೇವಚಂದ್ರನ ರಾಜಾವಳೀ ಕಥೆ–ಸಾಂಸ್ಕೃತಿಕ ಮುಖಾಮುಖಿ, 2003, ಸಂ– ಡಾ.ಇಂದವಾಡಿ ವೆಂಕಟೇಶ್, ಕನ್ನಡ ವಿವಿ, ಹಂಪೆ

೬೬. ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ, 2002, ಭವನದ ಗಾಂಧಿ ಕೇಂದ್ರ, ಬೆಂಗಳೂರು

೬೭.	ಎಫಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು

೬೮.	ದಲಿತರು ಮತ್ತು ಮತಾಂತರ– ಒಂದು ಚಿಂತನೆ, ಡಾ.ಸೋಸಲೆ ಚಿನ್ನಸ್ವಾಮಿ, ಕನ್ನಡ ವಿವಿ, ಹಂಪೆ

೬೯.	ಪ್ರಾಚೀನ ಕನ್ನಡ ಗದ್ಯ ಕೃತಿಗಳ ಸಾಂಸ್ಕೃತಿಕ ಅಧ್ಯಯನ, ಡಾ ಗಣಪತಿ ಬಾಳುಗೋಡು

೭೦.	ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಶಿಕ್ಷಣದ ಸ್ವರೂಪ, ಸಂಶೋಧಕ– ಬಾಬುರಾಯ ದೊರೆ, ಕರ್ನಾಟಕ ಕೇಂದ್ರೀಯ ವಿವಿ, ಕಲಬುರಗಿ

೭೧.	ವಿವಾಹ ಒಂದು ಅಧ್ಯಯನ, 2009, ಚಂಡಾಳ ಗಂಗಾರಾಂ, ಅಪರಂಜಿ ಪ್ರಕಾಶನ, ಮೈಸೂರು

೭೨.	ಕನ್ನಡದೊಳ್ ಭಾವಿಸಿದ ಜನಪದಂ, 2009, ಯಂ ವಿ ವಸು, ಚಿಂತನಾ ಪ್ರಕಾಶನ, ಬೆಂಗಳೂರು

೭೩.	ಆದಿಪುರಾಣ ಗದ್ಯಾನುವಾದ, ಕೆ ಯಲ್ ನರಸಿಂಹ ಶಾಸ್ತ್ರಿ

೭೪.	ಕರ್ನಾಟಕ ಶಾಸನ ಸಂಶೋಧನೆ, 2009, ಸಂ– ಡಾ. ಸೂರಿ ಭಟ್ ಕೆ ಜಿ, ಕನ್ನಡ ವಿವಿ, ಹಂಪೆ

೭೫.	ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, 2018, ಡಾ.ರಾಠೋಡ್ ಪಂಡಿತ ಕೆ

೭೬.	ಪ್ರಾಚೀನ ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷ, ಸಂಶೋಧನಾ ಪ್ರಬಂಧ, ಕನ್ನಡ ವಿವಿ, ಹಂಪೆ

೭೭.	ಕೊಪ್ಪಳ ಜಿಲ್ಲೆಯ ಶೈವ ದೇವಾಲಯಗಳು, ಸಂ– ಶ್ರೀಮತಿ ಸುಶೀಲಾ ದೇಸಾಯಿ, ಮಾರ್ಗ–ಡಾ ಚನ್ನಕ್ಕ ಪಾವಟೆ, ಕರ್ನಾಟಕ ವಿವಿ

೭೮.	ಹರಿಹರ ಕವಿಯ ಸ್ತ್ರೀ ಪಾತ್ರ ದರ್ಶನ, ಸಂ– ಬಿ ಸಿ ಜವಳಿ ಎಂ ಎ, ಮಾರ್ಗ– ಡಾ ಆರ್ ಸಿ ಹಿರೇಮಠ್, ಕರ್ನಾಟಕ ವಿವಿ

೭೯.	ಅಧಿಕಾರ ಮೀಮಾಂಸೆ, ಬರ್ಟೆಂಡ್ ರಸೆಲ್, ಕನ್ನಡಕ್ಕೆ– ಪಿ ವಿ ನಾರಾಯಣ, ವಸಂತ ಪ್ರಕಾಶನ ಬೆಂಗಳೂರು, 2007

೮೦.	ಪ್ರಭುತ್ವ ಮತ್ತು ಜನತೆ, ಡಾ ಕೆ ಮೋಹನಕೃಷ್ಣ ರೈ, ಹಂಪೆ ವಿವಿ, 2017

೮೧.	ಹೊಸ ಶತಮಾನಕ್ಕೆ ಹೊಸ ಪರಿಭಾಷೆಗಳು, ವಿನಯ್ ಲಾಲ್ ಮತ್ತು ಆಶಿಸ್ ನಂದಿ

೮೨. ಧರ್ಮ– ಕನ್ನಡ ವಿವಿ ವಿಶ್ವಕೋಶ, ಸಂ 3

೮೩. ಕಬ್ಬಿಣ ಯುಗ ಮತ್ತು ಧಾರ್ಮಿಕ ಕ್ರಾಂತಿ, ಕನ್ನಡಕ್ಕೆ ನಾ ದಿವಾಕರ, ಚಿಂತನ ಪುಸ್ತಕ ಬೆಂಗಳೂರು, 2015

೮೪. ಸಿಂಧೂ ನಾಗರೀಕತೆ, ಇರ್ಫಾನ್ ಹಬೀಬ್, ಕ– ಪ್ರದೀಪ್ ಬೆಳಗಾಲ್, ಎಚ್ ಎಸ್ ಜೈಕುಮಾರ್

೮೫. ಬೌದ್ಧಧರ್ಮ ದರ್ಶನ, ಆಚಾರ್ಯ ನರೇಂದ್ರ ದೇವ, ಕ– ಹನುಮಂತ ಬಿ ವೈ ಲಲಿತಾಂಬ

# ‘ಪ್ರಾಚೀನ ಕರ್ನಾಟಕದಲ್ಲಿ ಧರ್ಮ ಸಂಘರ್ಷ ಮತ್ತು ಸಮನ್ವಯ’

(ಶಾಸನ ಮತ್ತು ಸಾಹಿತ್ಯ ಅನುಲಕ್ಷಿಸಿ)

(ಪಿಎಚ್.ಡಿ ಪದವಿಗಾಗಿ ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ರಾಮಕೃಷ್ಣ ಜಿ**

ಮಾರ್ಗದರ್ಶಕರು

**ಪ್ರೊ. ಶಿವಗಂಗಾ ರುಮ್ಮಾ**

ನಿರ್ದೇಶಕರು

ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ





CENTRAL UNIVERSITY OF KARNATAKA


ಶಾಸ್ತ್ರೀಯ ಕನ್ನಡ ಅಧ್ಯಯನ ಕೇಂದ್ರ

ಮಾನವಿಕ ಮತ್ತು ಭಾಷಾ ನಿಕಾಯ

ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ

ಕಲಬುರಗಿ ೫೮೫೩೬೭


೨೦೧೯

## ಪರಿವಿಡಿ

**ಅ. ಅಧ್ಯಯನದ ಫಲಿತಗಳು**

ಧರ್ಮ ಎಂಬುದು ಅತಿಸೂಕ್ಷ್ಮ ವಿಷಯವಾಗಿದ್ದು, ಅದು ಎರಡು ಸಂಪೂರ್ಣ ವಿರುದ್ಧವಾದ ಧೃವಗಳನ್ನು ಹೊಂದಿದೆ. ಅವುಗಳೆಂದರೆ ಒಂದು ಧರ್ಮವು ಉತ್ತಮವಾಗಿ ಆಚರಿಸಲ್ಪಟ್ಟಲ್ಲಿ ಮನುಷ್ಯನನ್ನೂ ಸಹ ಅಷ್ಟೇ ಉನ್ನತ ಸ್ಥಾನಕ್ಕೆ ಕೊಂಡ್ಯೊಯ್ಯಬಲ್ಲುದು. ಇದಕ್ಕೆ ವಿರುದ್ಧ ಇನ್ನೊಂದು. ಧರ್ಮವು ಕೋಮುವಾದದ ರೂಪ ತಳೆದಾಗ ಇಡೀ ಸೃಷ್ಠಿಯಲ್ಲಿಯೇ ಮನುಷ್ಯನನ್ನು ಕೀಳು ಸ್ಥಾನಕ್ಕೆ ಇಳಿಸಬಲ್ಲುದು. ಅಂತೆಯೇ ಧರ್ಮದ ಎರಡು ಮುಖಗಳಾದ ಧರ್ಮ ಸಂಘರ್ಷ ಮತ್ತು ಸಮನ್ವಯವನ್ನು ಇದುವರೆವಿಗೂ ಅಧ್ಯಯನ ಮಾಡಲಾಯಿತು. ನಾನು ಕಂಡುಕೊಂಡಂತೆ ಅಧ್ಯಯನದ ಫಲಗಳು ಇಂತಿವೆ–

೧. ಇಸ್ಲಾಂ ಧರ್ಮ ಮಾತ್ರವೇ ಹಿಂದೂ ದೇವಾಲಯಗಳನ್ನು ನಾಶ ಮಾಡಿದ್ದು ಎನ್ನುವ ನನ್ನ ಅರಿಕೆಯಲ್ಲಿ ವಾಸ್ತವ ಇಲ್ಲದ್ದನ್ನು ಕಂಡುಕೊಂಡಿದ್ದು. ಬಹುಶಃ ನನ್ನಂತೆಯೇ ಇನ್ನೂ ಅಸಂಖ್ಯಾತ ಯುವಕರು ಈ ಹಿನ್ನೆಲೆಯಲ್ಲಿಯೇ ಯೋಚಿಸುತ್ತಲೇ ಇದ್ದಾರೆ. ಈ ಅಧ್ಯಯನದ ಸಹಾಯದಿಂದ, ಆ ತಪ್ಪು ಕಲ್ಪನೆಗಳನ್ನು ಕಳೆಯಲು ಸ್ವಲ್ಪವಾದರೂ ಸಹಾಯವಾಗಬಹುದು.

೨. ನಾವು ಕಲ್ಪಿಸಿಕೊಂಡಿರುವ ಮತ್ತು ನಮ್ಮನ್ನು ಹಾಗೆ ಕಲ್ಪಿಸಿಕೊಳ್ಳುವಂತೆ ಮಾಡಿರುವ ಸಾಂಸ್ಕೃತಿಕತೆಯನ್ನೂ ಅದರ ಯಜಮಾನಿಕೆಯನ್ನೂ ಈಗ ಪ್ರಶ್ನಿಸಬಹುದು. ನಾವು ಬದುಕಿರುವುದು ಯಾರ ಪರಂಪರೆ. ನಮ್ಮದೋ ಅಥವಾ ನಮ್ಮದೆಂದು ಭಾವಿಸುವಂತೆ ಮಾಡಿರುವ ಇತರರದ್ದೋ. ಇಂದಿನ ಪ್ರಭುತ್ವವು ಅಂದೂ ಇತ್ತು. ಇಂದಿನ ಪುರೋಹಿತಶಾಹಿಯು ಅಂದೂ ಇತ್ತು. ಮತ್ತು ಅವರು ಬಹುಸಂಖ್ಯಾತರಲ್ಲಿ ತುಂಬುವ ಮೌಢ್ಯವೂ ಸಹ ಅಂದೂ ಇತ್ತು. ಇಂದೂ ಇದೆ. ಬಹುಶಃ ಇಂತಹ ಕೆಲವು ಅಧ್ಯಯನಗಳ ಮೂಲಕ ಆ ಮೂಢತೆಗಳನ್ನು ಸ್ವಲ್ಪವಾದರೂ ಕಡಿಮೆ ಮಾಡಬಹುದು.

೩. ಭಾರತಕ್ಕೆ ಇಸ್ಲಾಮಿನ ಆಗಮನವಾದಾಗ ಮತ್ತು ನಂತರದಲ್ಲಿ ಕ್ರೈಸ್ತರ ಆಗಮನವಾದಾಗ ಅವರು ಮಾಡುವ ಮತಾಂತರಗಳ ಹಿಂದೆ ಕೇವಲ ಆಮಿಷಗಳು ಮಾತ್ರವೇ ನಮ್ಮ ಕಣ್ಣಿಗೆ ಕಾಣುತ್ತಿದ್ದುದು. ಆದರೆ ಪ್ರಾಚೀನ ಕಾಲದಿಂದಲೂ ಬಂದಿರುವ ಈ ಪರಂಪರೆಯು ತನ್ನೊಳಗೆ ಅನೇಕ ಕಾರಣಗಳನ್ನು ಇಟ್ಟುಕೊಂಡು ಇಂದಿಗೂ ಮುಂದುವರೆಯುತ್ತಿದೆ. ಕೆಲವೊಮ್ಮೆ ಆ ಸಮಸ್ಯೆಗಳನ್ನು ಆಯಾ ಧರ್ಮಗಳು ಗುರುತಿಸಬಲ್ಲವಾದರೂ ಅದಕ್ಕೆ ಪರಿಹಾರದ ಪ್ರಯತ್ನವನ್ನು ಮಾಡುವುದು ಕಡಿಮೆಯೇ. ಬಹುಶಃ ಮನುಷ್ಯನನ್ನು ಮನುಷ್ಯತ್ವಕ್ಕೆ ಮತಾಂತರಿಸಬೇಕಾದ ಅತೀ ಜರೂರತ್ತು ಹಿಂದೆಂದಿಗಿಂತಲೂ ಇಂದು ಇದೆ.

೪. ಮಹಿಳೆಯರ ಸ್ಥಾನಮಾನಗಳು ಕಾಲದಿಂದ ಕಾಲಕ್ಕೆ ಬದಲಾದುದನ್ನು ಈ ಮೂಲಕ ಅರಿಯಬಹುದಾಗಿದೆ. ಒಂದು ಧರ್ಮದಲ್ಲಿ ಆ ಕಾಲದಲ್ಲಿ ಮಹಿಳೆಯರಿಗಿದ್ದ ಸ್ಥಾನಮಾನ ಮತ್ತು ಅವರ ಮೂಲಕ ಆಗುತ್ತಿದ್ದ ಅವುಗಳ ಬೇಳವಣಿಗೆಗಳನ್ನು ಸ್ಥೂಲವಾಗಿಯಾದರೂ ಈ ಅಧ್ಯಯನದ ಮೂಲಕ ಅರಿಯಬಹುದಾಗಿದೆ.

೫. ನಮ್ಮ ಪ್ರಾಚೀನ ಧರ್ಮಗಳು ತಾವು ಉಗಮವಾದಾಗ ಎಂತಹ ಆಶಯಗಳನ್ನು ಹೊಂದಿದ್ದವು ಮತ್ತು ನಂತರದಲ್ಲಿ ಅವುಗಳು ಹೇಗೆ ತಮ್ಮ ಮೂಲದಿಂದ ದೂರ ಸರಿಯುತ್ತಾ ಹೋದುವು ಎಂಬುದನ್ನು ತೋರಿಸಲಾಗಿದೆ.

೬. ಮತ ಘರ್ಷಣೆಯಲ್ಲಿ ಕವಿಗಳೂ ಸಹ ಯಾವ ರೀತಿಯಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಅರಿಯಬಹುದು.

೭. ಒಟ್ಟಾರೆಯಾಗಿ ಪ್ರಾಚೀನ ಕರ್ನಾಟಕದಲ್ಲಿ ನಡೆದ ಧರ್ಮ ಕುರಿತ ಸಂಘರ್ಷಗಳೂ ಸಮನ್ವಯಗಳೂ ಮತ್ತು ಇತರೆ ವಿದ್ಯಾಮಾನಗಳನ್ನು ಪರಿಚಯದ ಮಟ್ಟಕ್ಕಾದರೂ ಮುಂದಿನವರಿಗೆ ಓದುವ ಅನುಕೂಲವನ್ನು ಈ ಅಧ್ಯಯನದ ಮೂಲಕ ಮಾಡಿಕೊಡಲಾಗಿದೆ.

**ಆ. ಅಧ್ಯಯನದಿಂದ ಅವಕಾಶಗಳು**

ಇಲ್ಲಿಯವರೆಗಿನ ಈ ಅಧ್ಯಯನದಲ್ಲಿ ಹಲವು ವಿಷಯಗಳನ್ನು ಕುರಿತು ಅಧ್ಯಯನದ ವ್ಯಾಪ್ತಿಗೆ ಒಳಗೊಂಡಂತೆ ನೋಡಲಾಗಿದೆಯಾದರೂ, ಅವನ್ನು ಇನ್ನೂ ಬೇರೆಯದೇ ರೀತಿಯಲ್ಲಿ ಅಧ್ಯಯನ ಮಾಡಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಈ ಮುಂದಿನಂತೆ ನೋಡಬಹುದು.

1. ಕರ್ನಾಟಕದಲ್ಲಿ ಬೌದ್ಧಧರ್ಮದ ಉಗಮ, ವಿಕಾಸ, ಅವನತಿಯ ಕುರಿತಾಗಿ ಇದುವರೆಗೂ ಹಲವು ಲೇಖನಗಳು, ಕೃತಿಗಳು ಬಂದಿವೆಯಾದರೂ ಇನ್ನೂ ಸಮಗ್ರವಾಗಿ ಈ ಕೆಲಸ ಆಗಬೇಕಿದೆ. ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಅಲ್ಲಲ್ಲಿ ಅನೇಕ ಕಡೆ ಜೈನ ಮತ್ತು ಬೌದ್ಧ ಧರ್ಮಗಳೇ ಹೆಚ್ಚು ಎದುರಾಳಿಗಳಾಗಿ ಬರುತ್ತವೆ. ಇದರ ಸಮಗ್ರ ದಾಖಲೆಗಳನ್ನು ದಾಖಲಿಸಿ ಅಧ್ಯಯನ ಮಾಡಬೇಕಿದೆ.

2. ಇಲ್ಲಿ ಮತಾಂತರ ಕುರಿತಂತೆ, ದೇವಾಲಯ ಸಂಘರ್ಷ ಕುರಿತಂತೆ ಮತ್ತು ವಾದ ವಿವಾದಗಳನ್ನು ಕುರಿತು ಕೇವಲ ಉಪಧ್ಯಾಯಗಳಲ್ಲಿ ಮಾತ್ರ ಚರ್ಚಿಸಲಾಗಿದೆ. ಆದರೆ ಇವುಗಳು ಪ್ರತ್ಯೇಕ ಪತ್ಯೇಕವಾಗಿ ಅಧ್ಯಯನ ವಿಷಯಗಳಾಗುವಷ್ಟು ದತ್ತಾಂಶಗಳು ನಮಗೆ ದೊರೆಯುತ್ತವೆ. ಅವನ್ನು ಉಪಯೋಗಿಸಿಕೊಂಡು ಇನ್ನೂ ಹೆಚ್ಚಿನ ಅಧ್ಯಯನವನ್ನು ಮಾಡಿದ್ದೇ ಆದರೆ ಇನ್ನೂ ಸೂಕ್ಷ್ಮವಾಗಿ ಮತ್ತು ಸಮಗ್ರವಾಗಿ ಈ ಧರ್ಮ ಕುರಿತ ಪ್ರಾಚೀನ ವರ್ಣನಾತ್ಮಕ ಇತಿಹಾಸವನ್ನು ನಾವು ಅರಿಯಬಹುದಾಗಿದೆ.

3. ನನ್ನ ಮಿತಿಗೆ ತಿಳಿದಂತೆ ಸಹಿಷ್ಣುತೆಯ ಕುರಿತು ಇನ್ನೂ ಯಾವುದೇ ಸಮಗ್ರ ಅಧ್ಯಯನಗಳು ಬಂದಂತಿಲ್ಲ. ಕೆಲವೊಮ್ಮೆ ನಮಗೆ ಸಿಗುವ ಸಹಿಷ್ಣುತೆಯ ಉದಾಹರಣೆಗಳು ವಾಸ್ತವದಲ್ಲಿ ಅದು ಆಗಿರುವುದೇ ಇಲ್ಲ. ಉದಾಹರಣೆಗೆ ಬುಕ್ಕರಾಯನ ಘಟನೆಯನ್ನು ನಾವು ನೋಡಿಯಾಗಿದೆ. ಹೀಗೆ ಈ ಸರ್ವಧರ್ಮ ಸಮಾನತೆಯೂ ಕೂಡ ಹಲವು ಸಲ ಪ್ರಭುತ್ವದ ಸಾಮರಸ್ಯದ ಭಾಗವಾಗಿ ಬಂದಿರುವುದಿಲ್ಲ. ಹೀಗೆ ಅನೇಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಈ ಧರ್ಮ ಸಮನ್ವಯದ ಇತಿಹಾಸವನ್ನು ನಾವು ಅಧ್ಯಯನ ಮಾಡಬೇಕಿದೆ.

4. ಸಮಕಾಲೀನ ಧರ್ಮಸಂಘರ್ಷದ ಕುರಿತಂತೆ ಸಹ ಅಧ್ಯಯನಗಳ ಅವಶ್ಯಕತೆಯಿದೆ.

## ಇ. ಸಮಾರೋಪ

ಈ ಅಧ್ಯಯನದ ಸಮಾರೋಪದ ಮೊದಲ ಮಾತೆಂದರೆ ಇಲ್ಲಿಯವರೆಗಿನ ಧರ್ಮ ಕುರಿತಾದ ನನ್ನ ಸಂಶೋಧನಾ ಬರವಣಿಗೆಯು ನನ್ನಲ್ಲಿ ತೃಪ್ತಿಯನ್ನು ತಂದಿಲ್ಲ ಎಂಬುದು. ಆ ತೃಪ್ತಿಗೆ ಕಾರಣವಾಗಬೇಕಿದ್ದ ಶ್ರಮವನ್ನು ಮಾಡದಿರುವುದೇ ಇದಕ್ಕೆ ನೇರ ಹೊಣೆ. ಹಾಗೆ ನೋಡಿದರೆ ಇಡೀ ಪ್ರಬಂಧದಲ್ಲಿ ನನ್ನದೆಂಬುದು ಏನಿದೆ ಎಂಬುದೇ ನನಗೆ ಉಳಿದ ಮತ್ತು ಉಳಿಯುವ ಕೊನೆಯ ಪ್ರಶ್ನೆ. ನನ್ನ ಸಮಾಧಾನಕ್ಕಾಗಿ ನಾನೇ ಹೇಳಿಕೊಳ್ಳಬಹುದಾದ ಈ ಆದ್ಯಯನದ ಸಾಧನೆಗಳೆಂದರೆ ಧರ್ಮ ಸಂಘರ್ಷಕ್ಕೆ ಮತ್ತು ಸಮನ್ವಯಕ್ಕೆ ಸಂಬಂಧಿಸಿದ ಘಟನೆಗಳನ್ನು ಒಂದೆಡೆ ಕಲೆಹಾಕಿದ್ದು. ಅದೂ ಪೂರ್ತಿಯಾಗಿ ಅಲ್ಲವೆಂಬುದೇ ನನ್ನ ಭಾವನೆ. ಬರೀ ಮತಾಂತರವನ್ನು ಕುರಿತು ಹೇಳುವುದಾದರೆ, ನನಗೆ ದೊರಕಿದ ಮತಾಂತರದ ಕುರಿತ ದತ್ತಾಂಶದಲ್ಲಿ ಕೇವಲ ಕಾಲುಭಾಗವನ್ನಷ್ಟೇ ನಾನು ಬಳಕೆ ಮಾಡಿಕೊಂಡಿರಬಹುದು. ಕಾರಣ, ಅಧ್ಯಯನದ ಮಿತಿಗೆ ಅಷ್ಟೇ ಸಾಕಾಯಿತು. ಈ ಕಾರಣಕ್ಕಾಗಿಯೇ ಅಧ್ಯಯನದ ಮುಂದಿನ ಅವಕಾಶಗಳನ್ನು ಕುರಿತು ಹೇಳುವಾಗ ನಾನು ಈ ವಿಷಯವನ್ನು ಪ್ರಸ್ತಾಪಿಸಿ, ಒಂದೊಂದು ಅಧ್ಯಾಯಗಳೂ ಒಂದೊಂದು ಅಧ್ಯಯನಗಳು ಆಗಬಲ್ಲವು ಎಂದು ಹೇಳಿದ್ದು. ಮತ್ತು ದತ್ತಾಂಶಗಳನ್ನು ಹೆಚ್ಚು ಹೆಚ್ಚು ಬಳಕೆ ಮಾಡಿಕೊಂಡಷ್ಟು ವಿಷಯದ ಸೂಕ್ಷ್ಮತೆಯೂ ತೆರೆದುಕೊಳ್ಳುತ್ತಾ ಹೋಗುತ್ತದೆ.

ಈ ಅಧ್ಯಯನದಲ್ಲಿ ವಿಶೇಷ ಗಮನ ಸೆಳೆದದ್ದು ಜೈನಧರ್ಮ. ಅದು ಕನ್ನಡನಾಡಿನ ಧರ್ಮವಾಗೇ ರೂಪಗೊಂಡಿದ್ದು ನನಗೆ ಆಶ್ಚರ್ಯಕರ. ಅದು ಇಲ್ಲಿ ಒಂದು ಕಾಲಕ್ಕೆ ತುಂಬಾ ಎತ್ತರವಾದ ಸ್ಥಾನವನ್ನು ತಲುಪಿ ಆ ನಂತರದ ಕೆಲವೇ ದಶಕಗಳಲ್ಲಿ ಅವನತಿಯ ಹಂತವನ್ನು ಮುಟ್ಟಿದ್ದು ನನಗೆ ಮತ್ತೂ ಆಶ್ಚರ್ಯಕರ. ಧರ್ಮದ ಈ ದಿಢೀರ್ ಬೆಳವಣಿಗೆಗಳು ಆಗಾಗ್ಗೆ ಆಗುವಂತವೇ ಆಗಿವೆ. ಆದರೆ ಒಂದು ಕಾಲದಲ್ಲಿ ಬಹುಸಂಖ್ಯಾತ ಧರ್ಮವಾಗಿ ಬಾಳಿದ ಜೈನ, ಇಂದು ಕರ್ನಾಟಕದಲ್ಲಿ ಕಡಿಮೆಯಲ್ಲಿ ಕಡಿಮೆ ಎನ್ನುವಷ್ಟು ಸಂಖ್ಯೆಯನ್ನು ಹೊಂದಿದೆ. ಆ ಕಾಲದಲ್ಲಿ ಜೈನಧರ್ಮವು ಬೇರೆ ಮತಗಳಿಂದ ಹೊಡೆತ ತಿಂದಂತೆ, ಜೈನದ ಕೈಯಲ್ಲಿ ಬೌದ್ಧವು ಹೊಡೆತ ತಿಂದಿದೆ. ಈ ಅಭಿಪ್ರಾಯಕ್ಕೆ ಕಾರಣ, ನಮಗೆ ದೊರಕುವ ಮುಕ್ಕಾಲು ಭಾಗದಷ್ಟು ಬೌದ್ಧ ಸಂಘರ್ಷಗಳು ಜೈನರ ಜೊತೆಗೇನೆ ನಡೆದಿವೆ. ಮತ್ತು ಅದರಲ್ಲಿ ಮುಕ್ಕಾಲು ಪಾಲು ವಿಜಯವು ಜೈನರಿಗೇನೆ ಆಗಿದೆ. ಇದು ಕೇವಲ ಕರ್ನಾಟಕದ ಬೌದ್ಧರಿಗೆ ಮಾತ್ರವೇ ಒದಗಿದ ಪರಿಸ್ಥಿತಿಯಲ್ಲ.

ನೆರೆಯ ತಮಿಳುನಾಡಿನಲ್ಲೂ ನಡೆದಿದ್ದು ಇದೆಯೇ. ಬಹುಶಃ ಆಂದ್ರದಲ್ಲಿ ಭೌದ್ದರಿಗೆ ಇಂತಹ ಹೊಡೆತ ಶಂಕರಾಚಾರ್ಯರಿಂದ ಆಗಿರಬೇಕು ಅನ್ನಿಸುತ್ತದೆ.

ಈ ಅಧ್ಯಯನ ಕುರಿತಂತೆ ಮತ್ತೂ ಒಂದು ಸಮಾಧಾನವಿದೆ. ಅದು ದೊರಕಿರುವ ದಾಖಲೆಗಳನ್ನು ಒಂದು ಸೂತ್ರದಂತೆ ವಿಭಾಗಿಸಿ ಸಂಘರ್ಷದ ವಿವಿಧ ರೂಪಗಳನ್ನು ಹಂಚಿಕೆ ಮಾಡಿದ್ದು. ಮತ್ತು ಈ ಹಿನ್ನೆಲೆಯಲ್ಲಿಯೇ ನನ್ನ ಬೌದ್ಧಿಕತೆಗೆ ಒದಗಿದಷ್ಟು ವಿವರಣೆಯನ್ನೂ ಊಹೆಯನ್ನು ಅದಕ್ಕೆ ಮಾಡಿದ್ದೇನೆ. ಈ ಆದ್ಯಯನದಲ್ಲಿ ಗುರುತಿಸಬಹುದಾದ ಅತಿದೊಡ್ಡ ದೋಷವೆಂದರೆ ಅಡಿಟಿಪ್ಪಣಿಗಳ ವಿಷಯದ್ದು. ಎಷ್ಟೇ ಜಾಗೃತೆಯಿಂದ ಅವನ್ನು ದಾಖಲು ಮಾಡಿಕೊಂಡರೂ ಸಹ, ಕೆಲವು ಕಡೆ ಅವನ್ನು ಸಮರ್ಥವಾಗಿ ನೀಡಲಾಗಿಲ್ಲ. ಅದರೂ ಆದಷ್ಟು ಮಾರ್ಗದರ್ಶಕರಿಗೂ, ವಿಭಾಗಕ್ಕೂ, ವಿಶ್ವವಿದ್ಯಾಲಯಕ್ಕೂ ಇನ್ನಿತರ ಎಲ್ಲವಕ್ಕೂ ನನ್ನ ಕೈಲಾದಷ್ಟು ಪ್ರಾಮಾಣಿಕತೆಯಿಂದ ನನ್ನಿಂದಾಗಬಹುದಾದ ಅನ್ಯಾಯವನ್ನು ತಡೆದಿದ್ದೇನೆ. ಎಲ್ಲಾ ಮತಗಳನ್ನು ದಾಟಿ, ಯಾವ ಮತ್ತಕ್ಕೂ ಪಕ್ಷಪಾತವಾಗದಂತೆ ಇಲ್ಲಿಯ ಬರವಣಿಗೆಯನ್ನು ಮಾಡಿದ್ದೇನೆ. ಜೊತೆಗೆ ಅದೇ ತನವನ್ನು ನನ್ನಲ್ಲಿಯೂ ಈ ಅಧ್ಯಯನದಿಂದ ರೂಪಿಸಿಕೊಂಡಿದ್ದೇನೆ ಎನ್ನುವ ಕೊನೆಯ ಮಾತುಗಳಿಂದ ಈ ಅಧ್ಯಯನಕ್ಕೆ ಅಂತ್ಯ ಹೇಳುತ್ತೇನೆ.